


( ಸಚಿತ್ರ ಮಾಸ ಪುಸ್ತಕಾವಳಿ )

೧೩

ಸುಬೋಧ ಪ್ರಕಟನಾಲಯ,
ಬೆಂಗಳೂರು ನಗರ

# ವಿಷಯಾನುಕ್ರಮಣಿಕೆ

ಹೆಸರು

ಶ್ರೀರಾಮಸಹಾಯಂ

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## ಸಚಿತ್ರ ಮಾಸ ಪುಸ್ತಕಾವಳಿ

---

**ಮುನ್ನುಡಿ: —**

ಸರ್ವಲೋಕೇಶ್ವರನೂ, ಶ್ರೀ ಲಕ್ಷ್ಮೀ ಮನೋಹರನೂ ಆದ ಶ್ರೀಮನ್ನಾರಾಯಣ ಮೂರ್ತಿಯು, ಭೂಭಾರ ಹರಣೋದ್ದೇಶದಿಂದ ದ್ವಾಪರಾಂತ್ಯದಲ್ಲಿ ಶ್ರೀಕೃಷ್ಣ ರೂಪದಿಂದ ಅವತರಿಸಿದ್ದಾಗ್ಗೆ, ಆತನಿಗೆ ಅನುಚರನೂ, ದುಷ್ಟಶಿಕ್ಷಣ, ಶಿಷ್ಟರಕ್ಷಣ, ಧರ್ಮಸ್ಥಾಪನಾದಿ ಕಾರ್ಯಗಳಲ್ಲಿ ಸಹಾಯಕನೂ ಆಗಿದ್ದ-ನರಮಹರ್ಷಿಯ ಅವತಾರ ಮೂರ್ತಿಯಾದ **ಧನಂಜಯನೇ** ನಮ್ಮ ಪ್ರಕೃತ ಕಥಾನಾಯಕನು. ಈತನು ಅರ್ಜುನನೆಂಬ ನಾಮಧೇಯದಿಂದಲೂ ಪ್ರಸಿದ್ಧನಾಗಿರುವನು. ಈತನ ಮತ್ತು ಈತನ ಅಣ್ಣತಂಮಂದಿರಾದ ಯುಧಿಷ್ಠಿರ ಭೀಮಸೇನ-ನಕುಲ ಸಹದೇವರ ಜನನ ಜೀವಿತ ಜಗದ್ಭರಣಾದಿ ಮಹತ್ಕಾರ್ಯಗಳ ಸಮಗ್ರ ಚರಿತ್ರೆಯೂ, ಶ್ರೀ ವೇದವ್ಯಾಸ ಮಹರ್ಷಿಗಳಿಂದ ವಿರಚಿತವಾಗಿ, 'ಪಂಚಮವೇದ' ವೆಂಬ ಗೌರವಕ್ಕೆ ಪಾತ್ರವಾಗಿರುವ ಮಹಾಭಾರತ ಗ್ರಂಥರತ್ನದಲ್ಲಿ ವರ್ಣಿತವಾಗಿದೆ. ಈ ಮಹಾಭಾರತವೂ-ಶ್ರೀ ವಾಲ್ಮೀಕಿ ಮಹರ್ಷಿ ಪ್ರಣೀತವಾಗಿ ಆದಿಕಾವ್ಯವೆಂದು ಪ್ರಸಿದ್ಧಿಹೊಂದಿರುವ ಶ್ರೀಮದ್ರಾಮಾಯಣ ಗ್ರಂಥರತ್ನದಂತೆಯೇ, ಆದ್ಯಂತ ಭಾರತದೇಶದ ಧಾರ್ಮಿಕ ನೈತಿಕ ಸಾಮಾಜಿಕ ರಾಜಕೀಯ ಮುಂತಾದ ವಿವಿಧ ವಿಚಾರಗಳಲ್ಲಿ ಬೋಧಪ್ರದವಾಗಿದ್ದು, ಭಾರತೀಯರ ಸಕಲ ವಿಧ ಲೌಕಿಕ ಜೀವಿತಕ್ಕೂ ಮಾರ್ಗದರ್ಶಕವಾಗಿ ಪ್ರಕಾಶಿಸುತ್ತಿದೆ. ಇಂದು, ಕಾಲಕರ್ಮ ಸಂಯೋಗದಿಂದ, ಪರಜನಾಂಗದ ಕಾಲ್ತುಳಿತಕ್ಕೆ ಪಕ್ಕಾಗಿ, ದಾಸ್ಯಜೀವಿತದಲ್ಲಿ ನೆಗ್ಗಿ ನರಳುತ್ತಿರುವ ಭಾರತೀಯರು, ತಮ್ಮ ಪೂರ್ವಿಕರ ಸಂಸ್ಕೃತಿ ಸ್ವಾತಂತ್ರ್ಯಗಳನ್ನು ಪುನಃ ಗಳಿಸಿ, ಯಶೋವೈಭವಗಳಿಂದ ಮೆರೆಯಬೇಕೆಂದು ಅಪೇಕ್ಷಿಸುವುದಾದರೆ, ಅವರಿಗೆ ಈ ಗ್ರಂಥರತ್ನಗಳೇ ಮಾರ್ಗದರ್ಶಕಗಳಾಗಬೇಕಾಗಿದೆ. ಇವುಗಳ ಪಠನ ಪಾಠನ ವಿಮರ್ಶನಾದಿಗಳೇ ಅವರಲ್ಲಿ ಧೈರ್ಯಸ್ಥೈರ್ಯಾದಿ ದೈವೀಸಂಪತ್ತಿಯನ್ನು ಉದ್ದೀಪನಗೊಳಿಸಿ, ಲೌಕಿಕ ಕಾ

ರ್ಯಕಲಾಪಗಳಲ್ಲಿ, ನಿಶ್ಶಂಕೆ-ನಿರ್ಭಯಗಳಿಂದ ಹೋರಾಡುವಂತೆ ಉತ್ತೇಜ ನವನ್ನಿತ್ತು, ಅವರಿಗೆ ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪು ರುಷಾರ್ಥಗಳನ್ನೂ ದೊರಕಿಸಿ ಕೊಡುವಲ್ಲಿ ಸಹಾಯಕವಾಗಬೇಕಾಗಿದೆ. ಈ ಗ್ರಂಥರತ್ನಗಳಾದರೋ, ಅಮೃತಮಯ ಫಲಗಳಂತಿದ್ದು ಹಿಂಡಿದಷ್ಟೂ ನೂ ತನ ರುಚಿ ನೂತನ ಮಾಧುರ್ಯಗಳನ್ನುಂಟಾಗಿರುವ ರಸವಿಶೇಷಗಳನ್ನು ಸ್ರ ವಿಸುವುದರಲ್ಲಿ ಜಗದ್ವಿಖ್ಯಾತವಾಗಿರುವುವು.

ಇವುಗಳಲ್ಲಿ ಶ್ರೀಮನ್ಮಹಾಭಾರತ ಕಥಾನಾಟ್ಯರಂಗದಲ್ಲಿ ಅಭಿನಯಿಸಿದ ಅನಂತ ವ್ಯಕ್ತಿಗಳಲ್ಲಿ ಅತಿ ಮುಖ್ಯರಾದವರು ಪಂಚಪಾಂಡವರು. ಅವರಲ್ಲಿ ತ್ರಿಲೋಕ ವೀರನೆಂದೂ ಅದ್ವಿತೀಯ ಧನುರ್ವೇದ ಮೂರ್ತಿಯೆಂದೂ ಪ್ರ ಖ್ಯಾತನಾದವನು ಧನಂಜಯನು. ಪ್ರಕೃತ ಚರಿತ್ರೆಯಲ್ಲಿ, ಮಹಾಭಾರತ ಗ್ರಂಥದ ಅತಿವಿಸ್ತಾರ ಪ್ರದೇಶದಲ್ಲಿ ಅಲ್ಲಲ್ಲ ಚದರಿ ಬಂದಿರುವ ಆತನ ಜೀವಿತ ಚರಿತ್ರ ಭಾಗಗಳನ್ನು ಏಕತ್ರ ಸಂಗ್ರಹಿಸಿಕೊಡಲು ಬಯಸಿದ್ದೇವೆ. ಪಾಂ ಡವ ಸಂಬಂಧವಿಲ್ಲದ ಮಹಾಭಾರತ ಕಥೆಯಾಗಲೀ, ಅಥವಲ್ಲ ಅರ್ಜುನನ ಸಂಬಂಧವಿಲ್ಲದ ಪಾಂಡವರ ಕಾರ್ಯಕಲಾಪಗಳಾಗಲೀ ವಿವರಿಸಲ್ಪಡುವುದು ಅಸಂಭವವಾದುದರಿಂದ, ಧನಂಜಯ ವಿಷಯಕವಾದ ಈ ಕಥೆಯಲ್ಲಿ, ಸಮ ಗ್ರ ಭಾರತಕಥೆಯೂ ಸಿಂಹಾವಲೋಕನನ್ಯಾಯದಿಂದಲಾದರೂ ಬಂದೇ ತೀರಬೇಕಾಗಿದೆ. ಅತಿವಿಸ್ತಾರವಾದ ಆ ಗ್ರಂಥರಾಜದಲ್ಲಿ ವಿವರಿಸಲ್ಪಟ್ಟ ವಿಚಾರಗಳನ್ನು ಇಂತಹ ಒಂದು ಚಿಕ್ಕ ಗ್ರಂಥರೂಪಕ್ಕೆ ಇಳಿಸುವಲ್ಲಿ, ನ ಮ್ಮಂತಹ ಅಪ್ರಬುದ್ಧರ ಲೇಖನಿಯಿಂದ ಹಲವು ಲೋಪಗಳು ಉಂಟಾಗು ವುದು ಸ್ವಾಭಾವಿಕ. ಆದರೂ, ಸರ್ವಚೇತನ ಸ್ವರೂಪನೂ, ಸರ್ವ ಕರ್ತೃ ವ್ಯೂ, ನಿಯಾಮಕನೂ ಆದ ಲೋಕಗುರು ಶ್ರೀಕೃಷ್ಣಮೂರ್ತಿಯ ಪಾದಾರ ವಿಂದಗಳನ್ನು ಹೃದಯದಲ್ಲಿಟ್ಟು, ಕರ್ನಾಟಕ ಜನತಾರೂಪೀ ಜನಾರ್ದನನ ಸೇವೆಯ ಈ ಕಾರ್ಯಕ್ಕೆ ನಿಶ್ಶಂಕೆಯಿಂದ ಹೊರಟುದಾಗಿದೆ. ಇದನ್ನು ನಿ ರ್ವಿಘ್ನವಾಗಿ ಕೊನೆಗಾಣಿಸುವುದಾದರೂ ಆತನ ಪಾದಕ್ಕೇ ಸೇರಿದೆ.

ಅದ್ಯಂತ ಭಾರತದೇಶದ ವಿವಿಧ ಭಾಗಗಳಲ್ಲಿ ಅನಾದಿಕಾಲದಿಂದ ಪ್ರಸಿ ದ್ಧರಾಗಿ ಬಂದ ಗ್ರಂಥಕರ್ತರು ಕವಿಗಳು ಚಿತ್ರಕಾರರು ಲೇಖಕರು ಮುಂ ತಾದ ಅನೇಕಾನೇಕ ಸಾಹಿತ್ಯ ಸೇವಕರಮೇಲೆ ಆಧುನಿಕ ವಿಮರ್ಶಕ ಮಹಾ

ಶಯರಲ್ಲಿ ಕೆಲವರು ಹೊರಿಸುವ ಅಪರಾಧವೊಂದುಂಟು. ಅದೇನೆಂದರೆ, ಅಂತಹ ಗ್ರಂಥಕರ್ತ ಚಿತ್ರಕಾರ ಕವಿ-ಲೇಖಕರಲ್ಲನೇಕರು ಈ ಭಾರತ ರಾಮಾಯಣ ಭಾಗವತಾದಿ ಕೇವಲ ಪುರಾಣಗಳಲ್ಲಿ ಹೇಳಲ್ಪಟ್ಟ ಕಥಾ ಭಾಗಗಳನ್ನಲ್ಲದೆ, ಅನ್ಯ ಕಥಾವಸ್ತುವನ್ನು ಉಪಯೋಗಿಸುತ್ತಿಲ್ಲವೆಂಬುದೇ ಆ ಅಪರಾಧವು. ಮೇಲ್ಕಂಡ ಪುರಾಣೋಕ್ತ ಕಥಾವಸ್ತುಗಳಿಗೆ ಪ್ರತಿಯಾಗಿ ಆಧುನಿಕ ನರನಾರಿಯರ, ಸ್ಥಳ ವಿದ್ಯಮಾನಗಳ ವಿಚಾರಗಳನ್ನು ಕುರಿತ ಲೇಖನ ಕಥೆ ಕವಿತೆಗಳು ಬರೆಯಲ್ಪಟ್ಟರೆ, ಅವು ಪ್ರಯೋಜಕವಾಗಿರುವುವೆಂಬುದು ಅವರ ವಾದ. ಅಲ್ಲದೆ, ಪುರಾಣಗಳಲ್ಲಿ ಹಲವು ಅಮಾನುಷ ಚರ್ಯೆಗಳು ನಡೆದ ವರ್ಣನೆಗಳೂ ಉಂಟಲ್ಲವೆ! ಅದೊಂದು ಅವರ ಅಕ್ಷಮ್ಯ ಮಹಾಪಾತಕ. ಕೇವಲ ಭೌತಿಕ ವಿಜ್ಞಾನ ಶಾಸ್ತ್ರದಿಂದ ಸಾಧ್ಯವೆನಿಸಲ್ಪಟ್ಟಿರುವುದು ಮಾತ್ರ ಸತ್ಯ; ಮಿಕ್ಕುವೆಲ್ಲವೂ ಮಿಥ್ಯವೆಂದು ಭಾವನೆಯಿರುವ ಈ ಕಾಲದವರು, ಮೇಲ್ಕಂಡ ಪುರಾಣೋಕ್ತ ವಿಚಾರಗಳೆಂದರೆ ಅದೊಂದು ಗೊಡ್ಡುಹರಟೆ ಎಂದು ಅಲೆಗಳೆದು ಬಿಡಲು ಅವಕಾಶವೊದಗಿದೆ. ಹಲವು ಪುರಾಣೋಕ್ತವಿಚಾರಗಳು ಅಮಾನುಷವೆಂದು ನಮಗೆ ತೋರುವುವಾದರೂ ಅವು ದೃಷ್ಟಿಭೇದ ಪಾತ್ರಭೇದ, ಕಾಲಭೇದ, ದೇಶಭೇದ ಮುಂತಾದುವುಗಳನ್ನು ಅನುಸರಿಸಿ ವಿವಿಧ ರೀತಿಯಿಂದ ಉಪಯೋಗವಾಗಲು ಪರಿಚಿತವಾದ ಲೌಕಿಕವಿಜ್ಞಾನ ಭಾಂಡಾಗಾರವೆಂಬಂಶವನ್ನು ವಿಚಾರಜ್ಞರಲ್ಲದೆ ಇತರರು ಅರಿಯಲಾರರು. ಈ ವಿಚಾರವು ಗ್ರಂಥಮಾಲೆಯ ಹಲವು ಪುಸ್ತಕಗಳಲ್ಲಿ ಈವರೆಗೇ ವಿಸ್ತಾರವಾಗಿ ಚರ್ಚಿಸಲ್ಪಟ್ಟಿರುವುದರಿಂದ, ಇಲ್ಲಿ ಪುನಃ ಚರ್ವಿತಚರ್ವಣವೆನ್ನಿಸುವಂತೆ ಆ ವಿಷಯವನ್ನೇ ಎತ್ತಬಯಸುವುದಿಲ್ಲ. ಆದರೆ ಒಂದು ವಿಚಾರವನ್ನು ಮಾತ್ರ ಇಲ್ಲಿ ನಮ್ರತೆಯಿಂದ ವಿಜ್ಞಾಪಿಸಲೆಳಸುತ್ತೇವೆ. ಈಗ್ಗೆ ಎರಡು ಮೂರು ನಾಲ್ಕಾರು ತಲಾಂತರಗಳ ಹಿಂದೆ ಕೇವಲ ಅಸಾಧ್ಯವೆನ್ನಿಸಿದ್ದ ಹೊಗೆಬಂಡಿ 'ಮೋಟಾರು'ಗಾಡಿ, ಆಕಾಶವಿಮಾನ ಮುಂತಾದ ಪ್ರಯಾಣಸಾಧನಗಳೂ ವಿದ್ಯುಚ್ಛಕ್ತಿ, ತಂತೀವಾರ್ತಾಸಾಧನ, ತಂತೀವಿರಹಿತವಾರ್ತಾಸಾಧನ, 'ರೇಡಿಯೋ' ಎಂಬ ವಸ್ತುವಿಶೇಷದಿಂದ ನಡೆವ ಹಲವು ಆಶ್ಚರ್ಯಕಾರ್ಯಗಳೂ ಅಲ್ಲದೆ ವೈದ್ಯ, ಜ್ಯೋತಿಷ, ಶಿಲ್ಪಶಾಸ್ತ್ರ, ಭೂಗರ್ಭಶಾಸ್ತ್ರ ಮುಂತಾದುವುಗಗಳಲ್ಲಿ ಈಗ ನಡೆದಿರುವ ಅಭಿವೃದ್ಧಿಯೂ, ಆಯಾ ಶಾಸ್ತ್ರಜ್ಞರಿಗೆ ಸಾಧ್ಯವೆನ್ನಿ

ಸಬಹುದಾದರೂ ನಮ್ಮಂತಹ ಸರ್ವಸಾಮಾನ್ಯಲೋಕವು ಅವುಗಳನ್ನು ಕೇವಲ ಅಮಾನುಷವೆಂದೇ ಭಾವಿಸುವುದಲ್ಲವೇ? ಮೇಲೆ ಹೇಳಿದ ಇಷ್ಟು ಬಗೆಯ ಅಭಿವೃದ್ಧಿಯೂ ಸಹ ಕೇವಲ ಭೌತಿಕ ತತ್ವಶಾಸ್ತ್ರದ ಅಭಿವೃದ್ಧಿಮಾತ್ರವಾಗಿದೆ ಎಂಬುದನ್ನು ಯಾರೂ ಮರೆಯಬಾರದು. ಪಾಂಚಭೌತಿಕ ಸಂಬಂಧವುಳ್ಳ ಯಾವ ವಸ್ತುವಾದರೂ ಶಾಶ್ವತವಾಗಿ ಏಕರೂಪದಲ್ಲೇ ಇರಲಾರದೆಂಬುದೂ - ಅರ್ಥಾತ್ ಬಾಹ್ಯದೃಷ್ಟಿಗೆ ನಾಶವಾಗುವುದೆಂಬುದೂ ಪ್ರಕೃತಿಸಾಮಾನ್ಯವಿಚಾರವಾದುದರಿಂದ, ವಿಚಾರ ತತ್ಪರರಾದ ಆರ್ಯಮಹರ್ಷಿಯರು ಬಹು ದೀರ್ಘಕಾಲದ ತಮ್ಮ ವಿವಿಧಾನುಭವಗಳಿಂದ ಭೌತಿಕವಸ್ತುಗಳ ನಿಶ್ಚಯತತ್ವವನ್ನು ಕಂಡುಹಿಡಿದು, ಅಶಾಶ್ವತವಾದ ಅವುಗಳ ವಿಚಾರದಲ್ಲಿ ಹೊತ್ತುಗಳೆವುದು ವ್ಯರ್ಥವೆಂದು ಭಾವಿಸಿ, ಅವುಗಳಿಗಿಂತಲೂ, ಉನ್ನತವೂ ಅವಿನಾಶಿಯೂ, ಶಾಶ್ವತವೂ ಎನ್ನಿಸಿದ ಆಧ್ಯಾತ್ಮಿಕ ತತ್ವಗಳ ಶೋಧನ ವಿಚಾರದಲ್ಲಿ ಪರಿಶ್ರಮ ನಡೆಯಿಸಿದರು. ಈಗಿನ ವೈಜ್ಞಾನಿಕ ವಿಚಕ್ಷಣರಂತೆಯೇ ಆಗಲೂ ಆಧ್ಯಾತ್ಮಿಕ ವಿಜ್ಞಾನದಲ್ಲಿ ಸಿದ್ಧಿಯನ್ನು ಹೊಂದಿದವರಾದರೂ ಕೇವಲ ವಿರಳರಾಗಿಯೇ ಇದ್ದರೆಂಬುದಕ್ಕೆ ಸಂಶಯವಿಲ್ಲ. ಅವರ ಹಲವು ಕೃತಿಗಳಾದರೂ, ಈಗಿನ ಭೌತಿಕ ತತ್ವಶೋಧನೆಯ ವಿಚಾರಗಳು ಜನಜನಿತವಾಗುವಂತೆಯೇ, ಗ್ರಂಥಸ್ಥವಾಗಿ ಜನಸಾಮಾನ್ಯರಲ್ಲಿ ಪ್ರಚಾರಗೊಳ್ಳುತ್ತಿದ್ದುವು. ಈಗಿನ - ಮೇಲೆ ಹೇಳಿದ ಹಲವು ವೈಜ್ಞಾನಿಕ ವಿಚಿತ್ರ ಕಾರ್ಯಗಳನ್ನು ನಾವು ಮಾಡಲಾರೆವಾದರೂ ಕೇಳಿ ಆಶ್ಚರ್ಯಪಡುತ್ತೇವಲ್ಲವೆ? ಸಾಧ್ಯವೆಂದು ವಾದದಿಂದ ಸಾಧಿಸಲು ಯತ್ನಿಸುತ್ತೇವಲ್ಲವೆ? ಪ್ರತ್ಯಕ್ಷ ನಾವೇ ಅವುಗಳನ್ನು ಸರ್ವಥಾ ಮಾಡಲಾಗದಿದ್ದರೂ, ಮಾಡುವುದು ಸಾಧ್ಯವೆಂದು ಅಭಿಮಾನದಿಂದ ಪ್ರತಿಕಕ್ಷಿಯನ್ನು ವಾಗ್ವಾದದಿಂದ ಹಿಮ್ಮೆಟ್ಟಿಸಲು ಹವಣಿಸುವೆವಲ್ಲವೆ? ಹಾಗೆಯೇ, ನಮ್ಮದೆಂಬ ಅಭಿಮಾನವೊಂದು ನಮ್ಮಲ್ಲಿ ಬೇರೂರಿತೆಂದರೆ, ಮೇಲ್ಕಂಡ ಅಮಾನುಷವೆಂದು ತೋರುವ ಪುರಾಣೋಕ್ತ ವಿಚಾರಗಳಾದರೂ ಹೇಗೆ ನಿಶ್ಚಯವೆಂಬುದನ್ನು ಕಂಡುಹಿಡಿಯಲು ಮಾರ್ಗಗಳು ಗೋಚರಿಸುವುವು. ಅನೇಕ ಗೂಢವಿಚಾರಗಳ ಅಂತರಾರ್ಥಗಳೇನೆಂಬುದು ಗೊತ್ತಾಗುವುದು. ಇದನ್ನು ವ್ಯರ್ಥಾಲಾಪವೆನ್ನಲಾಗದು. ಅಭಿಮಾನ, ನಂಬಿಕೆ, ಶ್ರದ್ಧೆಗಳಿಗೆ ಅಸಾಮಾನ್ಯಶಕ್ತಿ ಸಾಮರ್ಥ್ಯಗಳಿವೆ.

ಇನ್ನು ಭಾರತೀಯ ಗ್ರಂಥಕಾರರೂ, ಕವಿಗಳೂ, ಚಿತ್ರಕಾರರೂ, ಪುರಾಣಗಳನ್ನೇ ಅನುಸರಿಸಿ ಏಕೆ ತಮ್ಮ ಕೃತಿಗಳನ್ನು ರಚನೆಮಾಡುತ್ತ ಬಂದರೆಂಬುದಕ್ಕೆ ಉತ್ತರವನ್ನು ಪ್ರತ್ಯೇಕ ಹೇಳಬೇಕಾದುದು ಅನವಶ್ಯಕವು. ಭಾರತದೇಶದ ಧ್ಯೇಯವು, ಆಧ್ಯಾತ್ಮಿಕ ತತ್ವಸಾಧನೆಯಲ್ಲದೆ. ಕೇವಲ ಭೌತಿಕ ವಿಷಯವಿಮರ್ಶನೆಯಲ್ಲ. ಲೌಕಿಕವಾಗಿ ನಡೆಯಿಸುವ ಯಾವ ವಿಚಾರವಾದರೂ, ಅಭಿವೃದ್ಧಿ ಕಾರ್ಯವಾದರೂ ಅದು ಪಾರಲೌಕಿಕ ಪುರುಷಾರ್ಥ ಸಾಧನೆಗೆ ಒಂದು ಅಂಗವಾಗಿರಬೇಕೆಂಬುದಲ್ಲದೆ, ತಮ್ಮ ಆ ಕಾರ್ಯದ ಆದಿಯೂ ಅಂತ್ಯವೂ ಫಲಪ್ರಯೋಜನಗಳೂ ಇಲ್ಲಿಯೇ ಹುಟ್ಟಿ ಇಲ್ಲಿಯೇ ನಶಿಸಬೇಕೆಂಬುದಲ್ಲ. ಕವಿಗಳ ಗ್ರಂಥಕರ್ತರ ಮತ್ತು ಚಿತ್ರಕಾರರ ವೃತ್ತಿ ಧರ್ಮವಾದರೂ ಏನು? ಜನಾಂಗದೆದುರಿಗೆ ಅದರ ಧ್ಯೇಯವೇನೆಂಬುದನ್ನು ತಂದಿಟ್ಟು-ಆ ಧ್ಯೇಯಸಾಧನೆಗೆ ಉಪಾಯಗಳನ್ನು ಸೂಚಿಸುವುದೇ ಅಲ್ಲವೆ? ಆದಿಕಾಲದಿಂದಲೂ, ಈ ಕಾರ್ಯವನ್ನು ಶ್ರದ್ಧಾಪೂರ್ವಕ ಮಾಡಿಕೊಂಡು ಬಂದ ಅವರು ಜನಾಂಗಕ್ಕೆ ದ್ರೋಹಿಗಳೋ ಸ್ನೇಹಿತರೋ?

ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯ ಮೂಲೋದ್ದೇಶವಾದರೂ, ವಿವಿಧ ಲೌಕಿಕ ಪಥಗಳನ್ನು ಕುರಿತು ಭಾರತದೇಶದ ಧ್ಯೇಯವೇನೆಂಬುದನ್ನು, ಸದ್ಯಃ ಕರ್ಣಾಟಕ ಜನಾಂಗದೆದುರಿಗೆ ಇಡುವುದೇ ಆಗಿದೆ. ಆದುದರಿಂದ ಆಸ್ತಿಕ ಮಹಾಶಯರೂ ಭಾಷಾಭಿಮಾನಿಗಳೂ, ನಮ್ಮ ಈ ಸೇವಾಕಾರ್ಯಕ್ಕೆ ಸ್ವಹಸ್ತ ಪರಹಸ್ತ ಯೋಗ್ಯ ಪ್ರೋತ್ಸಾಹವನ್ನಿತ್ತು, ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ<br>
ತಾ|| ೩೧-೧-೧೯೨೮



ಇತಿ ಸುಜನ ವಿಧೇಯ<br>
**ಯಂ. ರಾಮರಾವ್**

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ
ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ||

— ಗೀತಾ

-+ ಶ್ರೀರಾಮಸಹಾಯಂ +-

## ಅದ್ವಿತೀಯ ಧನ್ವಿ - ತ್ರಿಲೋಕವೀರ

# ಧ ನ ಂ ಜ ಯ



**ಅಧ್ಯಾಯ ೧.** **'ಕುರು-ಪಾಂಡು ಸಂತಾನ'**

ಅನಾದಿ ಕಾಲದಿಂದಲೂ, ಪುಣ್ಯಭೂಮಿಯೆಂದು ಪ್ರಸಿದ್ಧವಾದುದು ನಮ್ಮ ಮಾತೃಭೂಮಿಯಾದ ಈ ಭಾರತದೇಶವು. ಇದರ 'ಪುಣ್ಯಭೂಮಿ' ಎಂಬ ಕೀರ್ತಿಯನ್ನು, ಪವಿತ್ರ ಚರಿತ್ರರಾದ ಹಲವು ಮಂದಿ ಮಹನೀಯರು ತಮ್ಮ ಕೃತಿಗಳಿಂದ ಸಾರ್ಥಕಗೊಳಿಸಿಕೊಂಡು ಬಂದರು. ಹಲವು ಕೋಟಿ ಮಾನವರ ನಿವಾಸಸ್ಥಾನವಾದ ಈ ದೇಶವು, ವಸಿಷ್ಠ ವಿಶ್ವಾಮಿತ್ರ ಭಾರದ್ವಾಜಾದಿ ಕೆಲಮಂದಿ ಮಹರ್ಷಿಗಳು ತಪಸ್ಸು ಮಾಡಿದುದರಿಂದ ಮಾತ್ರ ಪುಣ್ಯಭೂಮಿಯೆನಿಸಲಿಲ್ಲ. ಧ್ರುವ ಪ್ರಹ್ಲಾದ ಮಾರ್ಕಂಡೇಯಾದಿ ಹತ್ತೆಂಟುಮಂದಿ ಭಕ್ತ ಶಿರೋಮಣಿಗಳು ಭಗವಂತನನ್ನು ಪ್ರತ್ಯಕ್ಷೀಕರಿಸಿಕೊಂಡುದರಿಂದ ಮಾತ್ರ ಪುಣ್ಯಭೂಮಿಯೆನಿಸಲಿಲ್ಲ. ಅನಸೂಯೆ, ಸೀತೆ, ಸಾವಿತ್ರಿ ಮುಂತಾದ ಹತ್ತಿಪ್ಪತ್ತು ಮಂದಿ ಪತಿವ್ರತೆಯರು ಇಲ್ಲಿ ವಾಸಿಸಿದರೆಂದು ಮಾತ್ರ ಇದು ಪುಣ್ಯಭೂಮಿಯೆನಿಸಿ ಮೆರೆದುದಲ್ಲ. ಅಲ್ಲ - ಹರಿಶ್ಚಂದ್ರಾದಿ ಒಬ್ಬರಿಬ್ಬರು ಸತ್ಯಸಂಧರೂ, ಶಿಬಿಕರ್ಣಾದಿ ನಾಲ್ಕಾರು ಮಂದಿ ದಾನಶೂರರೂ ಮಾತ್ರವೇ ಇದಕ್ಕೆ ಆ ಕೀರ್ತಿಯನ್ನು ತಂದಿತ್ತವರಲ್ಲ. —ಒಂದು ಕೆರೆಯಲ್ಲಿ ಮನೋಹರ ಕಮಲಗಳಿರಬಹುದು. ವಿವಿಧ ಜಲಚರಗಳಿರಬಹುದು, ಅದರ ನೀರು ದ್ರವರೂಪವನ್ನು ಹೊಂದಿದ ಸ್ಫಟಿಕಶಿಲೆಯೋ ಎಂಬಂತೆ ಸ್ವಚ್ಛವಾಗಿರಬಹುದು, ರುಚಿಯಾಗಿರಬಹುದು. ಆದರೆ ಅವುಗಳಿಂದ ಮಾತ್ರವೇ ಆ ಕೆರೆಗೆ ಒಳ್ಳೆಯ ಹೆಸರು ಬರಲಾರದು. - ಏಕೆಂದರೆ, ಅಷ್ಟು

ಉತ್ತಮ ವಸ್ತುಗಳೂ ವಿನಾಶವನ್ನೈದದಂತೆ, ರಕ್ಷಿಸಿಕೊಂಡಿರಲು ಅದರ ಕಟ್ಟೆಯೊಂದು ಭದ್ರವಾಗಿರಬೇಕಾದುದು ಅತ್ಯಾವಶ್ಯಕವು. ಅದು ಭದ್ರವಾಗಿಲ್ಲವಿದ್ದರೆ, ಅದರಲ್ಲಿ ಶುಭ್ರವಾದ ರುಚಿಯಾದ ಆ ನೀರೂ ನಿಲ್ಲಲಾರದು; ಜಲಚರಗಳೂ ಬದುಕಲಾರವು; ಕಮಲಗಳೂ ಪುಷ್ಪಿಸಿ ಪರಿಮಳವನ್ನೀಯಲಾರವು. ಕಟ್ಟೆಯೊಂದು ಭದ್ರವಾಗಿರದ ಕಾರಣದಿಂದ ಕೆರೆಯು ನೀರೆಲ್ಲವೂ ಹರಿದು ವ್ಯರ್ಥವಾಗಿ ಹೋದೊಡನೆಯೇ ಕೆರೆಯಿದ್ದ ರಮ್ಯವಾದ ಆ ಪ್ರದೇಶವೆಲ್ಲವೂ, ಕೆಸರು ಕೊಚ್ಚೆ ದುರ್ವಾಸನೆಗಳಿಂದ ಅಸಹ್ಯವೆನ್ನಿಸಿ ಯಾರನ್ನೂ ಬಳಿ ಸೇರಿಸದಂತೆ ಆಗುವುದಲ್ಲವೆ? ಹಾಗೆಯೇ, ನಮ್ಮ ಈ ಭಾರತದೇಶ ಮಾತ್ರವಲ್ಲ-ಪೃಥ್ವಿಯ ಯಾವುದೊಂದು ದೇಶವಾದರೂ ಚಿತ್ರವಿಚಿತ್ರವಾದ ಕಟ್ಟಡಗಳಿಂದಲೂ, ಅಂಗಡಿ ಮುಂಗಟ್ಟುಗಳಿಂದಲೂ, ಶೃಂಗಾರವಾದ ರಾಜಬೀದಿಗಳಿಂದಲೂ, ವನ ಉಪವನಗಳಿಂದಲೂ, ವಿವಿಧ ವಾಹನ ವಿಶೇಷಗಳಿಂದಲೂ, ವಿಲಾಸಿಗಳಾದ ಸ್ತ್ರೀ ಪುರುಷರಿಂದಲೂ ನೇತ್ರಾನಂದಕರವಾದ ಹಲವು ನಗರರಾಜಗಳಿಂದಲೂ ಕೂಡಿ, ಶೃಂಗಾರಸದನವೋ, ಅನ್ವರ್ಥ ಭೋಗವತಿಯೋ ಎಂಬಂತೆ ತೋರಬಹುದು. ಆ ದೇಶವು ಅಮಿತೈಶ್ವರ್ಯ ಸಂಪನ್ನರಾದ ವರ್ತಕರಿಂದ ಕೂಡಿರಬಹುದು, ವಿಶೇಷ ಕೈಗಾರಿಕೆ ಕಾಮಗಾರಿಗಳಿಗೆ ಆಶ್ರಯಸ್ಥಾನವಾಗಿರಬಹುದು. ಮಾತ್ರವಲ್ಲ - ಅಲ್ಲಿ ಜನ ಸಮೂಹವನ್ನು ಬುದ್ಧಿಶಾಲಿಗಳನ್ನಾಗಿ ಮಾಡುವುವೆಂದು ಪ್ರಖ್ಯಾತವಾದ ಹಲವು ವಿದ್ಯಾಲಯಗಳೂ ಇರಬಹುದು. ಆದರೆ ಅವುಗಳಿಂದ ಮಾತ್ರವೇ ಆ ದೇಶಕ್ಕೆ ಕೀರ್ತಿಬರಲಾರದು. ಅಲ್ಲಿ ಇವೆಲ್ಲವುಗಳೊಂದಿಗೆ, ನ್ಯಾಯಾನ್ಯಾಯ ವಿಮರ್ಶೆ ಮಾಡಿ ದುಷ್ಟಶಿಕ್ಷಣೆ ಶಿಷ್ಟರಕ್ಷಣೆಗಳಿಂದ ಧರ್ಮವನ್ನು ಸ್ಥಾಪಿಸಿ ಪ್ರಜೆಗಳ ಧನ ಮಾನ ಪ್ರಾಣಗಳನ್ನು ಸಂರಕ್ಷಿಸಬಲ್ಲ ಪ್ರಭುವೂ ಇರಬೇಕು. ಹಾಗೆ ರಕ್ಷಣೆಯಿಲ್ಲದ ರಾಜ್ಯದಲ್ಲಿ, ಎಂತಹ ಸೌಭಾಗ್ಯವಿದ್ದರೂ ಅದು ಹುಚ್ಚನ ಕೈಯಲ್ಲಿನ ಕತ್ತಿಯಂತೆ ಪರರಿಗೆ ಉಪದ್ರವಕಾರಿಯಾಗಲು ಸಹಾಯ ಮಾಡುವುದಲ್ಲದೆ, ಉಪಕಾರಮಾಡಲರಿಯದು. ಅಂತಹ ರಾಜ್ಯದಲ್ಲಿನ ಅಧಿಕಾರ ವರ್ಗವಾದರೋ, ಧನವಂತರು ಅನ್ಯಾಯಕಾರಿಗಳಾಗಿದ್ದರೂ, ನರಹಂತಕರಾಗಿದ್ದರೂ ಅಂತಹ ಆತತಾಯಿಗಳನ್ನೇ ಆಶ್ರಯಿಸಿ, ಅಶಕ್ತರಾದ ಸಾಧುಜೀವಿಗಳನ್ನು ಹಿಂಸಿಸುವರಲ್ಲದೆ, ಸತ್ಯ ಧರ್ಮ ನ್ಯಾಯಗಳನ್ನು ಗಮನಿಸಿ ಯೋ

ಗ್ಗ ಶಿಕ್ಷೆ ರಕ್ಷಣೆಗಳನ್ನು ಒದಗಿಸಲಾರರು. ಸ್ವಾರ್ಥಸಾಧಕರಾದ ಹಲವರು ಬಳಿಸೇರಿ, ಆ ದೇಶದ ಪ್ರಭುವನ್ನು, ಇಂದ್ರ ಚಂದ್ರ ದೇವೇಂದ್ರನೆಂದು ಹೊಗಳಬಹುದು. ಅವನಾದರೂ, ತಾನೇನು ಭೀಷ್ಮನೋ, ಅಭಿನವ ರಘುರಾಮನೋ, ಶ್ರೀಕೃಷ್ಣನ ಅಪರಾವತಾರಿಯೋ ಎಂದು ಹಿಗ್ಗಬಹುದು. ಆದರೇನು! ಅವನು ಎಂದಿನವರೆಗೆ ನ್ಯಾಯಾನ್ಯಾಯ, ಸತ್ಯಾಸತ್ಯ, ಧರ್ಮಾಧರ್ಮಗಳನ್ನು ವಿಮರ್ಶಿಸಿ, ಅಶೇಷ ಪ್ರಜೆಗಳನ್ನೂ ಪಕ್ಷಪಾತವಿಲ್ಲದೆ ತನ್ನ ಕಣ್ಣುಗಳೋ ಎಂಬಂತೆ ರಕ್ಷಿಸಲು ಅಶಕ್ತನಾಗಿರುವನೋ ಅಲ್ಲಿಯವರೆಗೆ ಅವನನ್ನು ಹೊಗಳುವ ಹೊಗಳಿಕೆಯೆಲ್ಲವೂ ವ್ಯರ್ಥಾಲಾಪವು. ಅವನಿಗೆ ಮಾಡುವ ಪ್ರಾರ್ಥನೆಗಳೆಲ್ಲವೂ ಅರಣ್ಯರೋದನಗಳು. ಅವನನ್ನು ತಮ್ಮ ಪ್ರಭುವೆಂದು ಹೇಳಿಕೊಂಡು ಹೆಮ್ಮೆಗೊಳ್ಳುವುದಾದರೂ ಕೇವಲ ಮೌಢ್ಯತಾಪ್ರದರ್ಶನವು. - ಏಕೆಂದರೆ, ಮೇಲ್ಕಂಡ ಕೆರೆಯು ಕಟ್ಟೆಯು ಹೋದ ಬಳಿಕ ಅದರ ಅಂಗಳವು ಅಸಹ್ಯವೆನಿಸುವಂತೆ ಶಿಕ್ಷೆ ರಕ್ಷಣೆಗಳೆಂಬೆರಡು ರಕ್ಷಕತತ್ವಗಳು ನಾಶವಾದೊಡನೆಯೇ, ಆ ರಾಜ್ಯದ ಬಿಗಿ ತಪ್ಪುವುದು. ಮರುಕ್ಷಣವೇ ದುಷ್ಟರ ಕೈಮೇಲಾಗಿ ಅವರು ಪ್ರಬಲಿಸುವರು. ದುಷ್ಕಾರ್ಯಗಳು ಅಭಿವೃದ್ಧಿಗೊಳ್ಳುವುವು. - ಕಾಲಕ್ರಮದಲ್ಲಿ ಮೇರೆ ಮೀರುವುವು. ಪ್ರಜೆಗಳ ಧನ ಮಾನ ಪ್ರಾಣಗಳಿಗೆ ಕ್ಷಣಕ್ಷಣಕ್ಕೂ ಅಪಾಯವುಂಟಾಗತೊಡಗುವುದು. ಧರ್ಮಕಾರ್ಯಗಳೂ ಧಾರ್ಮಿಕ ಸಂಸ್ಥೆಗಳೂ ನಶಿಸುವುವು. ಮುಂದೆ ಕೇಳಬೇಕಾದುದೇನು! ಅನ್ಯಾಯ ಅಸತ್ಯ ಮೋಸ ಕಾಪಟ್ಯಾದಿಗಳೇ ಆಧಿಪತ್ಯ ಮಾಡತೊಡಗುವುವು. ಫಲಪುಷ್ಪಾದಿಗಳೂ, ಧಾನ್ಯದವಸಗಳೂ ವಿಕ್ರಯವಾಗುತ್ತಿದ್ದ ಎಡೆಯನ್ನು ಮದ್ಯ ಮಾಂಸ ಮತ್ಸ್ಯಾದಿಗಳ ವ್ಯಾಪಾರವು ಆಕ್ರಮಿಸುವುವು. ಇಂದ್ರನ ಅಮರಾವತಿಯೆಂದೂ ಆದಿಶೇಷನ ಭೋಗವತಿಯೆಂದೂ ಹೊಗಳಿಸಿಕೊಂಡು 'ರಾಮರಾಜ್ಯ'ವೋ ಎಂಬಂತಹ ಕೀರ್ತಿಪ್ರತಿಷ್ಠೆಗಳಿಗೆ ಪಾತ್ರವಾಗಿದ್ದ ಆ ಭೂಪ್ರದೇಶವು ಸ್ಮಶಾನ ಸದೃಶವಾಗುವುದು. ಹಲವು ಬಗೆಯ ದಾನಧರ್ಮ ಪರೋಪಕಾರ ಕಾರ್ಯಗಳಿಗೆ ಎಡೆಯಾಗಿದ್ದ ಅದರ ಕಟ್ಟಡಗಳು ನಾಯಿನರಿಗಳ ಬೀಡಾಗುವುವು; ಕಳ್ಳಕಾಕರ ವಾಸಸ್ಥಳವಾಗುವುವು. ಕೋಗಿಲೆ ಗಿಣಿ ಪಾರಿವಾಳಗಳು ವಾಸಿಸುತ್ತಿದ್ದ ಸ್ಥಳಗಳನ್ನು ಗೂಗೆಗಳು ಆಶ್ರಯಿಸುವುವು. - ಇದು ವ್ಯರ್ಥಾಲಾಪವಲ್ಲ. ಸರ್ವ

ಥಾ ಅಲ್ಲ; ಪ್ರಕೃತಿ ಧರ್ಮವೇ ಹೀಗಿರುವುದು. - 'ಜೀವಂಸಾರ್ವುದು ಕಾಕಂ ತಾವರೆಗೊಳನಂ ಮರಾಳನೆಯ್ದುವ ದೊಲವಿಂ' ಎಂದು ನೀತಿಶಾಸ್ತ್ರಕಾರರ ವಚನವಿದೆ. ಪಕ್ಷಪಾತಪ್ರವಾಹವು ಸಮಾನಗುಣವನ್ನನುಸರಿಸಿ ಹರಿಯತಕ್ಕದು ಪ್ರಕೃತಿಧರ್ಮವು!

ಭಾರತದೇಶದ ಇಂದಿನ ಸ್ಥಿತಿಯು ಅಂತಾಗಿದೆಯೆಂದರೆ, ನಾವು ದೇಶದ್ರೋಹಿಗಳೆನ್ನಿಸುವೆವೇ ! ಭಾರತದೇಶ ಮಾತ್ರವಲ್ಲ - ತನ್ನ ಕರ್ತವ್ಯವನ್ನು ಮರೆತು, ಭೋಗವಿಲಾಸಾದಿಗಳಲ್ಲಿ ಮಗ್ನನಾಗಿ ದ್ಯೂತ, ವೇಶ್ಯಾಸಕ್ತಿ, ಕುಡಿತಕುಣಿತಗಳು ಮುಂತಾದ ತನ್ನ ದುಶ್ಚರಿತ್ರೆ, ಅಶಕ್ತತೆ, ಅಯೋಗ್ಯತೆಗಳಿಂದ ಪ್ರಭುತ್ವಪದಕ್ಕೆ ಕಳಂಕವನ್ನುಂಟುಮಾಡುವ ನರಾಧಮನು ಪೃಥ್ವಿಯ ಯಾವ ದೇಶದಲ್ಲಿರುವನೋ ಅದರ ಗತಿಯೆಲ್ಲವೂ ಅಷ್ಟೆ! 'ನರಾಧಮ'ನೆಂಬ ಮಾತು ತಮ್ಮ ಕಿವಿಗೆ ಬಹು ಕರ್ಕಶವಾಗಿ ತೋರುವುದೇನೋ? ಅಷ್ಟಕ್ಕಾಗಿ ನಮ್ಮಮೇಲೆ ಕೋಪಿಸಲಾಗದು. ಏಕೆಂಬಿರಾ! ಪ್ರಭುಪೀಠವನ್ನು ಏರುವುದು ಭಾರತದೇಶದೃಷ್ಟಿಯಲ್ಲಂತೂ ವಿಲಾಸಾನುಭವಕ್ಕಾಗಿಯಲ್ಲ. ಧರ್ಮದಂಡವನ್ನು ಹಿಡಿದು ಲಕ್ಷಾಂತರ ಕೋಟ್ಯಂತರ ಪ್ರಜಾಪಾಲನೆಗೆಂದು ದೈವದಿಂದ ನಿಯಾಮಕನಾಗತಕ್ಕದು ಹುಡುಗಾಟಿಕೆಯಲ್ಲ. ಪತ್ನಿಯನ್ನು ಕೈಹಿಡಿದ ಪತಿಗೆ ಅವಳನ್ನು ಸಂರಕ್ಷಿಸಬೇಕಾದ ಉತ್ತರವಾದಿತ್ವವಿಲ್ಲವೆ ? ಮಕ್ಕಳನ್ನು ಹೆತ್ತ ತಾಯಿತಂದೆಗಳಿಗೆ ಅವರನ್ನು ಪೋಷಿಸಿ - ಅಭಿವೃದ್ಧಿಗೆ ತರಬೇಕಾದ ಉತ್ತರವಾದಿತ್ವವಿಲ್ಲವೆ? ಅವರವರಿಗೆ ನಿಯಾಮಕವಾದ ಆಯಾ ಕಾರ್ಯಗಳನ್ನು ಅವರು ಮಾಡದೆ ತಪ್ಪಿದರೆ, ಭಗವದೃಷ್ಟಿಯಲ್ಲಿ ಅವರು ಅಪರಾಧಿಗಳಾಗುವರಲ್ಲವೆ?- 'ಧರ್ಮೇಚ ಅರ್ಥೇಚ ಕಾಮೇಚ ನಾತಿಚರಾಮಿ-ನಾತಿಚರಾಮಿ' ಎಂದು ಪ್ರಮಾಣಮಾಡಿ, ಅಗ್ನಿಸಾಕ್ಷಿಕವಾಗಿ ಕೈ ಹಿಡಿದ ಪತ್ನಿಯನ್ನು ಭರಿಸಲರಿಯದೆ, ತಾನು ಕ್ಷೇತ್ರಾಂತರವನ್ನು ಪ್ರವೇಶಿಸಿ, ಆಕೆಯನ್ನು ಪರರವಶಕ್ಕೆ ಬಿಡುವ ಮನುಷ್ಯನೊಬ್ಬನಿದ್ದರೆ ಅವನನ್ನು ತಾವು ನರಾಧಮನೆನ್ನಲಾರಿರಾ! ಹಾಗೆಯೇ, ತನಗೆ ದೈವದತ್ತವಾಗಿ ದೊರೆತ ಧರ್ಮದಂಡವನ್ನೂ ಯೋಗ್ಯರೀತಿಯಿಂದ ಉಪಯೋಗಿಸಲಾರದೆ, ಭಾವದಾಸ್ಯಕ್ಕೊಳಪಟ್ಟು, ನ್ಯಾಯದೇವತೆಯನ್ನು ವ್ಯಭಿಚಾರಕ್ಕಿಟ್ಟ ಯಾವನನ್ನಾದರೂ, ನಾವಲ್ಲ - ತಾವೇ ಏನೆಂದು ಕರೆಯುವಿರಿ?

ಹೇಳುವಂತೆ ಧನುರ್ದಂಡವನ್ನು ವಿಧ್ಯುಕ್ತರೀತಿಯಲ್ಲಿ ಹಿಡಿದು ನಡೆಯಿಸುತ್ತಿದ್ದ ಪ್ರಭುಸತ್ತ್ವರು ಭಾರತದೇಶದಲ್ಲಿ ರಾಜ್ಯಾಧಿಪತಿಗಳಾಗಿದ್ದವರೆಗೂ ಅಲ್ಲಿ ಸತ್ಯ ಧರ್ಮ ನ್ಯಾಯಗಳಿಗೆ ಚ್ಯುತಿ ಬರಲಿಲ್ಲ. ಅಲ್ಲಿ ಆವರೆಗೆ ಉತ್ತಮರಿಗೆ ತಿರಸ್ಕಾರವೂ, ನೀಚರಿಗೆ ಪುರಸ್ಕಾರವೂ ಉಂಟಾಗುತ್ತಿರಲಿಲ್ಲ. ಆವರೆಗೆ ಭಾರತದೇಶಕ್ಕೆ ನಾವು ಆದಿಯಲ್ಲಿ ಹೇಳಿದಂತಹ 'ಪುಣ್ಯಭೂಮಿ' ಎಂಬ ಪವಿತ್ರನಾಮವು ಸಾರ್ಥಕವೆನಿಸುವಂತಿದ್ದಿತು. ಭದ್ರವಾದ ಕಟ್ಟೆಯಿಂದ ರಕ್ಷಿತವಾದ ಕೆರೆಯಲ್ಲಿ ಕಮಲಗಳೂ ಜಲಚರಗಳೂ ಶೋಭಿಸುತ್ತಿದ್ದಂತೆ, ನಮ್ಮ ಮಾತೃಭೂಮಿಯೂ ತೇಜಸ್ವಿಗಳಾದ ಅಂತಹ ನರಪುಂಗವರ ಬಾಹುಬಲದಿಂದ ರಕ್ಷಿತವಾಗಿದ್ದವರೆಗೆ ಇಲ್ಲಿಯೂ ಸಮಸ್ತ ವೈಭವಗಳೂ ಮೆರೆಯುತ್ತಿದ್ದವು. ಆ ಕೆರೆಯಲ್ಲಿನ ಶುಭ್ರಜಲವನ್ನು ಮೃಗಪಕ್ಷಿಗಳೂ ಮಾನವರೂ ಕುಡಿದು ತೃಪ್ತರಾಗುತ್ತಿದ್ದಂತೆ, ಇದರಲ್ಲಿದ್ದ ಅಖಂಡ ನವನಿಧಿಗಳನ್ನೂ, ನವಧಾನ್ಯಗಳನ್ನೂ ಮನೋಹರಪುಷ್ಪಫಲಗಳನ್ನೂ ಸಕಲರೂ ಯಥೇಷ್ಟ ಅನುಭವಿಸುತ್ತಿದ್ದರು. ಅಂದಿನವರೆಗೆ ಸಕಲವೂ ಸುರಕ್ಷಿತವಾಗಿದ್ದಿತು.

ಆದುದರಿಂದಲೇ- ಶಿಕ್ಷರಕ್ಷಣೆಯ ಈ ಮಹತ್ವದ ಕಾರ್ಯವನ್ನು ಸಾಧಿಸುವುದಕ್ಕಾಗಿಯೇ ಪೂರ್ವದಲ್ಲಿ ಕ್ಷತ್ರಿಯರೆಂಬ ಒಂದು ವರ್ಣವನ್ನು ಆರ್ಯಮಹರ್ಷಿಗಳು ಪ್ರತ್ಯೇಕವಾಗಿ ವಿಂಗಡಿಸಿ ಇಟ್ಟಿದ್ದುದು. ಒಂದೊಂದು ವರ್ಣವೂ ಅದರದರ ವಿಹಿತಧರ್ಮದಿಂದ ಚ್ಯುತವಾಗಿ, ಅಧೋಗತಿಗಿಳಿದಿರುವ ಈ ದುಸ್ಕಾಲದಲ್ಲಿ, ಪಾಪ, ಆ ವರ್ಣವಾದರೂ ತನ್ನ ಕರ್ತವ್ಯವನ್ನು ಮಾಡುತ್ತಿಲ್ಲವೆಂದು ಏಕೆ ದೂಷಿಸಬೇಕು. ಇಂದಿನ ಬ್ರಾಹ್ಮಣರು ಎಷ್ಟುಮಟ್ಟಿಗೆ ಕುಲಶೀಲಗಳನ್ನು ಗಮನಿಸಿ, ವೇದಶಾಸ್ತ್ರಾದಿಗಳನ್ನು ಅಭ್ಯಸಿಸಿ, ಎಷ್ಟುಮಟ್ಟಿಗೆ ಸತ್ಯಶೀಲರಾಗಿ ನಡೆಯುತ್ತಿದ್ದಾರೆ? ಭೂಸುರರು, ಅಗ್ರಜನ್ಮರು ಎಂದು ಪ್ರಸಿದ್ಧರಾಗಿರುವ ಇವರೇ ಹಲವು ನೀಚವೃತ್ತಿಗಳನ್ನು ಆಶ್ರಯಿಸುತ್ತಿರುವಾಗ ಮಿಕ್ಕವರನ್ನು ಕುರಿತು ಹೇಳಬೇಕಾದುದೇನು? ಆದರೆ ಈ ಸಂದರ್ಭದಲ್ಲೊಂದು ಮಾತು: 'ನನ್ನ ನೆರೆಯವನು ಮದ್ಯಪಾನ ಮಾಡುತ್ತಾನಾದ್ದರಿಂದ ನಾನು ಮಾಡಿದರೆ ತಪ್ಪೇನು?' ಎಂದು ನಾನು ಹೇಳುವೆನಾದರೆ, ತಾವು ನನ್ನನ್ನು ಏನೆಂದು ಕರೆಯುವಿರಿ! ಬುದ್ಧಿಹೀನನಾದ ಅವನು ಪಾಮರತ್ವದಲ್ಲಿ ನಡೆದರೆ, ಬುದ್ಧಿವಂತನೆಂದು ಹೇಳಿಕೊಳ್ಳುವ ನಾನೇಕೆ ಉತ್ತಮಮಾರ್ಗದಲ್ಲಿ

ಹೋಗಬಾರದು. ಬ್ರಾಹ್ಮಣನು ಹೊಟ್ಟೆಗಿಲ್ಲದೆ ಬಂದು ಸೇವಕಾವೃತ್ತಿಯನ್ನು ಆಶ್ರಯಿಸಿದನೆಂದು, ಜನ್ಮತಃ ವ್ಯಾಪಾರಿಯಾಗಿರುವ ವೈಶ್ಯನೂ, ಶಸ್ತ್ರಜೀವಿಯಾದ ಕ್ಷತ್ರಿಯನೂ, ಧನ್ಯೆಯಾದ ಭೂಮಾತೆಯನ್ನು ಆಶ್ರಯಿಸಿದ ಒಕ್ಕಲಿಗನೂ ಆ ಭಿಕ್ಷೆಗೇಕೆ ಕೈಯೊಡ್ಡಬೇಕು! ಇಂತಹ ಅವ್ಯವಸ್ಥೆಯುಂಟಾದರೆ, ಸಮಾಜವು ಸುಖವಾಗಿರುವುದೇ ? ಪ್ರಭುವೇ ಇಂತಹ ಅವ್ಯವಸ್ಥೆಗಳು ಹೆಚ್ಚಲು ಎಡೆಯಿತ್ತರೆ ಮುಂದೆ ದೇಶದಲ್ಲಿ ಶಾಂತತಾರಕ್ಷಣೆಯಾದರೂ ಹೇಗಾದೀತು?

ದೇಶದ ಸುರಕ್ಷಿತತೆಗೆ ಉತ್ತಮ ಬ್ರಾಹ್ಮಣಧರ್ಮವೂ, ಉತ್ತಮ ವೈಶ್ಯಧರ್ಮವೂ, ಉತ್ತಮ ಶೂದ್ರ ಧರ್ಮವೂ ನಡೆಯುತ್ತಿರಬೇಕಾದ - ಇತರ ವರ್ಣಗಳವರ ಕಾರ್ಯಕಲಾಪಗಳಂತಿರಲಿ! ಬ್ರಾಹ್ಮಣ ವೈಶ್ಯ ಶೂದ್ರರು ತಮ್ಮ ಧರ್ಮದಿಂದ ಚ್ಯುತರಾದರೆ, ಪರರಿಗೆ ಉಪಕಾರವಾಗಲಾರದಾದರೂ ಉಪದ್ರವವಾದರೂ ಉಂಟಾಗದಿರುವುದು. ಆದರೆ ಧರ್ಮದಂಡವನ್ನು ಧರಿಸಿದ ಕ್ಷತ್ರಿಯನು ತನ್ನ ಧರ್ಮದಿಂದ ಅಧಃಪತನ ಹೊಂದಿದನೆಂದರೆ, ಸಮಾಜದ ಮಿಕ್ಕ ವರ್ಣಗಳವರ ಇಹಜೀವಿತವೇ ಅಪಾಯಕ್ಕೊಳಗಾಗುವುದು. ಶಿಕ್ಷೆ ರಕ್ಷಣೆಗಳ - ಅರ್ಥಾತ್ ಧರ್ಮದಂಡದ ಬಲವು ಕಡಿಮೆಯಾಯಿತೆಂದೊಡನೆಯೇ, ಮಿಕ್ಕ ಯಾವ ಧರ್ಮವೂ ತನ್ನ ಸ್ಥಾನದಲ್ಲಿರಲಾರದು. ಭೋಗಾಭಿಲಾಷಿಯಾಗಿ, ವಿಲಾಸಮಗ್ನನಾಗಿ, ಬೇರೊಬ್ಬನು ಹಿಡಿದ ಮೂಗುಧಾರವನ್ನಾಶ್ರಯಿಸಿ ನಡೆವ ಎತ್ತಿನಂತೆ ಭಾವಪಾಶಕ್ಕೊಳಪಟ್ಟು, ಮಿಕ್ಕ ಧರ್ಮಗಳನ್ನು ಯುಕ್ತಸ್ಥಾನದಲ್ಲಿಡದೆ, ತನಗೆ ವಹಿಸಲ್ಪಟ್ಟ ಧರ್ಮದಂಡವನ್ನು ಅಪವ್ಯಯ ಮಾಡಿದುದರ ಉತ್ತರವಾದಿತ್ವವಾದರೂ ರಾಜ್ಯಾಧಿಪತಿಯಾದ ಕ್ಷತ್ರಿಯನ ತಲೆಯಮೇಲೆ ಎಂದೆಂದಿಗೂ ಹೊತ್ತಿರುವುದು. ಆ ತನ್ನ ಕರ್ತವ್ಯವನ್ನು ಯೋಗ್ಯರೀತಿಯಿಂದ ನಿರ್ವಹಿಸದಿದ್ದುದಕ್ಕಾಗಿ ಅವನು ಭಗವಂತನಲ್ಲಿ ದೋಷಿಯಾಗದೆ - ಶಿಕ್ಷಾರ್ಹನಾಗದೆ ತಪ್ಪಿಸಿಕೊಳ್ಳಲಾರನು. ನಮ್ಮ ಪ್ರಕೃತ ಕಥಾನಾಯಕನು, ಹಾಗೆ ಧರ್ಮರಕ್ಷಣೆಗಾಗಿ ಪರ್ಪಟ್ಟ ಕ್ಷತ್ರಿಯವರ್ಣಕ್ಕೆ ಶಿರೋಮಣಿಪ್ರಾಯನು. ದುಷ್ಟಶಿಕ್ಷಣೆ, ಶಿಷ್ಟರಕ್ಷಣೆ ಧರ್ಮಸ್ಥಾಪನಾದಿ ಕಾರ್ಯಗಳಲ್ಲಿ, ಶ್ರೀಕೃಷ್ಣಮೂರ್ತಿಯು ಬೆಂಬಲನೂ, ಸೂತ್ರಧಾರಕನೂ ಆಗಿರಲು, ಈತನು ತಮ್ಮಣ್ಣನಾದ ಯುಧಿಷ್ಠಿರನನ್ನು ನೆಳಲಿನಂ

ತಾಶ್ರಯಿಸಿ, ಸರ್ವ ಸಹಾಯಗಳನ್ನೂ ಒದಗಿಸಿ, ಭಾರತದೇಶದಲ್ಲಿ ಧರ್ಮ ದಂಡವನ್ನು ಪ್ರತಿಷ್ಠಿಸಿದನಾದುದರಿಂದ ಆತನ ಚರಿತ್ರೆಯೂ, ಕರ್ಣಾಟಕ ಮಹಾಜನರ ಪ್ರೇಮಾದರಗಳಿಗೆ ಪಾತ್ರವಾಗಲು ಅರ್ಹವಾದುದೆಂದು ಭಾವಿಸುತ್ತೇವೆ.

ಇನ್ನು ಪ್ರಕೃತಕಥಾ:—

ಭಾರತದೇಶವನ್ನು ಆಳಿದ ಹಲವು ಮಂದಿ ಅರಸರಲ್ಲಿ, ಹಸ್ತಿನಾವತಿಯಲ್ಲಿ ರಾಜ್ಯಭಾರಮಾಡಿದ ಚಂದ್ರವಂಶದವರು ಸುಪ್ರಸಿದ್ಧರಷ್ಟೆ! ಇವರಲ್ಲಿ ರಾಜರ್ಷಿಯಾದ ಪ್ರತೀಪರಾಯನೆಂಬಾತನಿಗೆ, ಬ್ರಹ್ಮಶಾಪದಿಂದ ಮನುಷ್ಯದೇಹವನ್ನೆತ್ತಿ ಜನ್ಮಿಸಿದ ಮಹಾಭಿಷಕ್ಕೆಂಬ ರಾಜನು ಪುತ್ರನಾಗಿ ಶಂತನುವೆಂಬ ಹೆಸರಿನಿಂದ ಪ್ರಸಿದ್ಧನಾದನು. ಶಂತನುವು ಗಂಗಾದೇವಿಯನ್ನು ಪತ್ನಿಯಾಗಿ ವರಿಸಿ ಆಕೆಯಲ್ಲಿ ಭೀಷ್ಮನೆಂಬ ಪುತ್ರನನ್ನೂ, ಸತ್ಯವತೀದೇವಿಯನ್ನು ವರಿಸಿ ಆಕೆಯಲ್ಲಿ ಚಿತ್ರವೀರ್ಯ ವಿಚಿತ್ರವೀರ್ಯರೆಂಬ ಮಕ್ಕಳನ್ನೂ ಪಡೆದನು. ಶಂತನುವು ಮೃತನಾದನಂತರ ಭೀಷ್ಮನೇ ತನ್ನ ಆ ಇಬ್ಬರು ತಮ್ಮಂದಿರನ್ನೂ ಪೋಷಿಸಿ, ವಿದ್ಯಾಬುದ್ಧಿಗಳನ್ನು ಕಲಿಸಿ ಪ್ರಬುದ್ಧರನ್ನಾಗಿ ಮಾಡಿದನು. ಅವರಲ್ಲಿ ಚಿತ್ರವೀರ್ಯನು ಗಂಧರ್ವರೊಂದಿಗೆ ಯುದ್ಧಮಾಡಿ ಮೃತನಾಗಲು, ಭೀಷ್ಮನು ವಿಚಿತ್ರವೀರ್ಯನಿಗೆ ಕಾಶೀರಾಜನ ಪುತ್ರಿಯರಲ್ಲಿ ಅಂಬಿಕೆ ಅಂಬಾಲಿಕೆಯರೆಂಬ ಇಬ್ಬರು ಕನ್ಯೆಯರನ್ನು ತಂದು ಲಗ್ನಮಾಡಿ, ಒಂದಿಗೇ ರಾಜ್ಯಾಭಿಷೇಕ ಮಹೋತ್ಸವವನ್ನೂ ನೆರವೇರಿಸಿ, ತಾನು ಸಾಮ್ರಾಜ್ಯ ಸಂರಕ್ಷಣಕಾರ್ಯವನ್ನೂ ಕೈಕೊಂಡು ವಜ್ರಮುಷ್ಟಿಯಿಂದ ಸರ್ವಾಧಿಕಾರವನ್ನೂ ನಿರ್ವಹಿಸುತ್ತಿದ್ದನು. ಪ್ರೌಢಪ್ರತಾಪಿಯಾದ ಭೀಷ್ಮನು ಪಾಲಿಸುತ್ತಿರಲು, ಹಸ್ತಿನಾವತಿಯ ಸಿಂಹಾಸನಕ್ಕೆ, ಭಾರತದೇಶದ ಸಮಸ್ತರಾಜರೂ ಸಾಮಂತರಾಗಿ ಕಪ್ಪಕಾಣಿಕೆಗಳನ್ನಿತ್ತು ನಡೆದುಕೊಳ್ಳುವಂತಾಯಿತು.

ಭೀಷಣಪ್ರತಾಪಿಯಾದ ಭೀಷ್ಮನ ಬಾಹುಬಲದಿಂದ ಸುರಕ್ಷಿತವಾದ ಹಸ್ತಿನಾವತಿಯಲ್ಲಿ ಸಾಮ್ರಾಜ್ಯಸುಖಾನುಭವ ಮಾಡುತ್ತಿದ್ದ ವಿಚಿತ್ರವೀರ್ಯನು ಕ್ಷಯರೋಗಪೀಡಿತನಾಗಿ ಮುಂದೆ ಕೆಲವರ್ಷಗಳಲ್ಲೇ ಮೃತನಾದನು. ಆತನ ಅಕಾಲಮೃತ್ಯುವಿನಿಂದ ಸಂತಾನಾಂಕುರವನ್ನು ಕಾಣದೆ ಚಂದ್ರವಂಶವೃಕ್ಷದ ಸುಳಿಯು ಪುನಃ ಬಾಡಲನುವಾಯಿತು. ಆಗ ಸತ್ಯವತೀದೇವಿಯು

ಭೀಷ್ಮನ ಅನುಮತಿಯನ್ನು ಪಡೆದು, - ತಾನು ಶಂತನುವನ್ನು ಲಗ್ನವಾಗುವದಕ್ಕೆ ಪೂರ್ವದಲ್ಲೇ ಪರಾಶರಮಹರ್ಷಿಯಿಂದ ಪಡೆದಿದ್ದ ಶ್ರೀ ವೇದವ್ಯಾಸಮಹರ್ಷಿಯನ್ನು ಧ್ಯಾನಿಸಿ, ಬರಮಾಡಿಕೊಂಡು, ಆತನಿಂದ ತನ್ನ ಸೊಸೆಯರಲ್ಲಿ ಸಂತಾನೋತ್ಪತ್ತಿಯಾಗುವಂತೆ ಉಪಾಯಮಾಡಿದಳು. ಮಹರ್ಷಿಯ ಅನುಗ್ರಹದಿಂದ ಅಂಬಿಕೆ ಅಂಬಾಲಿಕೆಯರಲ್ಲಿ ಧೃತರಾಷ್ಟ್ರ ಪಾಂಡು ಎಂಬಿಬ್ಬರು ಪುತ್ರರು ಜನಿಸಿ, ಚಂದ್ರವಂಶವನ್ನು ಮುಂದುವರಿಸಿದರು. ಮಹರ್ಷಿಯಿಂದ ಅನುಗ್ರಹವನ್ನು ಹೊಂದುವ ವೇಳೆಯಲ್ಲಿ ಆ ರಾಜಸ್ತ್ರೀಯರಿಂದ ನಡೆದ ಅನೌಚಿತ್ಯಚರ್ಯೆಯಿಂದ, ಆ ಇಬ್ಬರು ಪುತ್ರರಲ್ಲಿ ಧೃತರಾಷ್ಟ್ರನು ಹುಟ್ಟುಕುರುಡನಾದನು. ಪಾಂಡುವು ಪಾಂಡು (ಶ್ವೇತ) ವರ್ಣಯುಕ್ತವಾದ ದೇಹವುಳ್ಳವನಾದನು. ಈ ಇಬ್ಬರಲ್ಲದೆ, ಮಹರ್ಷಿಯ ವರಪ್ರಸಾದದಿಂದ ಅಂತಃಪುರದ ಊಳಿಗದ ಸ್ತ್ರೀಯೊಬ್ಬಳಲ್ಲಿ ವಿದುರನೆಂಬ ಭಕ್ತಶಿರೋಮಣಿಯೊಬ್ಬನೂ ಜನಿಸಿ ಹಸ್ತಿನಾವತಿಯ ರಾಜವಂಶಕ್ಕೆ ಹಿತಚಿಂತಕನಾಗಿದ್ದನು.

ನಿಸ್ಪೃಹ ಚಕ್ರವರ್ತಿಯಾದ ಭೀಷ್ಮನಾದರೋ, ವಂಶವರ್ಧನರಾದ ಆ ತನ್ನ ಮೊಮ್ಮಕ್ಕಳಿಬ್ಬರ ಪೋಷಣೆಯ ಭಾರವನ್ನೂ ವಹಿಸಿ, ರಾಜಯೋಗ್ಯವಾದ ವಿದ್ಯಾಬುದ್ಧಿಗಳನ್ನು ಕಲಿಸಿ ಅವರನ್ನು ಶಕ್ತರನ್ನಾಗಿ ಮಾಡಿದನು. ಪ್ರಾಪ್ತವಯಸ್ಕರಾದ ಅವರಿಗೆ ಕುಲ ಶೀಲ ಗುಣ ರೂಪಗಳಲ್ಲಿ ಅನುರೂಪೆಯರಾದ ಕನ್ಯೆಯರನ್ನು ತಂದು ವಿವಾಹಮಾಡಲೆಳಸಿ, ಅನೇಕ ದೇಶಗಳಲ್ಲಿ ಹುಡುಕಿಸಿ, ಕೊನೆಗೆ ಗಾಂಧಾರದೇಶದ ರಾಜಕನ್ಯೆಯಾದ ಗಾಂಧಾರೀದೇವಿಯನ್ನು ತಂದು ಧೃತರಾಷ್ಟ್ರನಿಗೆ ವಿವಾಹ ಮಾಡಿಸಿದನು. ಕುಂತೀಭೋಜರಾಜನ ಮಗಳಾದ ಕುಂತೀದೇವಿಯೂ, ಮದ್ರದೇಶಾಧೀಶನ ಮಗಳಾದ ಮಾದ್ರೀದೇವಿಯೂ, ಸ್ವಯಂವರಗಳಲ್ಲಿ ಪಾಂಡುಭೂಪತಿಯನ್ನು ವರಿಸಿ ಪುಷ್ಪಮಾಲಿಕೆಗಳನ್ನು ಆತನ ಕೊರಳಲ್ಲಿ ಒಪ್ಪಿಸಿದರು. ಭೀಷ್ಮನು ತನ್ನ ಇಬ್ಬರು ಮೊಮ್ಮಕ್ಕಳ ವಿವಾಹಗಳನ್ನೂ ಅತ್ಯಂತ ವಿಜೃಂಭಣೆಯಿಂದ ನೆರವೇರಿಸಿದ್ದಲ್ಲದೆ, ವಿದುರನಿಗೂ ಯೋಗ್ಯ ಕನ್ಯೆಯೊಬ್ಬಳನ್ನು ತಂದು ವಿವಾಹ ಮಾಡಿದನು. ಮೂವರೂ ತಮ್ಮತಮ್ಮ ಪತ್ನಿಯರಲ್ಲಿ ವಿವಿಧ ಭೋಗಗಳನ್ನನುಭವಿಸುತ್ತಾ ಕೆಲಕಾಲ ಸುಖವಾಗಿದ್ದರು.

ಧೃತರಾಷ್ಟ್ರ ಪಾಂಡು ಈ ಇಬ್ಬರು ಅಣ್ಣತಮ್ಮಂದಿರಲ್ಲಿ, ಹಿರಿಯನು ಕುರುಡನಾದುದರಿಂದ ಸಿಂಹಾಸನಾರೋಹಣಕ್ಕೆ ಸಾಧ್ಯವಿಲ್ಲದೆ ಕೇವಲ ನಾಮಮಾತ್ರ ರಾಜನಾಗಿರಲು ಪಾಂಡುರಾಜನೇ ಸರ್ವಾಧಿಕಾರವನ್ನೂ ನೋಡಿಕೊಳ್ಳುತ್ತಿದ್ದನು. ಮಹಾ ಬಾಹು ಬಲಶಾಲಿಯಾದ ಆತನು ಚತುರಂಗಸೈನ್ಯವನ್ನೊಡಗೊಂಡು, ದೇಶದೇಶಾಂತರಗಳಮೇಲೆ ನಡೆದು, ಹಲವು ಮಂದಿ ರಾಜರನ್ನು ಜಯಿಸಿ, ಅಲ್ಲೆಲ್ಲ ಹಸ್ತಿನಾವತಿಯ ಪ್ರಭುತ್ವವನ್ನು ಸ್ಥಾಪಿಸಿದನು. ಹಲವರು ರಾಜರು ಕಪ್ಪ ಕಾಣಿಕೆಗಳನ್ನು ಕೊಟ್ಟು, ಆ ಪ್ರಭುತ್ವದ ಸ್ವಾಮ್ಯವನ್ನು ಒಪ್ಪಿಕೊಂಡರು.

ವೀರಾಗ್ರೇಸರನಾದ ಪಾಂಡುರಾಜನು ಮುಂದೊಂದು ದಿನ ಮೃಗಯಾವಿಹಾರಕ್ಕೆಂದು ಅರಣ್ಯವನ್ನು ಪ್ರವೇಶಿಸಿರಲು, ಮಧ್ಯಾಹ್ನವೇಳೆಯಲ್ಲಿ ಕಾಮಕ್ರೀಡೆಯಲ್ಲಿ ನಿರತವಾಗಿದ್ದ ಜಿಂಕೆಗಳೆರಡನ್ನು ಕಂಡು, ಅವುಗಳಲ್ಲಿ ಗಂಡುಜಿಂಕೆಯಮೇಲೆ ವಿನೋದಕ್ಕಾಗಿ ಬಾಣಪ್ರಯೋಗಮಾಡಿದನು. ಒಡನೆ ಆ ಬಾಣ ತಗಲಿ ಅದು ನೆಲಕ್ಕೆ ಬಿದ್ದಿತು. ಮಾತ್ರವಲ್ಲ - ಆಶ್ಚರ್ಯಾಶ್ಚರ್ಯವು! ಉತ್ತರಕ್ಷಣದಲ್ಲೇ ಆ ಜಿಂಕೆಯ ಆಕೃತಿಯು ಮಾಯವಾಗಿ, ಅಲ್ಲೊಂದು ಮುನಿಮಿಥುನವು ಕಾಣಿಸಿಕೊಂಡಿತು. ಆ ವಿಚಿತ್ರವನ್ನು ಕಂಡು ಪರಮಾಶ್ಚರ್ಯಮಗ್ನನಾದ ಪಾಂಡುವು ಮುಂದೇನಾಗುವುದೋ ಎಂದು ನೋಡುತ್ತ ನಿಂತಿರಲು, ಬಾಣತಾಗಿ ಅದರ ಬಾಧೆಯಿಂದ ನೊಂದ ಆ ಮುನಿಯು —'ಎಲವೋ, ಕ್ಷತ್ರಿಯಾಧಮನೇ, ನನ್ನ ಪತ್ನಿಯೊಂದಿಗೆ ಕಾಮಕ್ರೀಡೆಯಲ್ಲಿ ತೊಡಗಿದ್ದ ನಿರಪರಾಧಿಯಾದ ನನ್ನನ್ನು ವಧಿಸಿದೆಯಾದುದರಿಂದ, ನೀನೂ ನಿನ್ನ ಪತ್ನಿಯನ್ನು ಬೆರೆತೊಡನೆಯೇ ಮೃತನಾಗುವೆ' ಎಂದು ಶಾಪವಿತ್ತು ಕಾಲಧರ್ಮವನ್ನು ಹೊಂದಿದನು. ಮುನಿಪತ್ನಿಯೂ ಸಹಗಮನಮಾಡಿದಳು.

ಆಕಸ್ಮಾತ್ತಾಗಿ ತನಗೆ ಪ್ರಾಪ್ತವಾದ ಆ ದುರ್ಗತಿಯನ್ನು ಕುರಿತು, ಪಾಂಡುರಾಜನು, ಮಹಾ ವ್ಯಸನಾಕ್ರಾಂತನಾಗಿ, ಉತ್ಸಾಹವಳಿದು, ರಾಜಧಾನಿಯನ್ನು ಹೊಕ್ಕು, ಆ ವೃತ್ತಾಂತವನ್ನು ಭೀಷ್ಮಾದಿವೃದ್ಧರಿಗೂ ತಿಳಿಸಿ, ಸಕಲ ವಿಚಾರಗಳಲ್ಲೂ ವಿರಕ್ತಿಯನ್ನು ಹೊಂದಿ, ತನ್ನ ಇಬ್ಬರು ಪತ್ನಿಯರೊಂದಿಗೆ ಹೊರಟು ತಪೋವನವನ್ನು ಸೇರಿದನು. ಅಲ್ಲಿ ನಿರ್ಜನವಾದ ಪ್ರ

ನಿವರ್ಯರ ಸಹವಾಸದಲ್ಲಿ ಧರ್ಮಶ್ರವಣ ಮಾಡುತ್ತಾ, ಕಾಲಯಾಪನೆ ಮಾಡುತ್ತಿರಲು, ಆತನ ಪತ್ನಿಯರೂ, ತುಂಬು ಯೌವನದಲ್ಲಿ ತಮಗೆ ಪ್ರಾಪ್ತವಾದ ದುರ್ವಿಧಿಗಾಗಿ ಬಲು ಬಗೆಯಿಂದ ಮರುಗುತ್ತ, ಮಹಾ ಪತಿವ್ರತೆಯರಾದುದರಿಂದ ಪತಿಸೇವಾತತ್ಪರರಾಗಿದ್ದರು.

ಮುನಿಶಾಪಗ್ರಸ್ತನಾದುದರಿಂದ ತನ್ನ ಪತ್ನಿಯರಲ್ಲಿ ಪುತ್ರಸಂತಾನವನ್ನು ಪಡೆಯುವ ಮಾರ್ಗ ಕಾಣದೆ ಪಾಂಡುರಾಜನು, ಪುತ್ರಹೀನನಾದ ತನಗೆ ಸದ್ಗತಿಯುಂಟಾಗದೆಂದು ಮಹಾ ವ್ಯಸನಾಕ್ರಾಂತನಾಗಿ, ದಿನದಿನವೂ ಕೊರಗಿ ಮರುಗುತ್ತಿದ್ದನು. ಅತ್ತ ಗಾಂಧಾರೀದೇವಿಯು, ವೇದವ್ಯಾಸರನ್ನು ಪ್ರಾರ್ಥಿಸಿ, ನೂರುಮಂದಿ ಮಕ್ಕಳನ್ನು ಪಡೆವಂತೆ ಅವರಿಂದ ವರವನ್ನು ಪಡೆದಿದ್ದಳು. ಆ ಸಂಗತಿಯನ್ನು ಕೇಳಿದ ಕುಂತೀ ಮಾದ್ರಿಯರು ಸಂಸಾರಸುಖಕ್ಕೆ ಬಾಹಿರರಾದ ತಮ್ಮ ದುರ್ವಿಧಿಯನ್ನು ಶತಶಃ ಸಹಸ್ರಶಃ ನಿಂದಿಸಿಕೊಳ್ಳುತ್ತಾ ವಿಲಪಿಸುತ್ತಿದ್ದರು. ಆಗ ಪಾಂಡುರಾಜನು ತನ್ನ ಪತ್ನಿಯರನ್ನು ಕುರಿತು, – ‘ಎಲೌ ಸ್ತ್ರೀಯರೇ ವ್ಯಸನಪಟ್ಟು ಫಲವಿಲ್ಲ. ನೀವು ತಪೋನಿರತನಾದ ಭೂಸುರನೊಬ್ಬನನ್ನು ಹೊಂದಿ, ಪುತ್ರಸಂತಾನವನ್ನು ಪಡೆಯಿರಿ. ಈ ನಿಯೋಗಪದ್ಧತಿಯು ಶಾಸ್ತ್ರಸಮ್ಮತವಾದುದು. ಇದಕ್ಕೆ ನನ್ನ ಅನುಮತಿಯುಂಟು’ ಎಂದನು. ಆದರೇನು! ಪತಿವ್ರತೆಯರಾದ ಆ ರಾಜಸ್ತ್ರೀಯರು, ಪುತ್ರಸಂತಾನ ವ್ಯಾಜದಿಂದಲಾದರೂ, ಸ್ವೈರಿಣಿಯರಂತೆ ಪರಪುರುಷನನ್ನು ಸೇವಿಸಲು ಒಪ್ಪಲಿಲ್ಲ. ಕೊನೆಗೆ, ಕುಂತೀದೇವಿಯು, ತನ್ನ ಬಾಲ್ಯಾವಸ್ಥೆಯಲ್ಲಿ, ದೂರ್ವಾಸಮಹರ್ಷಿಗಳನ್ನು ಸೇವೆಯಿಂದ ಮೆಚ್ಚಿಸಿ, ಸುಪ್ರೀತರಾದ ಅವರಿಂದ ತಾನು ಪಡೆದಿದ್ದ ಐದು ವರಗಳ ವೃತ್ತಾಂತವನ್ನು ಪತಿಗೆ ತಿಳಿಸಿ, ಆ ಮಂತ್ರಗಳ ಮಹಿಮೆಯಿಂದ ದೇವತೆಗಳನ್ನು ಆಹ್ವಾನಿಸಿಕೊಂಡು, ಅವರ ಅನುಗ್ರಹದಿಂದ ಸಂತಾನಭಿಕ್ಷೆಯನ್ನು ಪಡೆಯಲು ಅವಕಾಶವುಂಟೆಂದು ಸೂಚಿಸಿದಳು. ಪಾಂಡುರಾಜನಿಗೆ ಆ ಮಾತನ್ನು ಕೇಳಿ, ಪರಮಾನಂದವಾಯಿತೆಂದು ಹೇಳಬೇಕೇನು! ಒಡನೆ ಹಾಗೆ ಮಾಡಬಹುದೆಂದು ಅನುಮತಿಯಿತ್ತನು.

ಪತಿಯ ಆಜ್ಞೆಯನ್ನು ಪಡೆದ ಕುಂತೀದೇವಿಯು, ಒಡನೆ ಶುಭ್ರಜಲದಲ್ಲಿ ಮಿಂದು ಮಡಿಯುಟ್ಟು, ಧರ್ಮಾಧೀಶನಾದ ಯಮಧರ್ಮರಾಜನನ್ನು

ಪ್ರಾರ್ಥಿಸಿ ಮಂತ್ರದಿಂದ ಆಹ್ವಾನಿಸಿದಳು. ಉತ್ತರಕ್ಷಣದಲ್ಲೇ ಆ ದೇವಾ
ಧಿಪನು ಪ್ರತ್ಯಕ್ಷನಾಗಿ ತನ್ನನ್ನು ಬರಿಸಿದ ಕಾರಣವೇನೆಂದನು. ದೇವಿಯು
ಸಾಷ್ಟಾಂಗ ನಮಸ್ಕಾರಮಾಡಿ, - 'ದೇವಾ ಪುತ್ರಾಭಿಲಾಷಿಯಾದ ನನ್ನಲ್ಲಿ
ನಿನಗೆ ಸಮಾನಗುಣರೂಪಶೀಲಸಾಮರ್ಥ್ಯ ಯುಕ್ತನಾದ ಒಂದು ಸಂತಾ
ನವನ್ನು ಕರುಣಿಸಬೇಕೆಂದು ಬೇಡಿಕೊಂಡಳು. ಸಂತುಷ್ಟನಾದ ಆ ಧರ್ಮ
ದೇವನು, 'ತಥಾಸ್ತು'ವೆಂದು ಆಕೆಯನ್ನು ಸ್ಪರ್ಶಿಸಿ, ಅನುಗ್ರಹಿಸಿ ಅಂತರ್ಧಾನ
ನಾಗಿ ಹೋದನು. ಒಡನೆ ಗರ್ಭಧಾರಣಮಾಡಿದ ಆಕೆಯು, ನವಮಾಸ
ಗಳು ಕಳೆದ ತರುವಾಯ ಮುಂದೊಂದು ಶುಭದಿನದ ಶುಭ ಮುಹೂರ್ತದಲ್ಲಿ
ದಿವ್ಯಸುಂದರಾಕಾರನಾದ ಪುರುಷಶಿಶುವನ್ನು ಪ್ರಸವಿಸಿದಳು. ಆಶ್ರಮವಾಸಿ
ಮುನಿವರ್ಯರೆಲ್ಲರೂ, ಸರ್ವಲಕ್ಷಣಸಂಪನ್ನನಾಗಿದ್ದ ಆ ಶಿಶುವಿಗೆ 'ಯುಧಿ
ಷ್ಠಿರ'ನೆಂದು ನಾಮಕರಣಮಾಡಿದರು. ಆ ವೇಳೆಗೆ ಅತ್ತ ಗರ್ಭಿಣಿಯಾಗಿ
ದ್ದ ಗಾಂಧಾರಿಯು ತನಗಿನ್ನೂ ಪ್ರಸವೋದಯವಾಗದೆ, ತನ್ನ ಓರಗಿತ್ತಿಗೆ
ಶಿಶುಜನನವಾದುದಕ್ಕಾಗಿ ಅಸೂಯೆಗೊಂಡು ಗರ್ಭವನ್ನು ಘಾತಿಸಿಕೊಳ್ಳಲು
ಗರ್ಭವು ನೂರು ಚೂರುಗಳಾಗಿ ಹೊರಕ್ಕೆ ಬಿದ್ದಿತು. ಒಡನೆ ವೇದವ್ಯಾಸ
ರು ಪ್ರತ್ಯಕ್ಷರಾಗಿ, ಆಕೆಯ ಮೂರ್ಖತೆಗಾಗಿ ಆಕ್ಷೇಪಿಸಿ, ಅವುಗಳನ್ನೆತ್ತಿ ನೂ
ರು ತುಪ್ಪದ ಕೊಡಗಳಲ್ಲಿಟ್ಟು ಸಂರಕ್ಷಿಸುವಂತೆ ಆಜ್ಞಾಪಿಸಿದರು. ಯುಧಿ
ಷ್ಠಿರನು ಜನನವಾದ ತರುವಾಯ, ಪಾಂಡುರಾಜನು, ತನ್ನ ಪತ್ನಿಯನ್ನು ಕು
ರಿತು, - 'ನಮ್ಮ ಈ ಕುಮಾರನು, ಧರ್ಮಾತ್ಮನೂ ಸತ್ಯಸಂಧನೂ ಆಗುವನೆಂ
ದು ಮಹರ್ಷಿಗಳು ಹೇಳಿರುವರು. ರಾಜ್ಯಪಾಲನೆಗೆ ಸತ್ಯಧರ್ಮಗಳೊಂದಿಗೆ
ಬಲಪರಾಕ್ರಮಗಳಿರಬೇಕಾದುದೂ ಅವಶ್ಯಕವು. ಆದುದರಿಂದ ನಮ್ಮ ಕು
ವರನಿಗೆ ಸಹಾಯಕನಾಗಿರುವಂತೆ, ಮಹಾಬಲಶಾಲಿಯೂ, ಧೈರ್ಯ
ಶಾಲಿಯೂ ಆದ ಒಬ್ಬ ಮಗನನ್ನು ವಾಯುದೇವನ ಅನುಗ್ರಹದಿಂದ ಪಡೆ'
ಯೆಂದು ನಿಯಮಿಸಿದನು. ಕುಂತೀದೇವಿಯು ಮಂತ್ರಬಲದಿಂದ ವಾಯು
ದೇವನನ್ನು ಬರಮಾಡಿಕೊಂಡು, ಆತನಿಂದಲೂ ಸಂತಾನಭಿಕ್ಷೆಯನ್ನು ಪಡೆ
ದು ಯುಕ್ತಕಾಲದಲ್ಲಿ ಮಹಾಬಾಹುಬಲಸಂಪನ್ನನೆಂದು ಪ್ರಸಿದ್ಧನಾದ ಭೀಮ
ಸೇನನೆಂಬ ಪುತ್ರನನ್ನು ಪಡೆದಳು. ಇತ್ತ ಭೀಮಸೇನನು ಜನಿಸಿದ ದಿನವೇ
ಅತ್ತ ಹಸ್ತಿನಾವತಿಯಲ್ಲಿ ದುರ್ಯೋಧನನೂ ತರುವಾಯ ಕ್ರಮವಾಗಿ ಇತರ
ತೊಂಬತ್ತೊಂಬತ್ತು ಮಂದಿ ಮಕ್ಕಳೂ ಜನಿಸಿದರು.

ತರುವಾಯ ಮತ್ತೊಂದು ದಿನ ಪಾಂಡುವು ತನ್ನ ಪತ್ನಿ ಕುಂತೀದೇವಿಯನ್ನು ಬಳಿಗೆ ಕರೆದು, - 'ದೇವೀ, ನಮ್ಮ ಇಬ್ಬರು ಪುತ್ರರಲ್ಲಿ ಒಬ್ಬನು ಧರ್ಮಪಕ್ಷಪಾತಿಯೂ, ಮತ್ತೊಬ್ಬನು ಬಾಹುಬಲಸಂಪನ್ನನೂ ಆಗಿರುವರು. ಆದರೆ ಸಾಮ್ರಾಜ್ಯ ಸಂರಕ್ಷಣೆಗೆ ಅಷ್ಟುಮಾತ್ರವೇ ಸಾಲದು. ಸೂಕ್ಷ್ಮಮತಿಯೂ, ವಿಚಾರಶೀಲನೂ, ಧೈರ್ಯ ಸಾಹಸ ತೇಜಸ್ಸಂಪನ್ನನೂ ಆದ ಪುತ್ರನೊಬ್ಬನ ಆವಶ್ಯಕವೂ ಇದೆ. ಆದುದರಿಂದ ನೀನು ತ್ರಿಲೋಕಾಧಿಪತಿಯೂ, ದೇವಾಧಿಪನೂ ಆದ ದೇವೇಂದ್ರನನ್ನು ಪ್ರಾರ್ಥಿಸಿ, ಆತನಿಂದ ಒಬ್ಬ ತೇಜಸ್ವೀ ಕುಮಾರನನ್ನು ಪಡೆ' ಎಂದು ನುಡಿದನು. ಪತಿಯ ವಾಕ್ಯವನ್ನು ಕೇಳಿ ಪರಮ ಸಂತುಷ್ಟಳಾದ ಕುಂತೀದೇವಿಯು, ಸ್ನಾನಾದಿಗಳಿಂದ ಶುದ್ಧಳಾಗಿ, ಭಕ್ತಿಭಾವದಿಂದ ದೇವೇಂದ್ರಮಂತ್ರ ಪುನಶ್ಚರಣೆಮಾಡಿದಳು. ಒಡನೆ ಪ್ರತ್ಯಕ್ಷನಾದ ತ್ರಿಲೋಕಾಧಿಪತಿಯು, - 'ಎಲೌ ಸಾಧ್ವಿಯೇ ನನ್ನನ್ನು ಬರಮಾಡಿಕೊಂಡ ಕರ್ತವ್ಯವೇನೆ'ನ್ನಲು, ಕುಂತಿಯು 'ಸ್ವಾಮಿ! ಬೇರೇನು ಹೇಳಲಿ. ಪುತ್ರಾರ್ಥಿಯಾಗಿ ತಮ್ಮನ್ನು ಪ್ರಾರ್ಥಿಸಿದೆನು. ಮಹಾ ತೇಜಸ್ವಿಯೂ ಮೂರುಲೋಕದಲ್ಲೂ ನಮ್ಮ ವಂಶಕೀರ್ತಿಯನ್ನು ಪ್ರಸರಿಸುವಂತಹ ಅದ್ಭುತ ಪರಾಕ್ರಮಿಯೂ ಆದ ಒಬ್ಬ ಪುತ್ರರತ್ನವನ್ನು ಅನುಗ್ರಹಿಸಬೇಕು' ಎಂದು ಬೇಡಿಕೊಂಡಳು. ಆ ಶಚೀಪತಿಯು ಆಕೆಯ ಪ್ರಾರ್ಥನೆಯನ್ನು ಕೇಳಿ ಹಸನ್ಮುಖಿಯಾಗಿ, 'ತಥಾಸ್ತು'ವೆಂದು ನುಡಿದು ಹೊರಟುಹೋದನು. ಕುಂತೀದೇವಿಯು, ಪ್ರಕೃತಿ ನಿಯಮದಂತೆ ನವಮಾಸ ಗರ್ಭವನ್ನು ಹೊತ್ತು ಮುಂದೆ ಸಕಲ ಶುಭಗ್ರಹಗಳೂ ಉಚ್ಚಸ್ಥಾನದಲ್ಲಿದ್ದು ಶುಭ ಫಲಪ್ರದಂಗಳಾಗಿದ್ದ ಒಂದು ಶುಭ ಮುಹೂರ್ತದಲ್ಲಿ ಒಬ್ಬ ದಿವ್ಯ ಕುಮಾರನನ್ನು ಪ್ರಸವಿಸಿದಳು. ಆಗ ದೇವೇಂದ್ರನು, ಪುಷ್ಪವೃಷ್ಟಿಯನ್ನು ಸುರಿಸಿ ತನ್ನ ಆನಂದವನ್ನು ಪ್ರಕಟಿಸಿದನು. ದೇವದುಂದುಭಿಗಳಾದುವು. ಆಶ್ರಮವಾಸಿಗಳಾದ ಸಕಲರಿಗೂ ಕೇಳಿಸುವಂತೆ ಆಕಾಶವಾಣಿಯು, - 'ಈ ಶಿಶುವು ಶಿವನಿಗೆ ಸಮಾನವಾದ ಬಲವನ್ನೂ, ಕಾರ್ತವೀರ್ಯನಿಗೆ ಸಮವಾದ ಕ್ಷಾತ್ರವನ್ನೂ, ನಾರಾಯಣನಿಗೆ ಸಮಾನವಾದ ಜ್ಞಾನವನ್ನೂ ಪಡೆದು ಬೆಳೆಯುವುದು. ತನ್ನ ಪ್ರಾಯದಲ್ಲಿ ದಿಗ್ವಿಜಯಮಾಡಿ, ಈತನು ರಾಜಸೂಯಯಾಗ ಮಾಡಿಸುವನು. ಖಾಂಡವ ವನವನ್ನು ಸುಟ್ಟು ಯಜ್ಞೇಶ್ವರನ ಅನುಗ್ರಹವನ್ನು ಪಡೆಯುವನು.

ಶಿವನೊಂದಿಗೆ ಕಾದಿ ದಿವ್ಯಾಸ್ತ್ರಗಳನ್ನು ಪಡೆಯುವನು. ಶತ್ರುಗಳನ್ನು ಕೊಂದು, ಸಹೋದರರೊಂದಿಗೆ ಅಶ್ವಮೇಧಯಾಗವನ್ನು ಮಾಡುವನು. ಜಗದ್ವಿಖ್ಯಾತನಾದ ಈತನಿಗೆ ಧ ನ ಂ ಜ ಯ ( ಅ ರ್ಜು ನ ) ನೆಂದು ಹೆಸರಿಡಿರಿ' ಎಂದು ನುಡಿದಂತಾಯಿತು. ಅದನ್ನು ಕೇಳಿದ ಸಕಲರೂ ಪರಮಾಶ್ಚರ್ಯಮಗ್ನರಾದರು. ಪಾಂಡುರಾಜನು ಪರಮ ಸಂತುಷ್ಟನಾಗಿ ತನ್ನಾಶಿಸುವನ್ನು 'ಧನಂಜಯ' ಎಂಬ ಸಾರ್ಥಕನಾಮದಿಂದ ಕರೆದು, ಪತ್ನಿಯರೊಂದಿಗೆ ಆನಂದಿಸಿದನು. ತರುವಾಯ ಕುಂತೀದೇವಿಯು ಮಾದ್ರೀದೇವಿಗೆ ಮಿಕ್ಕ ಒಂದು ಮಂತ್ರವನ್ನು ಉಪದೇಶಿಸಲು, ಆಕೆಯು ಅಶ್ವಿನೀ ದೇವತೆಗಳನ್ನು ಆರಾಧಿಸಿ ಅವಳಿ ಮಕ್ಕಳನ್ನು ಪಡೆದಳು. ಮಾತಾಪಿತೃಗಳು ಆ ಶಿಶುಗಳಿಗೆ ನಕುಲ - ಸಹದೇವ ಎಂದು ನಾಮಕರಣ ಮಾಡಿದರು. ಹೀಗೆ ಪಾಂಡುರಾಜನು ಯುಧಿಷ್ಠಿರ, ಭೀಮಸೇನ, ಅರ್ಜುನ, ನಕುಲ, ಸಹದೇವ, ಎಂಬ ಐವರು ಮಕ್ಕಳಿಂದ ಕೂಡಿ, ತಾನೇ ಪರಮ ಧನ್ಯನೆಂದುಕೊಂಡನು. ಕುರು - ಪಾಂಡು ಸಂತಾನರು ದಿನದಿನಕ್ಕೆ ಶುಕ್ಲಪಕ್ಷದ ಚಂದ್ರಕಳೆಯಂತೆ ವೃದ್ಧಿಹೊಂದುತ್ತಾ ತಮ್ಮ ಮಾತಾಪಿತೃಗಳಿಗೆ ಪರಮಾನಂದದಾಯಕರಾಗಿದ್ದರು.



## ಅಧ್ಯಾಯ ೨. "ಶಸ್ತ್ರ ವಿದ್ಯಾಭ್ಯಾಸ"

ಸಂಸಾರಿಗಳಿಗೆ ನಿರಂತರ ಸುಖಾನುಭವವು ದುರ್ಲಭವು. ಸುಖದ ಮೇಲೆ ದುಃಖವೂ, ದುಃಖದ ಮೇಲೆ ಸುಖವೂ, ಸಮುದ್ರದ ಅಲೆಗಳಂತೆ ಒಂದರಮೇಲೊಂದು ತಪ್ಪದೆ ಬರುತ್ತಿರುವುದು. ವಿವೇಕಿಗಳಾದವರು, ಸಂಸಾರದ ಈ ಸ್ವಭಾವವನ್ನು ಅರಿತು, ಸುಖ ಬಂದಿತೆಂದು ಮೆರೆಯದೆಯೂ, ದುಃಖ ಬಂದಿತೆಂದು ಕೊರಗದೆಯೂ, ಇದ್ದು ನಿರಂತರ ಶಾಂತಿಯನ್ನು ಅನುಭವಿಸುವರು. ಅವಿವೇಕಿಗಳಾದರೋ, ಇದರ ನಿಶ್ಚಯ ಸ್ವರೂಪವನ್ನು ಗ್ರಹಿಸಲಾರದೆ, ಸುಖ ದುಃಖಗಳ ಉಬ್ಬರ ವಿಳಿತಗಳಿಗೆ ಒಳಪಟ್ಟು, ಸಂತೋಷ - ವ್ಯಸನಗಳ ಕೋಟಲೆಯಿಂದ ಸದಾ ತಳಮಳಗೊಳ್ಳುತ್ತಿರುವರು.

ಮುನಿಶಾಪದಿಂದ ಸ್ತ್ರೀ ಸಂಗಕ್ಕೆ ದೂರನಾಗಿದ್ದರೂ, ಲೋಕಪಾಲಕರಾದ ದೇವ ಮುಖ್ಯರ ಅನುಗ್ರಹದಿಂದ ಪುತ್ರಸಂಪತ್ತನ್ನು ಪಡೆದ ಪಾಂಡು

ರಾಜನು, ಅವರ ಅಭಿವೃದ್ಧಿಯನ್ನೂ, ಅವರ ರಾಜ್ಯಪಾಲನಾದಿ ಮಹತ್ಕಾರ್ಯ
ಗಳನ್ನೂ ನೋಡಲು ಜೀವಿಸಿರುವ ಪ್ರಾಪ್ತಿಯಿಲ್ಲದಂತಾಯಿತು. ಮುಂ
ದೊಂದು ವಸಂತಕಾಲದಲ್ಲಿ ಆತನು ಕಾಮಬಾಧೆಯನ್ನು ತಡೆಯಲಾರದೆ, ಸುಂ
ದರೀಮಣಿಯಾದ ತನ್ನ ಪತ್ನಿ ಮಾದ್ರಿದೇವಿಯನ್ನು ತುಡುಕಿ, ಮುನಿಶಾಪದಿಂ
ದ ಒಡನೆ ಧರೆಗುರುಳಿ ಅಸುವನ್ನು ನೀಗಿದನು. ಕಾಡುಕಿಚ್ಚಿನಿಂದ ಬೆಂದ ಹೆ
ಮ್ಮರನಂತೆ, ಶಾಪಗ್ರಸ್ತನಾಗಿ ಮೃತನಾದ ಆ ಮಹಾರಾಜನನ್ನು ಕಂಡು,
ಕುಂತೀ ಮಾದ್ರಿಯರೂ ಐದುಮಂದಿ ಚಿಕ್ಕಮಕ್ಕಳೂ, ಕಲ್ಮರಗಳು ಕರ
ಗುವಂತೆ ರೋದಿಸಿದರು. ಅವರ ಅನಾಥ ಸ್ಥಿತಿಯನ್ನು ಕಂಡು, ವನವಾಸಿ
ಗಳಾದ ಮುನಿಗಳಿಗೂ ಮರುಕವುಂಟಾಯಿತು. ಅವರು ಅನೇಕ ಬಗೆಯಿಂ
ದ ಧರ್ಮೋಪದೇಶಮಾಡಿ ವ್ಯಸನವನ್ನು ನೀಗಿಸಲು ಪ್ರಯತ್ನಿಸಿದರು. ಕೊ
ನೆಗೆ ಮಾದ್ರೀದೇವಿಯು ತನ್ನ ಮಕ್ಕಳನ್ನು ಕುಂತೀದೇವಿಯ ವಶಕ್ಕೆ ಕೊ
ಟ್ಟು, ಪತಿದೇಹದೊಂದಿಗೆ ಸಹಗಮನಮಾಡಿದಳು.

ತರುವಾಯ ಕುಂತೀದೇವಿಯು ಚಿಕ್ಕಮಕ್ಕಳೊಂದಿಗೆ ಮುಂದೆ ವನ
ದಲ್ಲಿರುವುದು ಯೋಗ್ಯವಲ್ಲವೆಂದು ಭಾವಿಸಿ ತನ್ನ ಆ ಐದು ಮಕ್ಕಳನ್ನೂ
ಕರೆದುಕೊಂಡು ಹೊರಟು, ಹಸ್ತಿನಾವತಿಯನ್ನು ಸೇರಿದಳು. ಭೀಷ್ಮಾದಿಗ
ಳು ಪಾಂಡುರಾಜನಿಗೆ ಪ್ರಾಪ್ತವಾದ ಅಕಾಲ ಮರಣವಾರ್ತೆಯನ್ನು ಕೇಳಿ
ಕಡುಮರುಗಿ, ಉತ್ತರಕ್ರಿಯಾದಿಗಳನ್ನು ನೆರವೇರಿಸಿ, ದೇವಕುಮಾರರಂತೆ
ತೇಜಸ್ವಿಗಳಾಗಿದ್ದ ಯುಧಿಷ್ಠಿರ, ಭೀಮಾರ್ಜುನ, ನಕುಲ ಸಹದೇವರನ್ನು
ಎತ್ತಿ ಆಡಿಸಿ ಮುದ್ದಿಸುತ್ತಾ, ತಂದೆಯು ಹೋದನೆಂಬ ವ್ಯಸನವು ಅವರ
ಮನಸ್ಸಿಗೆ ತಟ್ಟಿ ವ್ಯಸನವುಂಟಾಗದಂತೆ ಕಾಪಾಡುತ್ತಿದ್ದನು. ಪಾಂಡವ
ರೂ ತಮ್ಮ ತಾಯಿಯಾದ ಕುಂತೀದೇವಿಯೊಂದಿಗೆ ಪ್ರತ್ಯೇಕವಾದೊಂದು
ಅರಮನೆಯಲ್ಲಿ ವಾಸಿಸುತ್ತಾ ದಿನದಿನಕ್ಕೆ ಕ್ಷಣಕ್ಷಣಕ್ಕೆ ಅಭಿವೃದ್ಧಿಯಾಗು
ತ್ತಾ, ಭೀಷ್ಮ ವಿದುರ ಮುಂತಾದ ಕುರುವೃದ್ಧರಿಗೆ ನೇತ್ರಾನಂದಕರರಾಗಿ
ಬೆಳೆಯುತ್ತಿದ್ದರು.

'ಹುಟ್ಟುತ ಅಣ್ಣತಮ್ಮಂದಿರು - ಬೆಳೆಯುತ ದಾಯಾದ್ಯರು' ಎಂಬ
ಲೋಕವಾರ್ತೆಯು ಈ ಪಾಂಡವ - ಕೌರವರಲ್ಲಿ ಸಾರ್ಥಕವಾಯಿತು. ಕೌ
ರವ ಪಾಂಡವರು ಸೋದರರ ಮಕ್ಕಳಾಗಿ, ಅಣ್ಣತಮ್ಮಂದಿರೇ ಆದರೂ, ಅವ

ದಲ್ಲಿ ಸ್ನೇಹ ಪ್ರೇಮಗಳು ಚಿರಕಾಲ ಉಳಿಯಲಿಲ್ಲ. ಮುಂದೆ ಬಹು ಕಾಲದ ಮೇಲೆ ನಡೆದ ಕುಲಕ್ಷಯಕಾರಿಯಾದ ಭಾರತ ಮಹಾಯುದ್ಧಕ್ಕೆ ಬೀಜಾವಾಪನೆಯು ಅವರ ಬಾಲ್ಯದಲ್ಲಿಯೇ ಆಯಿತು. ಐದುಮಂದಿ ಪಾಂಡವರೂ, ನೂರುಮಂದಿ ಕೌರವರೂ ಸೇರಿ ಬಾಲ್ಯದ ವಿವಿಧ ಆಟಗಳನ್ನು ಆಡುವರು. ಆ ನೂರೈದುಮಂದಿಯಲ್ಲಿ ಮಹಾಬಲಶಾಲಿಯಾದ ಭೀಮನು, ಎಲ್ಲರನ್ನೂ ಸೋಲಿಸಿ ಓಡಿಸುವನು. ಈ ಬಗೆಯ ಪರಾಭವವು, ಮಹಾ ಅಭಿಮಾನಿಯಾದ ದುರ್ಯೋಧನನಿಗೆ ಸಹನೆಯಾಗದು. ಈ ಭೀಮಸೇನನ್ನು ಹೀಗೆಯೇ ಬೆಳೆದು ಬಲಿಯುತ್ತಿದ್ದರೆ, ಮುಂದೆ ತಪ್ಪದೆ ತನಗೆ ಪ್ರಾಣಾಂತ್ಯಕಾರಿಯಾಗುವನೆಂದು ಅವನಿಗೆ ಮನವರಿಕೆಯಾಯಿತು. ತನಗೆ ದ್ವೇಷಿಯಾದ ಆ ವಿಷವೃಕ್ಷದ ಸಸಿಯನ್ನು ಆಗಲೇ ಸುಟ್ಟುಬಿಡಬೇಕೆಂದು ಯೋಚಿಸಿ, ಭೀಮನಿಗೆ ವಿಷಬೆರೆದ ಕಜ್ಜಾಯಗಳನ್ನು ತಿನಲಿತ್ತು - ಕೈಕಾಲುಗಳನ್ನು ಕಟ್ಟಿ ಆಳವಾದ ಮಡುವಿನಲ್ಲಿ ಎತ್ತಿಹಾಕಿ, ಹೀಗೆ ಹಲವು ಬಗೆಯಿಂದ ಅವನ ಪ್ರಾಣಹರಣಮಾಡಲುದ್ಯುಕ್ತನಾದನು. ಆದರೆ ಭೀಮನು, ಆ ದಾಯಾದಿಯು ತಂದೊಡ್ಡಿದ ಯಾವ ಅಪಾಯದಿಂದಲೂ ಮೃತನಾಗದೆ ಬದುಕಿದನು.

ದಿನದಿನಕ್ಕೆ ಅಭಿವೃದ್ಧಿ ಹೊಂದುತ್ತಿದ್ದ ಆ ಕ್ಷತ್ರಿಯ ಬಾಲಕರಿಗೆ ಯೋಗ್ಯ ಧನುರ್ವಿದ್ಯಾಭ್ಯಾಸವನ್ನು ಒದಗಿಸಿ ಪ್ರಬುದ್ಧರನ್ನಾಗಿ ಮಾಡಬೇಕೆಂದು ಭೀಷ್ಮಾಚಾರ್ಯನು ಯೋಚಿಸಿ, ಸಕಲ ಶಸ್ತ್ರಾಸ್ತ್ರ ಪಂಡಿತನಾದ ಧನುರ್ವೇದಾಚಾರ್ಯನೊಬ್ಬನನ್ನು ಹುಡುಕುತ್ತಿದ್ದ ಕಾಲಕ್ಕೆ ಸರಿಯಾಗಿ, ದ್ರೋಣಾಚಾರ್ಯನು ಮಾರ್ಗಸ್ಥನಾಗಿ ಹಸ್ತಿನಾಪುರದ ಹೊರವಳಯದಲ್ಲಿ ಕಾಣಿಸಿಕೊಂಡನು. ಅಲ್ಲೇ ಆಡುತ್ತಿದ್ದ ರಾಜಪುತ್ರರು, ಕೇವಲ ಸಾಮಾನ್ಯ ಬ್ರಾಹ್ಮಣನಂತೆ ತೋರುತ್ತಿದ್ದ ಆತನ ಪ್ರತಿಭೆಯನ್ನು ಕಂಡುಹಿಡಿಯಲು ಒಂದು ಸಂದರ್ಭವೊದಗಿತು. ಆಡುತ್ತಾಡುತ್ತ ಆಕಸ್ಮಾತ್ತಾಗಿ ಧರ್ಮಜನ ಕೈಲಿದ್ದ ನವರತ್ನ ಖಚಿತವಾದ ಉಂಗುರವು ಕಳಚಿ ಪಕ್ಕದಲ್ಲಿದ್ದ ಬಾವಿಯಲ್ಲಿ ಬೀಳಲು, ಅದನ್ನು ತೆಗೆಯುವ ಮಾರ್ಗವನ್ನು ಅರಿಯದೆ ಬಾಲಕರೆಲ್ಲರೂ ಕಳವಳಪಡುತ್ತ, ಬಾವಿಯ ಕಟ್ಟೆಯ ಸುತ್ತಲೂ ಓಡಾಡುತ್ತಿದ್ದರು. ಅವರ ಕಳವಳವನ್ನು ಕಂಡ ದ್ರೋಣಾಚಾರ್ಯನು ತಾನು ಅದನ್ನು ತೆಗೆದುಕೊಡುತ್ತೇನೆಂದು ಹೇಳಿ, ತನ್ನ ಬಾಣಪ್ರಯೋಗಕುಶಲತೆಯಿಂದ ಕ್ಷಣಮಾತ್ರದಲ್ಲಿ

ಆ ಉಂಗುರವನ್ನು ತೆಗೆದುಕೊಟ್ಟನು. ಅಂತಹ ಅದ್ಭುತವನ್ನು ಆವರೆಗೆ ಕಂಡುಕೇಳಿ ಅರಿಯದಿದ್ದ ಆ ಬಾಲಕರು ಒಡನೆ ಓಡಿಹೋಗಿ ತಮ್ಮ ಮುತ್ತಾತನಾದ ಭೀಷ್ಮಾಚಾರ್ಯನನ್ನು ಕಂಡು ಆತನು ನಡೆಸಿದ ಆಶ್ಚರ್ಯಕಾರ್ಯವನ್ನು ತಿಳಿಸಿ, ಆ ಬ್ರಾಹ್ಮಣನನ್ನು ಕರೆಸಿ ಆತನಿಂದ ತಮಗೆ ಧನುರ್ವಿದ್ಯೆಯನ್ನು ಪಾಠಹೇಳಿಸಬೇಕೆಂದು ಕೇಳಿಕೊಂಡರು. ಭೀಷ್ಮಾಚಾರ್ಯನು, ಬಾಲಕರ ಆ ಪ್ರಾರ್ಥನೆಯನ್ನು ಮನ್ನಿಸಿ, ತನ್ನ ಪುರೋಹಿತನ ಮೂಲಕ ಆವರನ್ನು ಮರ್ಯಾದೆಯಿಂದ ಬರಮಾಡಿಕೊಂಡು, ಅರ್ಘ್ಯಪಾದ್ಯಾದಿಗಳಿಂದ ಆದರಿಸಿ, ಕುಶಲಪ್ರಶ್ನೆಯನ್ನು ಮಾಡಿ, ತಮ್ಮ ರಾಜಧಾನಿಯಲ್ಲೇ ನಿಂತು ಕುರುಕುಲಸ್ಥ ಆ ನೂರೈದುಮಂದಿ ರಾಜಕುಮಾರರಿಗೂ ಧನುರ್ವಿದ್ಯಾಶಿಕ್ಷಣವನ್ನು ಕೊಡಬೇಕೆಂದು ಪ್ರಾರ್ಥಿಸಿದನು. ದ್ರೋಣಾಚಾರ್ಯನೂ ಆ ಮಾತಿಗೆ ಒಪ್ಪಿದನು. ಒಡನೆ ಊರಹೊರಗೆ ಪ್ರಶಸ್ತವಾದ ಒಂದು ಸ್ಥಳದಲ್ಲಿ ಶಿಕ್ಷಣಾಗಾರವು ನಿರ್ಮಿಸಲ್ಪಟ್ಟಿತು. ನೂರುಮಂದಿ ಕೌರವರೂ, ಐದುಮಂದಿ ಪಾಂಡವರೂ ಆಚಾರ್ಯರಲ್ಲಿ ಶಿಷ್ಯವೃತ್ತಿಯನ್ನು ವಹಿಸಿ ಧನುರ್ವೇದಾಭ್ಯಾಸ ಮಾಡತೊಡಗಿದರು.

ಒಬ್ಬ ತಂದೆಯ ಉದರದಲ್ಲ ಜನ್ಮಿಸಿದ ಹಲವು ಮಂದಿ ಮಕ್ಕಳಲ್ಲಿ ಎಲ್ಲರೂ ಒಂದೇ ಬಗೆಯ ರೂಪು ಗುಣ ಶೀಲ ಸ್ವಭಾವಗಳನ್ನುಳ್ಳವರಾಗಿರುವುದಾಗಲೀ, ಒಬ್ಬ ಗುರುವಿನಲ್ಲಿ ಕಲಿತ ಶಿಷ್ಯರೆಲ್ಲರೂ ಸಮಾನಯೋಗ್ಯತೆಯನ್ನು ಹೊಂದುವುದಾಗಲೀ, ಲೋಕದಲ್ಲ ಅಸಂಭವವಲ್ಲವೆ? ದ್ರೋಣಾಚಾರ್ಯನಲ್ಲಿ ವಿದ್ಯಾಭ್ಯಾಸ ಮಾಡಿದ ಆ ನೂರೈದುಮಂದಿ ರಾಜಪುತ್ರರಲ್ಲಿ ಎಲ್ಲರೂ ಒಂದೇ ರೀತಿಯ ಅಭಿವೃದ್ಧಿಯನ್ನು ಹೊಂದಲಿಲ್ಲ. ಎಲ್ಲರಿಗಿಂತಲೂ ಅರ್ಜುನನ ಪ್ರತಿಭೆಯು ಅತಿಶಯವೆನಿಸಿತು. ಧನುರ್ವಿದ್ಯೆಯ ಮೂಲಸೂತ್ರವಾದ ಲಕ್ಷ್ಯಸಾಧನೆಯಲ್ಲಿ ಆತನಿಗಿದ್ದ ಕೌಶಲವು ಅದ್ವಿತೀಯವೆನಿಸಿತು. ಗುರುವು ತನ್ನ ಶಿಷ್ಯರೆಲ್ಲರಿಗೂ ಸಮಾನ ಶ್ರದ್ಧೆಯಿಂದ ಕಲಿಸುತ್ತಿದ್ದರೂ, ಅವರಲ್ಲಿ ಪ್ರತಿಭಾವಂತನು ಮಾತ್ರವೇ ಗುರುವಿನ ಹೃದಯವೇನೆಂಬುದನ್ನು ಅರಿತು ಆತನ ಪ್ರೀತಿಗೆ ಪಾತ್ರನಾಗುವನು. ಅರ್ಜುನನಾದರೂ ಹಾಗೆಯೇ ಗುರುವಿನ ಬಾಯಿಯಿಂದ ಬಂದ ಒಂದೊಂದು ಮಾತನ್ನೂ, ಆತನು ಸೂಚಿಸಿದ ಒಂದೊಂದು ಸಂಗತಿಯನ್ನೂ ಲಕ್ಷ್ಯವಿಟ್ಟು ನೋಡಿ, ನಿಶ್ಚಲಮತಿಯಿಂದ

ಲೂ, ನಿರಂತರ ಅಭ್ಯಾಸದಿಂದಲೂ, ಆತನ ಶಿಷ್ಯಾಗ್ರೇಸರನೆನ್ನಿಸಿದನು. ಸೂಕ್ಷ್ಮಮತಿಯೂ ಶ್ರದ್ಧಾಳುವೂ ಆದ ಅವನ ಮೇಲೆ ಸ್ವಾಭಾವಿಕವಾಗಿಯೇ ಗುರುವಿಗೆ ಅತಿಶಯಪ್ರೀತಿ ವಿಶ್ವಾಸಗಳುಂಟಾದುವು.

ರಾಜಪುತ್ರರಿಗೆ ಯುಕ್ತವಾದ ಕತ್ತಿ, ಗುರಾಣಿ, ಈಟಿ, ಗದೆ, ಕುಂತ, ಪ್ರಾಸ, ಲಾಳಮುಂಡಿಗೆ, ಕೊಡಲಿ, ದೊಣ್ಣೆ ಮುಂತಾದ ಹಲವು ಆಯುಧ ಪ್ರಯೋಗಗಳಲ್ಲಿ ಅರ್ಜುನನು ಎಲ್ಲರಂತೆಯೇ, ಪಾಂಡಿತ್ಯವನ್ನು ಸಂಪಾದಿಸಿದನಾದರೂ, ಧನುರ್ಬಾಣಗಳ ಉಪಯೋಗದ ವಿಷಯದಲ್ಲಿ ಆತನ ಪಾಂಡಿತ್ಯವು ಸಕಲರನ್ನೂ ಮೀರಿಸಿತು. ಗುರಿಯಿಟ್ಟು ಬಾಣವನ್ನು ಹೊಡೆವುದರಲ್ಲಿ ಅವನನ್ನು ಮೀರಿಸಿದವರೇ ಇಲ್ಲ. ಕಣ್ಣಿನಿಂದ ನೋಡಿ ಗುರಿಯಿಡುವುದಲ್ಲ, — ಕಿವಿಯಿಂದ ಶಬ್ದವನ್ನು ಕೇಳಿ, ಶಬ್ದ ಬಂದ ಸ್ಥಳದಿಂದ, ವಸ್ತುವಿನ ನೆಲೆಯನ್ನು ಗುರುತಿಸಿ ಅದಕ್ಕೆ ಗುರಿಯಿಟ್ಟು ಬಾಣ ಪ್ರಯೋಗಮಾಡುವ 'ಶಬ್ದವೇಧೀ' ಎಂಬ ಅದ್ಭುತ ವಿದ್ಯಾಸಾಮರ್ಥ್ಯವಾದರೂ ಆತನಿಗೆ ಲಭ್ಯವಾಗಿದ್ದಿತು. ಮಾತ್ರವಲ್ಲ - ಐಂದ್ರಾಸ್ತ್ರ, ವಾರುಣಾಸ್ತ್ರ, ವಾಯುವ್ಯಾಸ್ತ್ರ, ಆಗ್ನೇಯಾಸ್ತ್ರ, ಪರ್ವತಾಸ್ತ್ರ, ವಜ್ರಾಸ್ತ್ರ ಮುಂತಾದ ಹಲವು ಮಂತ್ರಾಸ್ತ್ರಗಳ ಪ್ರಯೋಗ ಉಪಸಂಹಾರಗಳ ಮರ್ಮವಾದರೂ ಗುರುವಿನ ಅನುಗ್ರಹದಿಂದ ಆತನಿಗೆ ಲಭ್ಯವಾಗಿದ್ದುವು.

ಶಿಷ್ಯರು ಕಲಿತುದನ್ನು ಪರೀಕ್ಷಿಸುವುದಕ್ಕಾಗಿ, ದ್ರೋಣಾಚಾರ್ಯನು, ಆಗಾಗ್ಗೆ ಭೀಷ್ಮಾಚಾರ್ಯನೇ ಮುಂತಾದ ಕುರುವೃದ್ಧರನ್ನೂ, ದೇಶವಿದೇಶದ ಹಲವುಮಂದಿ ರಾಜರನ್ನೂ, ಆಹ್ವಾನಿಸಿ ದೊಡ್ಡ ಸಭೆ ನೆರೆಯಿಸಿ, ಆ ಸಭಾಸಮಕ್ಷಮದಲ್ಲಿ ಪ್ರಯೋಗವನ್ನು ಹೂಡುವನು. ಅಂತಹ ಸಭೆಗಳಲ್ಲೆಲ್ಲ, ಅರ್ಜುನನು ತನ್ನ ಬಾಣಪ್ರಯೋಗಚಮತ್ಕೃತಿಯಿಂದ ಸಕಲರನ್ನೂ ಬೆರಗುಗೊಳಿಸಿ, ಎಲ್ಲರಿಂದಲೂ ಮೆಚ್ಚುಗೆಯನ್ನು ಪಡೆಯುವನು. ಒಂದು ವಸ್ತುವಿಗೆ ಗುರಿಯಿಡುವಲ್ಲಿ ಆತನಿಗೆ ಲಭ್ಯವಾಗಿದ್ದ ಏಕಾಗ್ರತೆಯು ಆ ಕಾಲದಲ್ಲೇ ಮತ್ತಾರಿಗೂ ಲಭ್ಯವಾಗಿರಲಿಲ್ಲವೆಂದು ಹೇಳಿದೆಯಲ್ಲವೆ! ಒಂದಾನೊಂದುವೇಳೆ ಆಚಾರ್ಯನು, ಲಕ್ಷ್ಯಸಾಧನೆಯಲ್ಲಿ, ತನ್ನ ಶಿಷ್ಯರೆಲ್ಲರನ್ನೂ ಪರೀಕ್ಷಿಸಲೆಳೆಸಿ, ಮರದಿಂದ ಒಂದು ಪಕ್ಷಿಯ ಆಕೃತಿಯನ್ನು ಮಾಡಿಸಿ, ಅದನ್ನೊಂದು ಮರದ ಮೇಲಿಟ್ಟು, ಅದರ ಕಂಠಪ್ರದೇಶಕ್ಕೆ ಬಾಣಪ್ರಯೋಗ

ಮಾಡಿ, ತಲೆಯನ್ನು ಕೆಳಕ್ಕೆ ಕೆಡಹಬೇಕೆಂದು ಆಜ್ಞಾಪಿಸಿದನು. ಆದರೆ ಆ
ಪಕ್ಷಿಯ ಕಂಠಪ್ರದೇಶಕ್ಕೆ ಗುರಿಯಿಡುವುದೇ ಅನೇಕರಿಗೆ ಅಸಾಧ್ಯವೆನ್ನಿಸಿತು.
ದುರ್ಯೋಧನ, ದುಶ್ಯಾಸನ, ಕರ್ಣ, ನಕುಲ, ಸಹದೇವ ಮುಂತಾದ ಹಲ
ವು ಮಂದಿ ರಾಜಪುತ್ರರು ಪ್ರಯತ್ನಿಸಿದರು. ಗುರುವು ತಪ್ಪದೆ ಒಬ್ಬೊಬ್ಬ
ನನ್ನೂ- 'ಗುರಿಯಿಟ್ಟು ಬಾಣಪ್ರಯೋಗ ಮಾಡಲು ಒಂದು ಪಕ್ಷಿಯ ಕಂಠ
ವನ್ನು ಕತ್ತರಿಸಲಿರುವ ನಿನಗೆ ಏನೇನು ಕಾಣಿಸುತ್ತಿದೆ ಹೇಳು' ಎಂದು ಪ್ರಶ್ನಿ
ಸುವನು. ಅವರಲ್ಲೊಬ್ಬೊಬ್ಬನೂ, ಮರವೂ ಅದರ ಕೊಂಬೆಯೂ ಅದರ
ಮೇಲಿರುವ ಪಕ್ಷಿಯೂ ಅದರ ತಲೆಯೂ ಕಾಣಿಸುತ್ತವೆಂದು ಉತ್ತರ ಹೇಳಿದ
ರು. ಅದನ್ನು ಕೇಳಿದ ಗುರುವು ಅಷ್ಟು ವಸ್ತುಗಳನ್ನೂ ಏಕಕಾಲದಲ್ಲಿ ನೋ
ಡುವ ಅವರು, ಯಾವ ವಸ್ತುವಿನ ಮೇಲೂ, ಗೊತ್ತಾಗಿ ಲಕ್ಷ್ಯವಿಡಲಾರ
ರೆಂದು ನಿರ್ಧರಿಸಿ ಎಲ್ಲರನ್ನೂ ತೊಲಗಿಸಿ, ಕೊನೆಗೆ ಒಂದು ಸಿದ್ಧನಾಗಿ ಕುಳಿ
ತ ಅರ್ಜುನನನ್ನು ಕುರಿತು, ನಿನಗೆ ಏನು ಕಾಣಿಸುತ್ತದೆಂದು ಕೇಳಿದನು. ಆಗ
ಲಾ ಪ್ರವೀಣನು - 'ಗುರುವೇ, ನನಗೆ ಪಕ್ಷಿಯ ಕತ್ತೂ ಮತ್ತು ಅದರ ತಲೆ
ಇಷ್ಟುಮಾತ್ರವೇ ಕಾಣಿಸುತ್ತವೆ' ಎಂದು ನುಡಿದು, ಬಾಣಪ್ರಯೋಗಮಾಡಿ,
ಕ್ಷಣಮಾತ್ರದಲ್ಲಿ ಅದರ ತಲೆಯನ್ನು ನೆಲಕ್ಕೆ ಕೆಡಹಿದನು. ಬೇರೊಂದು
ಸಂದರ್ಭದಲ್ಲಿ ನದಿಯಲ್ಲಿಳಿದು ಸ್ನಾನಮಾಡುತ್ತಿದ್ದ ಗುರುವಿನ ಕಾಲನ್ನು
ಯಾವುದೋ ಒಂದು ಜಲಚರಪ್ರಾಣಿಯು ಹಿಡಿದು ಕಚ್ಚಿ ಬಾಧಿಸುತ್ತಿರಲು,
ಧನಂಜಯನು ಗುರುವಿನ ದೇಹಪ್ರಮಾಣವನ್ನೂ, ಆ ಪ್ರಮಾಣವನ್ನನುಸ
ರಿಸಿ, ನೀರಿನೊಳಗಡೆ ಮುಳುಗಿದ್ದ ಕಾಲಿನ ಭಾಗವನ್ನೂ ಗೊತ್ತುಹಿಡಿದು,
ಅದರಿಂದ ಪಾದವನ್ನು ಹಿಡಿದಿದ್ದ ಆ ಪ್ರಾಣಿಯು ಇದ್ದ ಎಡೆಯನ್ನು ನಿರ್ಧರಿಸಿ,
ಬಾಣಪ್ರಯೋಗಮಾಡಿ ಅದನ್ನು ಸಂಹರಿಸಿ, ಗುರುವಿನ ಮೆಚ್ಚುಗೆಗೆ ಪಾತ್ರ
ನಾದನು. ಅವನ ಆ ಸಾಮರ್ಥ್ಯವನ್ನೂ, ಬಾಣ ಪ್ರಯೋಗದ ಚಾತುರ್ಯ
ವನ್ನೂ ಕಂಡು ಸಕಲರೂ ಪರಮಾಶ್ಚರ್ಯ ಮಗ್ನರಾದರು.

ತಮ್ಮ ದಾಯಾದಿಗಳಾದ ಪಾಂಡವರಲ್ಲಿ ಭೀಮಸೇನನ ಬಾಹುಬಲ
ವನ್ನು ಕಂಡು, ದುರ್ಯೋಧನಾದಿಗಳು ಅಸೂಯೆಪಟ್ಟು ಅವನನ್ನು ಕೊಲ್ಲ
ಲು ಯತ್ನಿಸಿದ್ದ ಸಂದರ್ಭಗಳು ಈವರೆಗೇ ಪರಿಚಯವುಂಟಲ್ಲವೆ? ಈಗ ಅರ್ಜು
ನನು, ಬಿಲ್ಲುವಿದ್ಯೆಯಲ್ಲಿ ಪಡೆದ ಅಸಾಮಾನ್ಯ ಸಾಮರ್ಥ್ಯವಾದರೂ ಅವರ

ಕಣ್ಣು ಕುಕ್ಕದಿರಲಿಲ್ಲ. ಅದಕ್ಕೆ ಯಾವ ಬಗೆಯಿಂದಲೂ ಪ್ರತೀಕಾರ ಮಾ
ಡಲು ಸಾಧ್ಯವಿಲ್ಲದ ಅವರು, ದ್ರೋಣಾಚಾರ್ಯರನ್ನೇ ಪ್ರತ್ಯೇಕವಾಗಿ ಪ್ರಾ
ರ್ಥಿಸಿಕೊಂಡು. ಅರ್ಜುನನಿಗೆ ಪರಿಚಯವಿಲ್ಲದಂತೆ, ತಮಗೆ ಮಂತ್ರಾಸ್ತ್ರ
ಪ್ರಯೋಗಗಳನ್ನು ಕಲಿಸಿಕೊಡುವಂತೆ ಏರ್ಪಡಿಸಿಕೊಂಡರು. ಹಾಗೆ ಅ
ವರು ರಹಸ್ಯವಾಗಿ ಕಲಿಸಿದ ವಿದ್ಯೆಯು ಮರ್ಮವಾದರೂ, ಪ್ರತಿಭಾನ್ವಿತನಾದ
ಅವನಿಗೆ ತಿಳಿದುಹೋಯಿತು. ಒಡನೆ ಅದರ ಪ್ರಯೋಗಮಾಡಿ, ಆ ಮಂ
ತ್ರಾಸ್ತ್ರದ ಮರ್ಮವನ್ನೂ ಸ್ವಾಧೀನ ಪಡಿಸಿಕೊಂಡು, ಗುರುವನ್ನೂ ಇತರ
ರನ್ನೂ ಆಶ್ಚರ್ಯ ಮಗ್ನರನ್ನಾಗಿ ಮಾಡಿಬಿಟ್ಟನು.

ದ್ರೋಣಾಚಾರ್ಯನು, ಹಸ್ತಿನಾವತಿಯ ರಾಜ ಮನೆತನದ ಬಾಲಕ
ರಿಗೆ ಶಸ್ತ್ರವಿದ್ಯೆಯನ್ನು ಕಲಿಸುವಲ್ಲಿ, ಕೇವಲ ಜೀವನೋಪಾಯ ಸಂಪಾದನೆ
ಯನ್ನು ಮಾತ್ರವೇ ಉದ್ದೇಶವನ್ನಾಗಿಟ್ಟುಕೊಂಡಿರಲಿಲ್ಲ. ತನ್ನ ಸಹಾಧ್ಯಾ
ಯಿಯಾಗಿದ್ದ ದ್ರುಪದರಾಜನು, ತನಗೆ ಮನಃಪೂರ್ವಕವಾಗಿ ಮಾಡಿದ್ದ ಅಪ
ಮಾನಕ್ಕೆ ತಕ್ಕ ಪ್ರತೀಕಾರಮಾಡಬೇಕೆಂಬ ಒಂದು ಛಲವೂ ಇದ್ದಿತು. ಅದ
ಕ್ಕಾಗಿ ಕೌರವ ಪಾಂಡವ ರಾಜಪುತ್ರರ ಶಸ್ತ್ರ ವಿದ್ಯಾಭ್ಯಾಸವು ಮುಗಿದ
ಬಳಿಕ ಒಂದು ದಿನ ಅವರನ್ನೆಲ್ಲ ಬಳಿಗೆ ಕರೆದು,-'ಪ್ರಿಯ ಶಿಷ್ಯರಿರಾ, ನನ್ನ
ದೊಂದು ಶಪಥವಿದೆ. ಪಾಂಚಾಲದೇಶದ ರಾಜನಾದ ದ್ರುಪದನನ್ನು ಯು
ದ್ಧದಲ್ಲಿ ಸೋಲಿಸಿ ಸೆರೆ ಹಿಡಿದು ಕಟ್ಟಿತಂದು, ನನ್ನ ಮಂಚದ ಕಾಲಿಗೆ ಕಟ್ಟ
ಬೇಕು. ಆ ಸಾಮರ್ಥ್ಯವು ನಿಮ್ಮಲ್ಲಾರಿಗುಂಟೋ ಅವರು ಪರಿಶ್ರಮ ಮಾ
ಡಬಹುದು. ಈ ಕೆಲಸ ಮಾಡಿದವನು ನನಗೆ ಯೋಗ್ಯ ದಕ್ಷಿಣೆಯನ್ನು
ಅರ್ಪಿಸಿದವನೆಂದು ಭಾವಿಸುತ್ತೇನೆ' ಎಂದು ಹೇಳಿದನು.

ಆ ಮಾತನ್ನು ಕೇಳಿದ ದುರ್ಯೋಧನಾದಿ ಕೌರವ ರಾಜಪುತ್ರರು,
ತಮ್ಮ ಗುರುವಿನ ಆ ಶಪಥವನ್ನು ನೆರವೇರಿಸುವ ಮಹೋದ್ದೇಶದಿಂದ ಸೈ
ನ್ಯದೊಂದಿಗೆ ಹೊರಟು, ದ್ರುಪದ ರಾಜಧಾನಿಯನ್ನು ಮುತ್ತಿದರು. ಅಕಾ
ರಣವಾಗಿಯೂ ಹಠಾತ್ತಾಗಿಯೂ ತನ್ನಮೇಲೆ ದಂಡೆತ್ತಿ ಬಂದು, ತನ್ನ ರಾ
ಜಧಾನಿಯನ್ನು ಮುತ್ತಿಗೆ ಹಾಕಿದ ಆ ಶತ್ರುವನ್ನು ಎದುರಿಸಲು ದ್ರುಪದನು
ಸೈನ್ಯಸಮೇತನಾಗಿ ಹೊರಟು ಹಸ್ತಿನಾವತಿಯ ಸೈನ್ಯವನ್ನು ತಾಗಿ, ಅವರ
ಹಸ್ತ್ಯಶ್ವ ರಥ ಪದಾತಿಗಳನ್ನು ಘಾತಿಸಿ, ರಾಜಕುವರರ ಮೈಯಲ್ಲಿ ಕೆನ್ನೀರ

ನ್ನು ಹೊರಡಿಸಲು, ಭೀತರಾದ ದುರ್ಯೋಧನಾದಿಗಳು, ತಲೆತಪ್ಪಿಸಿಕೊಂಡು ಬದುಕಿದರೆ ಸಾಕೆಂದು ಓಡಿಹೋದರು. ಕೌರವಸೈನ್ಯಕ್ಕೆ ಅಪಜಯುವಾಯಿತೆಂಬ ವಾರ್ತೆಯನ್ನು ತಿಳಿದೊಡನೆಯೇ ಪಾಂಡು ರಾಜಪುತ್ರರು, ರಥಾರೂಢರಾಗಿ ಆತನ ಮೇಲೆ ಯುದ್ಧಕ್ಕೆ ಸಾಗಿಬಂದರು. ದ್ರುಪದನು ಪುನಃ ತನ್ನ ಮೇಲೇರಿಬಂದ ಅವರ ಸೊಕ್ಕು ಮುರಿಯಬೇಕೆಂದು ರೋಷ ಭೀಷಣನಾಗಿ ಬರುತ್ತಿರಲು, ಧನಂಜಯನು ಆತನನ್ನು ಅಡ್ಡಗಿಸಿ, ಆತನು ಪ್ರಯೋಗಿಸಿದ ಬಾಣಗಳಿಗೆ ಪ್ರತಿ ಬಾಣಗಳನ್ನು ಬಿಟ್ಟು, ಆತನ ಕವಚ ಕುಂಡಲಗಳನ್ನೂ, ರಥಾಶ್ವ ಸಾರಥಿಗಳನ್ನೂ ಖಂಡಿಸಿ, ಬಾಣ ಪ್ರಯೋಗದಿಂದ ಆತನನ್ನೂ ಮೂರ್ಛೆಗೊಳಿಸಿ, ಕೈಕಾಲುಗಳನ್ನು ಕಟ್ಟಿ ತನ್ನ ರಥದಲ್ಲಿ ಹಾಕಿಕೊಂಡು, ಹಸ್ತಿನಾವತಿಗೆ ಬಂದು, ತನ್ನ ಗುರುವಿನ ಪಾದ ಮೂಲದಲ್ಲಿ ಮಂಚದ ಕಾಲಿಗೆ ಕಟ್ಟಿ ಹಾಕಿದನು. ತನ್ನ ಪ್ರತಿಜ್ಞೆಯು ಹಾಗೆ ಸಾರ್ಥಕವಾದುದನ್ನು ಕಂಡು ಪರಮಸಂತುಷ್ಟನಾದ ಆಚಾರ್ಯನು, ತನ್ನ ಶಿಷ್ಯೋತ್ತಮನಾದ ಧನಂಜಯನ ಶಕ್ತಿ ಸಾಮರ್ಥ್ಯಗಳನ್ನು ಬಾಯ್ದಣಿಯೆ ಹೊಗಳಿ, ಅಹಂಕಾರಿಯಾಗಿ ತನ್ನ ಮಾನಭಂಗ ಮಾಡಿದ್ದ ದ್ರುಪದನಿಗೂ ಪೂರ್ವಸ್ನೇಹವನ್ನು ಸ್ಮರಿಸಿ ಉಚಿತ ವಾಕ್ಯಗಳಿಂದ ಬುದ್ಧಿ ಹೇಳಿ ಕಳುಹಿಸಿದನು. ದ್ರುಪದರಾಜನು. ತನ್ನನ್ನು ಅಷ್ಟು ಮಟ್ಟಿನ ಪರಾಭವಕ್ಕೆ ಗುರಿಮಾಡಿದ ದ್ರೋಣಾಚಾರ್ಯನನ್ನು ಸಂಹರಿಸುವಂತಹ ಒಬ್ಬ ಮಗನನ್ನೂ, ಮಹಾಧನ್ವಿಯಾದ ತನ್ನನ್ನೂ ಜಯಿಸಿದ ವೀರನಾದ ಧನಂಜಯನ ಪಾಣಿಗ್ರಹಣಮಾಡಲು ಯೋಗ್ಯಳಾದ ಒಬ್ಬ ಕನ್ಯೆಯನ್ನೂ ಪಡೆಯಬೇಕೆಂದು ತಪಸ್ಸುಮಾಡಿ, ವರಪಡೆದು ಯಜ್ಞಮುಖದಿಂದ ಪಡೆದ ಆ ತನ್ನ ಪುತ್ರಪುತ್ರಿಯರನ್ನು ಪ್ರೀತಿಯಿಂದ ಪೋಷಿಸುತ್ತ, ತನ್ನ ಪ್ರತಿಜ್ಞೆಯನ್ನು ತೀರಿಸಿಕೊಳ್ಳಲು ಸಮಯ ಸಾಧನೆಯಲ್ಲಿದ್ದನು. ಇತ್ತ ಶಸ್ತ್ರಾಭ್ಯಾಸವನ್ನು ಮುಗಿಸಿದ ರಾಜಪುತ್ರರು, ಗುರುವಿಗೆ ತಮ್ಮತಮ್ಮ ಭಕ್ತಿ ಶಕ್ತ್ಯನುಸಾರ ದ್ರವ್ಯರೂಪ ದಕ್ಷಿಣೆಯನ್ನೂ ಸಮರ್ಪಿಸಿ, ಅಪ್ಪಣೆಪಡೆದು ಅರಮನೆಯನ್ನು ಸೇರಿದರು.



**ಅಧ್ಯಾಯ ೩. 'ಮತ್ಸ್ಯಯಂತ್ರ ಭೇದನ'**

ಮಹಾ ಪ್ರಬಲಪರಾಕ್ರಮಿಗಳಾದ ಪಾಂಡವರ ದೆಸೆಯಿಂದ, ಮುಂದೆ ತನಗೂ ತನ್ನ ತಮ್ಮಂದಿರಿಗೂ ಪರಿಣಾಮವಿಲ್ಲವೆಂಬಂಶವನ್ನು ಯೋಚಿಸಿದ

ದುರ್ಯೋಧನನು, ಬಿಲ್ಲು ವಿದ್ಯೆಯಲ್ಲಿ ಅರ್ಜುನನಿಗೆ ಪ್ರತಿದ್ವಂದ್ವಿಯಾಗಿರಲು, ಅರ್ಹನಾದ ಸೂರ್ಯಪುತ್ರ ಕರ್ಣನನ್ನು ಸ್ನೇಹಿಸಿ, ಗೌರವಿಸಿ ತನ್ನ ಬಳಿಯ ಲ್ಲಿಟ್ಟುಕೊಂಡನು. ಕರ್ಣನು, ಸೂತಪುತ್ರನು ಕುಲಹೀನನು - ಆದಕಾರಣ ರಾಜಪುತ್ರರೊಂದಿಗೆ ಸಮಾನತೆಯಿಂದ ಕಾದಲು ಅನರ್ಹನು, ಎಂಬ ಹಲವರ ಆಕ್ಷೇಪಣೆಗಳನ್ನು ಕೇಳಿ, ದುರ್ಯೋಧನನು ಆ ವೀರನಿಗೆ ಅಂಗರಾಜ್ಯಕ್ಕೆ ಪಟ್ಟಾಭಿಷೇಕವನ್ನು ಮಾಡಿ ಅವನನ್ನೂ ರಾಜಕುಲದಲ್ಲಿ ಒಬ್ಬನೆನ್ನಿಸಿ, ರಾಜ ಪುತ್ರರೊಂದಿಗೆ ಸೆಣಸಲು ಸಮಾನ ಪದವಿಯನ್ನು ತಂದಿತ್ತನು. ಯಾರೊಂ ದಿಗಾಗಲೀ ಸ್ನೇಹವಿರುವವರೆಗೂ, ಅವರಿಂದ ಎಂತಹ ಪ್ರಮಾದ ಕಾರ್ಯ ಗಳು ನಡೆದರೂ ಆ ವಿಷಯದಲ್ಲಿ ವಿರೋಧ ತೋರದಿರುವುದು. ಆದರೆ, ಒಂ ದು ಸಾರಿ ಒಬ್ಬನ ವಿಷಯದಲ್ಲಿ ದ್ವೇಷಭಾವವು ಮನಸ್ಸಿನಲ್ಲಿ ನೆಲೆಸಿತೆಂದರೆ, ಮುಂದೆ ಅವನಿಂದ ಆಚರಿಸಲ್ಪಡುವ ಅಲ್ಪ ಸ್ವಲ್ಪ ಅಪರಾಧಗಳೆಲ್ಲ ಮಹದಪ ರಾಧಗಳೆಂಬಂತೆಯೇ ತೋರತೊಡಗಿ, ಅಕ್ಷಮ್ಯವೆನ್ನಿಸಿ ಬರುತ್ತಾ ಬರುತ್ತಾ ಬದ್ಧದ್ವೇಷವನ್ನು ಉಂಟುಮಾಡುವುದು ಸ್ವಾಭಾವಿಕವಷ್ಟೆ! ಜ್ಞಾನಿಗಳಾದ ಪಾಂಡವರ ವಿಷಯದಲ್ಲ ದುರ್ಯೋಧನನ ಹೃದಯದಲ್ಲಿ ಮೊಳೆತ ದ್ವೇಷಬೀ ಜವಾದರೂ ದಿನದಿನಕ್ಕೆ ಬೆಳೆದು ಚೆನ್ನಾಗಿ ಬೇರುಬಿಟ್ಟುಕೊಂಡಿತು. ಮುಂದೆ ಅವರು ಮಾಡಿದ ಒಂದೊಂದು ಕಾರ್ಯವೂ, ತನ್ನನ್ನು ಅಣಕಿಸಲು ಮಾಡಲ್ಪ ಟ್ಟಿದೇ ಎಂಬ ಭಾವನೆಯು ದುರ್ಯೋಧನನಿಗೆ ಉಂಟಾಗತೊಡಗಿತು. ಈ ಮಧ್ಯೆ ಅವನ ದ್ವೇಷವನ್ನು ಹೆಚ್ಚಿಸಲು ಮತ್ತೊಂದು ವಿಚಾರವೂ ನಡೆ ಯಿತು.

ದ್ರುಪದ ರಾಜಧಾನಿಯಿಂದ ಬಂದಮೇಲೆ ಕೌರವರು, ಪಾಂಚಾಲ ರಾಜನನ್ನು ತಾವೇ ಜಯಿಸಿದವರೆಂದು ಹೇಳಿಕೊಂಡು ಹೆಮ್ಮೆ ಪಟ್ಟುಕೊಂ ಡಿದ್ದರು. ಗಾಂಧಾರಿದೇವಿಯು ತನ್ನ ಮಕ್ಕಳ ಶೌರ್ಯ ಪ್ರತಾಪಗಳನ್ನು ಕೇಳಿ ಪರಮಾನಂದಪಟ್ಟು, ಉತ್ತರೋತ್ತರ ಅವರಿಗೆ ವಿಶೇಷ ಶ್ರೇಯಸ್ಸುಂ ಟಾಗಲೆಂದು, ಐರಾವತವೆಂಬ ವ್ರತವನ್ನಾಚರಿಸಿ, ಮಹದುತ್ಸವವನ್ನು ನಡೆ ಯಿಸಿ, ದಾನಧರ್ಮಗಳನ್ನು ಕೊಟ್ಟು ತನ್ನ ಐಶ್ವರ್ಯ ಪ್ರತಿಷ್ಠೆಗಳ ಸೊಬ ಗನ್ನು ಪ್ರದರ್ಶಿಸಿಕೊಂಡಳು. ಇದನ್ನು ಕಂಡ ಕುಂತೀದೇವಿಗೆ ಸ್ವಾಭಾವಿ ಕವಾಗಿಯೇ ವ್ಯಾಕುಲವುಂಟಾಯಿತು. ತನ್ನ ತಾಯಿಯ ವ್ಯಸನಕಾರಣ

ವನ್ನು ಅರಿತ ಪಾಂಡವರು, ದ್ರುಪದರಾಜನನ್ನು ಜಯಿಸಿದವರು ಕೌರವರಲ್ಲ ವೆಂದೂ, ಆತನನ್ನು ಸೆರೆಹಿಡಿದು ಕಟ್ಟಿತಂದು ಗುರುವಿನ ಪಾದಗಳಲ್ಲಿ ಕೆಡಹಿ ದವನು ಅರ್ಜುನನೆಂದೂ ತಿಳಿಸಿ, ಆಕೆಯ ಮನಸ್ಸಿಗೆ ಸಮಾಧಾನವನ್ನುಂಟು ಮಾಡಿದರು. ಮತ್ತು ಭೀಮಾರ್ಜುನರು, ಆಕೆಯನ್ನು ಕುರಿತು-'ತಾಯೇ ಯೋ ಚನೆಯೇಕೆ? ಗಾಂಧಾರಿಯು ಐರಾವತವೆಂಬ ಹೆಸರಿನಿಂದ ಒಂದು ಮಣ್ಣಿನ ಆನೆಯನ್ನಿಟ್ಟುಕೊಂಡು ಪೂಜಿಸಿದರೆ, ನೀನು ಇಂದ್ರನ ಸಾಕ್ಷಾತ್ ಐರಾವ ತವನ್ನೇ ಪೂಜಿಸುವೆಯಂತೆ; ಆಕೆಗಿಂತಲೂ ಅತಿಶಯ ವೈಭವದಿಂದ ವಿಶೇಷ ದಾನಧರ್ಮಗಳನ್ನಾಚರಿಸುವೆಯಂತೆ' ಎಂದು ನುಡಿದು ಆಕೆಯನ್ನು ಸಂತೋ ಷಪಡಿಸಿದರು. ಒಡನೆ ಅರ್ಜುನನು. ಇಂದ್ರನಿಗೆ ತಮ್ಮ ತಾಯಿಯು ಪೂಜೆ ಮಾಡುವುದಕ್ಕಾಗಿ, ಐರಾವತ, ಕಾಮಧೇನು ಕಲ್ಪವೃಕ್ಷ ಮುಂತಾದ ಅಮೌ ಲ್ಯ ವಸ್ತುಗಳನ್ನು ಕಳುಹಿಸಬೇಕೆಂದು ಒಂದು ಪತ್ರವನ್ನು ಬರೆದು, ತನ್ನ ಅಸ್ತ್ರಪ್ರಯೋಗ ಸಾಮರ್ಥ್ಯದಿಂದ ಅದನ್ನು ಇಂದ್ರಲೋಕಕ್ಕೆ ಸಾಗಿಸಿದನು. ಆತನ ಶರಸಂಧಾನ ಸಾಮರ್ಥ್ಯವೆಂಥಾದ್ದೋ! ಆ ಪತ್ರವು ಒಡ್ಡೋಲಗದ ಲ್ಲಿದ್ದ ಇಂದ್ರನಿಗೆ ತಲುಪಿತು. ತನ್ನ ಮಗನ ಪ್ರತಾಪವನ್ನು ಕಂಡು, ಪರ ಮ ಸಂತುಷ್ಟನಾದ ದೇವೇಂದ್ರನು, ನರಲೋಕದಿಂದ ಯಾವನಾದರೊಬ್ಬ ವೀರನು ಬಂದು ಅವುಗಳನ್ನು ತೆಗೆದುಕೊಂಡು ಹೋಗಬಹುದೆಂದು ಪ್ರ ತ್ಯುತ್ತರ ಬರೆದನು. ಒಡನೆ ಆ ಕೆಲಸಕ್ಕೆ ಭೀಮಸೇನನು ಸಿದ್ಧನಾಗಿ ಹೊರಟು ಮಾನುಷಲೋಕಕ್ಕೆ ಅಪೂರ್ವಗಳೆನ್ನಿಸಿದ ಆ ವಸ್ತುಗಳನ್ನು ಭೂಮಿಗೆ ಕರೆತಂದನು. ಹಸ್ತಿನಾವತಿಯ ನಿವಾಸಿಗಳೂ, ರಾಜಕುಟುಂಬ ದವರೂ ಅವುಗಳನ್ನು ಕಂಡು ಮಹದಾಶ್ಚರ್ಯಮಗ್ನರಾದರು. ಜನರು ತಂ ಡತಂಡವಾಗಿ ನೆರೆದು, ಅವುಗಳನ್ನು ನೋಡಿ ಅದ್ಭುತಪಟ್ಟರು. ದೇವಯೋ ಗ್ಯವಾದ ಆ ವಸ್ತುಗಳನ್ನು ಭೂಲೋಕಕ್ಕೆ ತರಿಸಿದ ಧನಂಜಯನ ಶಕ್ತಿಸಾ ಮರ್ಥ್ಯಗಳನ್ನು ಸಾವಿರ ನಾಲಿಗೆಗಳಿಂದ ಹೊಗಳಿದರು. ಕುಂತೀದೇವಿಯು, ಐರಾವತಾದಿಗಳನ್ನು ಅತಿಶಯ ಶ್ರದ್ಧಾಭಕ್ತಿಗಳಿಂದ ಪೂಜಿಸಿ, ಬ್ರಾಹ್ಮಣಮು ತ್ತೈದೆಯರಿಗೂ ದೀನಾನಾಥರಿಗೂ ವಿಶೇಷ ದಾನಧರ್ಮಗಳನ್ನಿತ್ತು ತೃಪ್ತಿಪ ಡಿಸಿದಳು. ಸಕಲರೂ ಪರಮಾನಂದಪಟ್ಟರು. ಆದರೆ, ಪಾಂಡವರ ಈ ಪ್ರಾದುರ್ಭಾವವನ್ನು ಕಂಡು, ಗಾಂಧಾರಿಗೂ, ಆಕೆಯ ಮಕ್ಕಳಿಗೂ ಮಾ

ತ್ರ ತಡೆಯಲಾರದಷ್ಟು ಅಸೂಯೆಯುಂಟಾಯಿತು. ದಿನದಿನಕ್ಕೆ ಬಲ, ಶೌರ್ಯ, ಐಶ್ವರ್ಯ, ಜನಾನುರಾಗ ಮುಂತಾದುವುಗಳನ್ನು ಹೆಚ್ಚುಹೆಚ್ಚಾಗಿ ಗಳಿಸುತ್ತಿದ್ದ ಆ ಪಾಂಡುಪುತ್ರರನ್ನು ಕಂಡು ಕೌರವನು ಹೃದಯವೇದನೆಯಿಂದ, ಅವರನ್ನು ಯಾವುದಾದರೊಂದು ಬಗೆಯಿಂದ ನಾಶಗೊಳಿಸಬೇಕೆಂದು ಕೃತಸಂಕಲ್ಪನಾದನು.

ಈ ಮಧ್ಯೆ ಧೃತರಾಷ್ಟ್ರನು ಮಂತ್ರಿಸಾಮಂತರೊಂದಿಗೆ ಯೋಚಿಸಿ ಯುಧಿಷ್ಠಿರನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿದ್ದನು. ಇದಂತೂ, ದುರ್ಯೋಧನನ ಹೃದಯವನ್ನು ದಹಿಸುತ್ತಿದ್ದ ಉರಿಯಲ್ಲಿ ಎಣ್ಣೆಯನ್ನು ಸುರಿದಂತೆ ಆಗಿದ್ದಿತು. ಮುಂದೆ, ತನ್ನ ಬಾಳ್ವೆಗೆ ಉಪಾಯವೇ ಇಲ್ಲವೆಂದುಕೊಂಡು ಹತಾಶನಾಗಿ ತಂದೆಯ ಬಳಿಸೇರಿ, ಸರ್ವವಿಧದಿಂದಲೂ ಆತನನ್ನು ಪೀಡಿಸಿ, ಪಾಂಡವರಿಗೆ ಅರ್ಧರಾಜ್ಯವನ್ನು ಕೊಟ್ಟು ವಾರಣಾವತವೆಂಬ ಮತ್ತೊಂದು ಊರಿಗೆ ಸಾಗಿಸಿಬಿಡಬೇಕೆಂದು ಸಲಹೆಯಿತ್ತನು. ಧೃತರಾಷ್ಟ್ರರಾಜನಾದರೋ, ಪುತ್ರವ್ಯಾಮೋಹದಿಂದ ಧರ್ಮವಿರುದ್ಧವಾದುದೆಂದು ತಿಳಿದಿದ್ದರೂ ಆ ಕಾರ್ಯಕ್ಕೆ ಸಮ್ಮತಿಸಿದನು. ಪಾಂಡವರು, ಅಂಧನೃಪತಿಯ ಮತ್ತು ಗಾಂಧಾರಿದೇವಿಯ, ಭೀಷ್ಮದ್ರೋಣಾದಿ ಹಿತಚಿಂತಕರ ಅಪ್ಪಣೆ ಆಶೀರ್ವಾದಗಳನ್ನು ಪಡೆದು, ತಮ್ಮ ತಾಯಿ ಕುಂತೀದೇವಿಯೊಂದಿಗೆ ವಾರಣಾವತಕ್ಕಾಗಿ ಪ್ರಯಾಣಮಾಡಿದರು.

ಇತ್ತ ಪಾಂಡವರಿಗೆ ಅರ್ಧರಾಜ್ಯಕೊಡಬೇಕೆಂದು ಬಹು ಉದಾರಭಾವದಿಂದ ಸಲಹೆಯಿತ್ತ ದುರ್ಯೋಧನನು, ಅತ್ತ ಕಪಟಿಗಳಾದ ತನ್ನ ಸ್ನೇಹಿತರೊಂದಿಗೆ ಯೋಚಿಸಿ, ಪಾಂಡವರನ್ನು ಜೀವದೊಂದಿಗೆ ಸುಟ್ಟುಬಿಡಬೇಕೆಂದು, ಪುರೋಚನನೆಂಬೊಬ್ಬ ಶಿಲ್ಪಿಯಿಂದ, ಮಧ್ಯಮಾರ್ಗದಲ್ಲಿ ಅರಗು ಗಂಧ ಕರ್ಪೂರ ಮುಂತಾದ ಪದಾರ್ಥಗಳನ್ನು ಉಪಯೋಗಿಸಿ ಒಂದು ಅರಮನೆಯನ್ನು ಕಟ್ಟಿಸಿದ್ದನು. ತಮ್ಮ ತಾಯಿಯೊಂದಿಗೆ ಪ್ರಯಾಣಮಾಡುತ್ತಾ ಅಲ್ಲಿಗೆ ಬಂದ ಆ ರಾಜಪುತ್ರರನ್ನು, ಪುರೋಚನನು ಎದುರುಗೊಂಡು ಗೌರವಿಸಿ, ಆ ಮನೆಯಲ್ಲಿ ಒಂದು ರಾತ್ರಿ ವಿಶ್ರಮಿಸಿಕೊಂಡಿದ್ದು, ಮಾರನೆಯ ಪ್ರಾತಃಕಾಲ ಮುಂದಕ್ಕೆ ಪ್ರಯಾಣಮಾಡಬಹುದೆಂದ ಕೇಳಿಕೊಂಡನು. ಕಪಟವನ್ನರಿಯದ ಸಾಧುಪ್ರಕೃತಿಯ ಪಾಂಡವರು, ಅವನ ಮಾತಿನಲ್ಲಿ

ಯಾವ ಮೋಸವನ್ನೂ ಕಂಡರಿಯದೆ ಹಾಗೆಯೇ ಮಾಡಲು ಸಮ್ಮತಿಸಿದರು. ಆದರೆ, ಆ ಮನೆಯ ವೃತ್ತಾಂತವೂ, ಆ ಮೂಲಕ ತಮ್ಮನ್ನು ನಾಶಮಾಡಲು ಯೋಚಿಸುತ್ತಿದ್ದ ದುರ್ಯೋಧನನ ಆಶಯವೂ, ವಿದುರನಿಂದ ಭೀಮನಿಗೆ ತಿಳಿದಿತ್ತಾದುದರಿಂದ, ಆತನು ಜಾಗರೂಕನಾಗಿದ್ದು, ಮಧ್ಯರಾತ್ರಿಯಲ್ಲಿದ್ದು ತನ್ನ ಅಣ್ಣ ತಮ್ಮಂದಿರನ್ನೂ ತಾಯಿಯನ್ನೂ ತಲೆ ಹೆಗಲುಗಳ ಮೇಲೆ ಕುಳ್ಳಿರಿಸಿಕೊಂಡು ಅಲ್ಲೇ ಗುಪ್ತವಾಗಿದ್ದ ಸುರಂಗವನ್ನು ಭೇದಿಸಿಕೊಂಡು, ಆ ಮನೆಗೆ ಬೆಂಕಿಯನ್ನು ಹಚ್ಚಿ ಹೊರಹೊರಟನು. ಮುಂದೆ ಅನೇಕ ಹಳ್ಳಕೊಳ್ಳ - ಗುಡ್ಡಬೆಟ್ಟಗಳನ್ನು ದಾಟಿ, ಹಿಡಿಂಬನನ್ನು ಸಂಹರಿಸಿ, ಭೀಮನು ತನ್ನ ಸೋದರರನ್ನು ಮಹದಾಪದಗಳಿಂದ ಸಂರಕ್ಷಿಸಿದನು. ತರುವಾಯ ಕೆಲವು ದಿನಗಳ ಪ್ರಯಾಣದಿಂದ ಅವರು ಏಕಚಕ್ರಪುರವೆಂಬ ಒಂದು ಅಗ್ರಹಾರವನ್ನು ಸೇರಿದರು. ಅಲ್ಲಿ ದೇವತಾಂಶಸಂಭೂತರಾದ ಆ ಮಹಾನುಭಾವರು, ಬ್ರಾಹ್ಮಣವೇಷದಿಂದ ಭಿಕ್ಷಾಟನೆ ಮಾಡಿ ಜೀವನವನ್ನು ಸಂಪಾದಿಸಿಕೊಳ್ಳಬೇಕಾಗಿ ಬಂದಿತು. ಪರೋಪಕಾರಶೀಲನಾದ ಭೀಮಸೇನನು, ಅಲ್ಲೂ ಬಕಾಸುರನೆಂಬ ಪ್ರಜಾಕಂಟಕನಾಗಿದ್ದ ದೈತ್ಯನನ್ನು ಸಂಹರಿಸಿ, ಆ ಪ್ರಾಂತವನ್ನೇ ಸುರಕ್ಷಿತಗೊಳಿಸಿದನು. ಆ ಊರಿನಲ್ಲಿ ಆರುತಿಂಗಳಕಾಲ ವಾಸವಾಗಿದ್ದು, ಅಷ್ಟರಲ್ಲಿ ದ್ರುಪದರಾಜಧಾನಿಯಲ್ಲಿ, ರಾಜಪುತ್ರಿ ದ್ರೌಪದಿಯ ಸ್ವಯಂವರ ಮಹೋತ್ಸವವೆಂಬ ವರ್ತಮಾನವನ್ನು ಕೇಳಿ, ಪಾಂಡವರು ತಾಯಿಯಾದ ಕುಂತೀದೇವಿಯನ್ನೂ, ಧೌಮ್ಯರೆಂಬ ಪುರೋಹಿತರನ್ನೂ ಮುಂದಿಟ್ಟುಕೊಂಡು, ಅಲ್ಲಿಗೆ ಪ್ರಯಾಣಮಾಡಿದರು. ಮಧ್ಯಮಾರ್ಗದಲ್ಲಿ ರಾತ್ರಿಯಾಗಲು, ಅವರನ್ನು ಅಡ್ಡಗಿಸಿ ತೊಂದರೆ ಪಡಿಸಿದ ಅಂಗಾರವರ್ಣನೆಂಬ ಗಂಧರ್ವನನ್ನು ಮಂತ್ರಾಸ್ತ್ರಪ್ರಯೋಗನಿಪುಣನಾದ ಧನಂಜಯನು ತನ್ನ ಕೈಯಲಿದ್ದ ಕೊಳ್ಳಿಯನ್ನೇ ಅಭಿಮಂತ್ರಿಸಿ ಬಿಟ್ಟು ಪರಾಭವಗೊಳಿಸಿದನು. ಮುಂದೆ ಎಲ್ಲರೂ ಸುರಕ್ಷಿತನಾಗಿ ಪ್ರಯಾಣಮಾಡಿ, ಪಾಂಚಾಲ ರಾಜಧಾನಿಯನ್ನು ಸೇರಿ, ಅಲ್ಲೊಬ್ಬ ಕುಂಬಾರನ ಮನೆಯಲ್ಲಿಳಿದುಕೊಂಡರು.

ರಾಜಪುತ್ರಿಯ ಸ್ವಯಂವರಕ್ಕೆಂದು ದ್ರುಪದರಾಜಧಾನಿಯು ವಿಶೇಷ ರೀತಿಯಿಂದ ಸಿಂಗರಿಸಲ್ಪಟ್ಟಿದೆ. ರಾಜಬೀದಿಗಳು ತೋರಣ ಬಾವುಟಗಗಳಿಂದಲೂ, ಮನೆಗಳು ಸುಣ್ಣ ಕಾರಣೆಗಳಿಂದಲೂ ಅಲಂಕರಿಸಲ್ಪಟ್ಟಿವೆ.

ನಾಲ್ಕು ಬೀದಿಗಳು ಸೇರುವೆಡೆಯಲ್ಲಿ ದೊಡ್ಡದೊಡ್ಡ ಚಪ್ಪರಗಳನ್ನು ಹಾಕಿ, ಅನೇಕ ಚಿತ್ರಪಟಗಳಿಂದಲೂ, ಕೃತಕಪುಷ್ಪಫಲಗಳಿಂದಲೂ, ಬೊಂಬೆಗಳಿಂದಲೂ ನೇತ್ರಾನಂದಕರವಾಗಿ ಅಲಂಕರಿಸಿದ್ದಾರೆ. ಸ್ವಯಂವರ ಮಂಟಪದ ಶೃಂಗಾರವಂತೂ ವರ್ಣಿಸಲಸದಳವು. ಆಹ್ವಾನಿತರಾದ ರಾಜಾಧಿರಾಜರೂ, ಸ್ಪರ್ಧೆಗೆ ನಿಲ್ಲಲು ಬರುವ ರಾಜಪುತ್ರರೂ ಕುಳ್ಳಿರಲು ಉನ್ನತವಾದ ಶ್ರೀಪೀಠಾಸನಗಳು ಸಿದ್ಧವಾಗಿವೆ. ಒಂದೆಡೆ ಬ್ರಾಹ್ಮಣೋತ್ತಮರೂ, ಋಷಿಮುನಿಗಳೂ ಕುಳ್ಳಿರಲು ಪವಿತ್ರವಾದ ದರ್ಭಾಸನ ಮತ್ತು ಕೃಷ್ಣಾಜಿನಗಳೂ ಮಣೆಗಳೂ ಹಾಕಲ್ಪಟ್ಟಿವೆ. ಅಲ್ಲಲ್ಲಿ ನೇತ್ರಾನಂದಕರವಾದ ವಿವಿಧವರ್ಣರಂಜಿತ ಚಿತ್ರಗಳನ್ನು ಹಾಕಿ, ಸಭಾಭವನವನ್ನೆಲ್ಲ, ಬಾವುಟಾದಿಗಳಿಂದಲೂ ತಳಿರುತೋರಣಗಳಿಂದಲೂ ಸಿಂಗರಿಸಿದ್ದಾರೆ. ಸ್ವಯಂವರಕ್ಕೆಂದು ಗೊತ್ತಾದ ಶುಭದಿನದಲ್ಲಿ ಮುಹೂರ್ತದ ವೇಳೆಗೆ ಬಹುಮುಂಚಿತವಾಗಿಯೇ, ಆ ದೊಡ್ಡ ಚಪ್ಪರವೆಲ್ಲವೂ ಪ್ರೇಕ್ಷಕರಿಂದ ತುಂಬಿ ಜನಮಯವಾಗಿ ಹೋಯಿತು. ದುರ್ಯೋಧನನೇ ಮುಂತಾದ ರಾಜಾಧಿರಾಜರೂ ಭೂಸುರೋತ್ತಮರೂ, ಇತರ ಸಹಸ್ರಾರುಮಂದಿ ಸಾಮಾನ್ಯ ಜನರೂ ತಮತಮಗೆ ಯುಕ್ತವಾದ ಸ್ಥಳಗಳಲ್ಲಿ ಕುಳಿತರು. ತರುವಾಯ ಸ್ವಲ್ಪ ಹೊತ್ತಿನೊಳಗಾಗಿಯೇ, ರಾಜಪುತ್ರಿಯಾದ ದ್ರೌಪದೀದೇವಿಯು, ಆನೆಯ ಮೇಲೆ ಕುಳಿತು, ಸಭಾದ್ವಾರಕ್ಕೆ ಬಂದು ಸಖಿಯರು ಹಸ್ತಲಾಘವವನ್ನು ಕೊಡುತ್ತಿರಲು ಕೆಳಗಿಳಿದು, ಸಭೆಯಲ್ಲಿ ನೆರೆದ ಸಮಸ್ತರನ್ನೂ ತನ್ನ ಸ್ವಾಭಾವಿಕ ಅಂದಚಂದಗಳಿಂದ ಬೆರಗುಗೊಳಿಸುತ್ತ ಮಂದಗಮನದಿಂದ ನಡೆದು, ಅಂತಃಪುರದ ಸ್ತ್ರೀಜನಕ್ಕಾಗಿ ಮೊದಲೇ ಸಿದ್ಧಪಡಿಸಿ ಇಟ್ಟಿದ್ದ ದಿವ್ಯಪೀಠದಲ್ಲಿ ಕುಳಿತಳು. ರಾಜಪುತ್ರರ ದೃಷ್ಟಿಯೆಲ್ಲವೂ ಆಕೆಯಲ್ಲಿಯೇ ಆಕರ್ಷಿತವಾಗಿ ಪ್ರತಿಯೊಬ್ಬನೂ ಆ ರಾಜಪುತ್ರಿಯು ತನ್ನನ್ನೇ ಮೆಚ್ಚಿ ವರಿಸುವಳೆಂದು ಬೆಟ್ಟದಷ್ಟು ಆಸೆಯನ್ನಿಟ್ಟುಕೊಂಡು – ವಧುವಿನ ಹಸ್ತದಿಂದ ಸ್ವಯಂವರಮಾಲೆಯು ಎಂದಿಗೆ ತನ್ನ ಕೊರಳಲ್ಲಿ ಬಿದ್ದೀತೆಂದು ಹಾರೈಸಿಕೊಂಡು ಕುಳಿತಿದ್ದನು.

ಆದರೆ, ಆ ಸ್ವಯಂವರವು-ದ್ರೌಪದಿಯು ರಾಜಪುತ್ರರ ಸೌಂದರ್ಯ ಸೌಕುಮಾರ್ಯಗಳನ್ನು ನೋಡಿಯಾಗಲಿ, ಅಥವ ಅವರ ವಂಶೋನ್ನತಿ, ಸಂಪತ್ಸಮೃದ್ಧಿಗಳ ವಿಚಾರವನ್ನು ಕೇಳಿಯಾಗಲೀ ಮೆಚ್ಚಿ ವರಿಸುವಂತೆ ಏರ್ಪ

ಟ್ಟುದಾಗಿರಲಿಲ್ಲ. ದ್ರುಪದರಾಜನು, ವೀರಾಗ್ರಣಿ ಧನಂಜಯನನ್ನು ಕೈ ಹಿಡಿಯಲು ಅರ್ಹಳಾದ ಮಗಳೇ ತನಗಾಗಬೇಕೆಂದು ತಪಸ್ಸುಮಾಡಿ ಹೆತ್ತಿದ್ದ ಪುತ್ರಿಯಲ್ಲವೆ ದ್ರೌಪದಿಯು! ಆದರೆ, ಪಾಂಡವರು ದಾಯಾದಿಗಳ ಕಾಪಟ್ಯಕ್ಕೆ ಒಳಗಾಗಿ ಲಾಕ್ಷಾಗೃಹದಲ್ಲಿ ಸುಟ್ಟುಹೋದರೆಂದು ದೇಶದೇಶಗಳೆಲ್ಲೆಲ್ಲಾ ಹಬ್ಬಿದ ವಾರ್ತೆಯನ್ನು ಕೇಳಿ ಆತನು ಹತಾಶನಾಗಿದ್ದನು. ಅಷ್ಟರಲ್ಲಿ ಭಗವದ್ಭಕ್ತರೂ ಸತ್ಯಶೀಲರೂ ಆದ ಪಾಂಡವರಿಗೆ ಅಂತಹ ಧರ್ಮರಣವು ಪ್ರಾಪ್ತವಾಗಲಾರದೆಂದೂ, ಪ್ರಚ್ಛನ್ನ ವೇಷದಿಂದ ಆ ವೀರರು ಎಲ್ಲೋ ಅಡಗಿರುವರೆಂದೂ ಹೇಳಿದ ಆಪ್ತ ವಾಕ್ಯವನ್ನು ಕೇಳಿ, ಸ್ವಲ್ಪ ಸಮಾಧಾನವನ್ನು ಹೊಂದಿ. ಮಹಾವೀರನಾದ ಅರ್ಜುನನನ್ನು ಆಕರ್ಷಿಸಿ, ಅಲ್ಲಿಗೆ ಬರಮಾಡಲು ಇತರ ಸಾಮಾನ್ಯ ಧನುರ್ಧಾರಿಗಳಿಗೆ ಅಸಾಧ್ಯವೆನ್ನಿಸುವ ಒಂದು ಯಂತ್ರವಿಶೇಷವನ್ನು ನಿರ್ಮಿಸಬೇಕೆಂದು ಯೋಚಿಸಿ, ಮತ್ಸ್ಯಯಂತ್ರವನ್ನೊಂದನ್ನು ನಿರ್ಮಿಸಿಟ್ಟಿದ್ದನು. ಸಭೆಯಲ್ಲೊಂದೆಡೆಯಲ್ಲಿ ಆ ಯಂತ್ರವನ್ನಿಟ್ಟಿದ್ದರು. ಲಕ್ಷ್ಯಭೇದಕನಾದ ಧನುರ್ವಿದ್ಯಾಭ್ಯಾಸಿಯು, ಅಲ್ಲಿ ಬಂದು ನಿಂತು ಕೆಳಗೆ ಎಣ್ಣೆಯ ಕೊಪ್ಪರಿಗೆಯಲ್ಲಿ ನೆಳಲನ್ನು ನೋಡುತ್ತಾ, ಮೇಲೆ ತೂಗಗಟ್ಟಿದ್ದ ಮತ್ಸ್ಯದ ಕಣ್ಣಿಗೆ ಬಾಣಪ್ರಯೋಗಮಾಡಬೇಕಾಗಿದ್ದಿತು. ರಾಜಪುತ್ರರೆಲ್ಲರೂ ನೆರೆದ ಸ್ವಲ್ಪ ಹೊತ್ತಿಗೆ, ದ್ರೌಪದಿಯ ಅಣ್ಣನಾದ ಧೃಷ್ಟದ್ಯುಮ್ನನು ಬಂದು ಆ ಯಂತ್ರವನ್ನು ಭೇದಿಸಬೇಕಾದ ಕ್ರಮವನ್ನು ವಿವರಿಸಿ ಹೇಳಿ, ಧನುರ್ಧರಾಗ್ರೇಸರರಾದ ಕ್ಷತ್ರಿಯೋತ್ತಮರು ಆ ಪಣವನ್ನು ಸಾಧಿಸಿ, ತನ್ನ ತಂಗಿಯ ಪಾಣಿಗ್ರಹಣ ಮಾಡಬಹುದೆಂದು ಸಾರಿದನು. ಆ ಮಾತನ್ನು ಕೇಳಿದೊಡನೆಯೇ ಅಭಿಮಾನಿಗಳಾದ ಹಲವರು ರಾಜಪುತ್ರರು, ನಾನು ಮುಂದೆ ತಾನು ಮುಂದೆಂದು ಬಂದು ಲಕ್ಷ್ಯವನ್ನು ಭೇದಿಸಲಾರದೆ, ಹತಾಶರಾಗಿ ಹೋಗಿ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತರು. ಕ್ರಮವಾಗಿ ಶಿಶುಪಾಲ, ಜರಾಸಂಧ, ಶಲ್ಯ, ಕರ್ಣ ಮುಂತಾದ ಧನುರ್ಧಾರಿಗಳೆಲ್ಲರೂ ಎದ್ದುಬಂದು ಪ್ರಯತ್ನಿಸಿ ವಿಫಲಮನೋರಥರಾದರು. ಆ ಸಭೆಯಲ್ಲಿ ನೆರೆದಿದ್ದ ಅಶೇಷವೀರವೃಂದರಲ್ಲಿ ಶ್ರೀಕೃಷ್ಣ, ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮರು ಉದ್ಧವ ಮತ್ತು ಸಾತ್ಯಕಿ ಈ ಏಳುಮಂದಿಯಲ್ಲದೆ, ಮಿಕ್ಕ ಎಲ್ಲರೂ ದ್ರೌಪದಿಯ ಮೋಹದಬಲೆಗೆ ಸಿಕ್ಕಿ, ಜಿತಮನಸ್ಕರಾಗಿ, ಪ್ರಯತ್ನಸಿ

ಸಫಲರಾಗದೆ ಖಿನ್ನರಾಗಿ ಕುಳಿತರು. ಇನ್ನು ಕ್ಷತ್ರಿಯರಲ್ಲಿ ದ್ರೌಪದಿಯನ್ನು ವರಿಸುವಂತಹ ವೀರ ಶಿರೋಮಣಿಯೇ ಇಲ್ಲವೆಂಬುದು ನಿರ್ಧಾರವಾಯಿತು. ತನ್ನ ಉದ್ದೇಶವು ಹಾಗೆ ಭಂಗವಾದುದನ್ನು ಕಂಡು, ಮಹದಾತಂಕಯುಕ್ತನಾದ ದ್ರುಪದರಾಜನು, ಅರ್ಜುನನು ವೇಷಾಂತರದಿಂದ ಎಲ್ಲಾದರೂ ಅಡಗಿರುವನೇನೋ ಎಂದು ಸಂದೇಹಿಸಿ, ಬ್ರಾಹ್ಮಣ ಸಮೂಹದಲ್ಲಿ ಯಾರಾದರೂ ಎದ್ದು ಲಕ್ಷ್ಯವನ್ನು ಸಾಧಿಸುವಂತಿದ್ದರೆ, ಅಂತಹ ವೀರರನ್ನೂ ತನ್ನ ಪುತ್ರಿಯು ಪತಿಯನ್ನಾಗಿ ವರಿಸಲುಳ್ಳವಳೆಂದು ಪ್ರಕಟಿಸಿದನು.

ಮಹಾವೀರಾಗ್ರೇಸರರಾದ ಹಲವು ಮಂದಿ ಕ್ಷತ್ರಿಯರಿಗೇ ದುರ್ಜಯವೆನ್ನಿಸಿದ ಆ ಲಕ್ಷ್ಯಸಾಧನವು ತಮ್ಮಿಂದ ಸಾಧ್ಯವೇ ಎಂದು ಬ್ರಾಹ್ಮಣರು ಹಲವು ಬಗೆಯಿಂದ ಹಲುಬಿಕೊಂಡರು. ತಮಗೆ ವಿಧ್ಯುಕ್ತವಾಗಿ ನಿಯಾಮಕವಾದ, ಶಾಸ್ತ್ರ ವಿಚಾರದಲ್ಲೂ ವಾಕ್ಯಾರ್ಥ ವಿಚಾರದಲ್ಲೂ ಪರೀಕ್ಷೆಯನ್ನು ಏರ್ಪಡಿಸಿದರೆ, ಅಲ್ಲಿ ತಮ್ಮ ಪಾಂಡಿತ್ಯವನ್ನು ತೋರಿಸಬಲ್ಲೆವಲ್ಲದೆ, ಈ ಬಿಲ್ಲುವಿದ್ಯೆಯು ಬ್ರಾಹ್ಮಣರಾದ ತಮಗೆ ತಕ್ಕುದಲ್ಲ ಎಂದು ಕೆಲವರು ಗೊಣಗಿಕೊಂಡರು. ಮತ್ತೆ ಕೆಲವರು, ಹಾಗಲ್ಲ, ರಾಜನು ಬಗೆಬಗೆಯ ಪಕ್ವಾನ್ನಗಳನ್ನೂ ಭಕ್ಷ್ಯ ಭೋಜ್ಯಗಳನ್ನೂ ಮಾಡಿಸಿ ನಮ್ಮನ್ನು ಭೋಜನಕ್ಕೆ ಕೂರಿಸಿ ಅಲ್ಲಿ ನಮ್ಮ ಸಾಮರ್ಥ್ಯವನ್ನು ಪರೀಕ್ಷಿಸಲಿ ಎಂದರು. ಹೀಗೆ ಮನಬಂದಂತೆ ಹಲುಬಿಕೊಳ್ಳುತ್ತಿದ್ದ ಬ್ರಾಹ್ಮಣರ ಗುಂಪಿನಲ್ಲೇ ಮಹಾವೀರಾಗ್ರೇಸರರಾದ ಪಾಂಡು ರಾಜಪುತ್ರರೂ, ಪ್ರಚ್ಛನ್ನ ವೇಷಧಾರಿಗಳಾಗಿ ಕುಳಿತಿದ್ದರು. ದ್ರುಪದ ರಾಜಪುತ್ರನು, ಬ್ರಾಹ್ಮಣರಲ್ಲಿ ಯಾರಾದರೂ ಸಮರ್ಥರಿದ್ದರೆ, ಯಂತ್ರ ಮರ್ಮವನ್ನು ಭೇದಿಸಿ ರಾಜಪುತ್ರಿಯನ್ನು ಕೈಹಿಡಿಯಬಹುದೆಂದು ಹೇಳಿದ ಮಾತನ್ನು ಕೇಳಿದ ಯುಧಿಷ್ಠಿರನು, ಕಣ್ಣುಸನ್ನೆಯಿಂದ ಅರ್ಜುನನನ್ನು ನೋಡಿ, ಹೋಗಿ ಪ್ರಯತ್ನಿಸೆಂದು ಸೂಚಿಸಿದನು. ಧನಂಜಯನೂ ಎದ್ದು ಪಂಚೆಯ ನೆರಿಗೆಯನ್ನು ಸರಿಮಾಡಿಕೊಳ್ಳುತ್ತಾ, ಮನಸ್ಸಿನಲ್ಲೇ ತಾಯಿಯಾದ ಕುಂತೀದೇವಿಗೂ ಯುಧಿಷ್ಠಿರ ಭೀಮಸೇನರಿಗೂ ನಮಸ್ಕರಿಸಿ, ಬಗೆಬಗೆಯಿಂದ ಹಾಸ್ಯಮಾಡುತ್ತಿದ್ದ ಬ್ರಾಹ್ಮಣವಟುಗಳ ಮಾತುಗಳನ್ನು ಕೇಳಿ ಮುಗುಳು ನಗೆ ನಗುತ್ತ, ಅತ್ಯುತ್ಸಾಹದಿಂದ ನಡೆದು ಬಂದು ಧನುಸ್ಸು ಇದ್ದ ಸ್ಥಳದಲ್ಲಿ ನಿಂತನು. ಆತನ ವಿಶಾಲವಕ್ಷ

ಸ್ಥಳವನ್ನೂ, ಆಜಾನುಬಾಹುಗಳನ್ನೂ, ಭವ್ಯಾಕೃತಿಯನ್ನೂ, ತೇಜಸ್ವಿ ಮುಖವನ್ನೂ ಕಂಡು, ಕ್ಷತ್ರಿಯರೆಲ್ಲರೂ ಆ ಮಹಾನುಭಾವನು ಯಾರೋ ಎಂದು ಶಂಕಿಸಿದರು. ಧನುವು ಆತನಿಗೆ ಸಾಧ್ಯವಾದರೂ ಆಗಬಹುದೆಂದು ಹಲವರು ಸಂದೇಹಿಸಿದರು. ಅತ್ತ ದ್ರೌಪದಿಯ ಸಖಿಯರು, ಇನ್ನು ತಮ್ಮ ಸಖಿಗೆ ಒಡಬ್ರಾಹ್ಮಣನು ಪತಿಯಾಗುವನೆಂದೂ, ದ್ರೌಪದಿಯು ಕರಿಮಣಿ ಬಿಚ್ಚೋಲೆಗಳ ವೈದೀಕ ಮುತ್ತೈದೆಯಾಗುವಳೆಂದೂ ಪರಿಹಾಸ್ಯ ಮಾಡತೊಡಗಿದರು. ಇತ್ತ ಧನಂಜಯನಾದರೋ ಇತರ ಹಲವರು ಮಾಡಿದಂತೆ ಆತುರಪಟ್ಟು ಧನುಸ್ಸಿಗೆ ಕೈನೀಡದೆ, ಪಕ್ಕದಲ್ಲೇ ನಿಂತು ಸೂಕ್ಷ್ಮದೃಷ್ಟಿಯಿಂದ ಅದರ ಒಂದೊಂದು ಭಾಗವನ್ನೂ ಚೆನ್ನಾಗಿ ಪರೀಕ್ಷಿಸಲು, ಅದರಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರು ಆವಾಹಿತರಾಗಿದ್ದರೆಂದು ತಿಳಿಯಿತು. ಒಡನೆ ಆತನು, ಭಕ್ತಿ ಪೂರ್ವಕವಾಗಿ ಅದಕ್ಕೆ ನಮಿಸಿ, ಬಲಗೈಯನ್ನು ನೀಡಿ, ಧನುಸ್ಸನ್ನೆತ್ತಿಕೊಂಡು, ನಾರಿಯನ್ನು ಬಿಗಿದು ಕಟ್ಟಿ, ಮೇಲಕ್ಕೆತ್ತಿ ಹಿಡಿದು, ಕೆಳಗೆ ತೈಲ ಕಟಾಹದಲ್ಲಿ ಅದರ ನೆಳಲನ್ನು ನೋಡುತ್ತ, ಐದು ಬಾಣಗಳನ್ನು ಸಂಧಿಸಿ ಮೇಲಿದ್ದ ಮತ್ಸ್ಯದ ಕಣ್ಣಿಗೆ ಗುರಿಯಿಟ್ಟು ಪ್ರಯೋಗಿಸಿದನು. ಕ್ಷಣಮಾತ್ರದಲ್ಲಿ ಆ ಮತ್ಸ್ಯವು ಕಣ್ಣಿನಲ್ಲಿ ತೂತುಬಿದ್ದು ಕೆಳಕ್ಕೆ ಹಾರಿಬಿದ್ದಿತು. ಅದನ್ನು ಕಂಡೊಡನೆಯೇ ಸಭೆಯಲ್ಲಿ ವಿಶೇಷ ಕೋಲಾಹಲವೆದ್ದಿತು. ಬ್ರಾಹ್ಮಣರು ಜಯಜಯಕಾರಮಾಡಿದರು. ಉತ್ಸಾಹಿ ಬ್ರಾಹ್ಮಣ ತರುಣರು ತಮ್ಮಲ್ಲೊಬ್ಬನು, ವೀರ ಕ್ಷತ್ರಿಯರಿಗೇ ಅಸಾಧ್ಯವಾಗಿದ್ದ ಯಂತ್ರವನ್ನು ಭೇದಿಸಿದನೆಂದು ಪರಮೋತ್ಸಾಹದಿಂದ ಕುಣಿದಾಡತೊಡಗಿದರು. ಸ್ವಯಂವರಕ್ಕಾಗಿ ಬಂದಿದ್ದ ದುರ್ಯೋಧನಾದಿ ಕೆಲಮಂದಿ ದುರಭಿಮಾನಿ ರಾಜರಾದರೋ, ಒಬ್ಬ ಬ್ರಾಹ್ಮಣ ಸಾಮಾನ್ಯನಿಂದ ವೀರ ಕ್ಷತ್ರಿಯರಾದ ತಮ್ಮ ಮಾನವು ಅಪಹರಿಸಲ್ಪಟ್ಟಿತೆಂದೂ, ಅಂತಹ ಅಸಾಧ್ಯ ಪಣವನ್ನಿಟ್ಟು, ತಮ್ಮನ್ನು ಕರೆಯಿಸಿ ಅಪಮಾನಗೊಳಿಸಿದ ದ್ರುಪದನಿಗೆ ತಕ್ಕ ಪ್ರತೀಕಾರ ಮಾಡಬೇಕೆಂದೂ, ಹಲ್ಲುಗಳನ್ನು ಕಡಿಯತೊಡಗಿದರು. ಇತರ ಜನಸಮೂಹವೆಲ್ಲವೂ, ತಮ್ಮ ರಾಜಪುತ್ರಿಗೆ ಸುಂದರನೂ ದೃಢಾಂಗನೂ ಆದ ವರನು ದೊರೆತನೆಂದು ಮಹದಾನಂದದಿಂದ ಕೋಲಾಹಲ ಮಾಡುತಿದ್ದತು. ಇತ್ತ ದ್ರೌಪದಿಯು, ವೀರಪಣವಾದ ತನ್ನನ್ನು, ವೀರ್ಯ ಪ್ರದರ್ಶನದಿಂದ ಗೆದ್ದ-

ಬ್ರಾಹ್ಮಣ ರೂಪಿನಲ್ಲಿದ್ದ ಆ ಮಹಾನುಭಾವನ ಸಮೀಪಕ್ಕೆ ಮೆಲ್ಲಡಿಗಳಿಂದ ನಡೆದುಬಂದು, ಪುಳಕಾಂಕಿತೆಯಾಗಿ, ಆತನ ಮುಖಚಂದ್ರನನ್ನು ಲಜ್ಜಾಮಿಶ್ರಿತವಾದ ಕಡೆಗಣ್ಣಿನಿಂದ ನೋಡುತ್ತ, ತನ್ನ ಕೈಯಲ್ಲಿದ್ದ ಪರಿಮಳ ಪುಷ್ಪಹಾರವನ್ನು ಆತನ ದೃಢವಾದ ಕಂಠಪ್ರದೇಶದಲ್ಲಿ ಸಮರ್ಪಿಸಿ ಬಳಿಯಲ್ಲಿ ನಿಂತಳು. ವೃದ್ಧ ಸುಮಂಗಲೆಯರು ಆ ವಧೂವರರ ತಲೆಯಮೇಲೆ ಸೇಸೆಯನ್ನು ತಳೆದು, ಮನಸಾರೆ ಆಶೀರ್ವಾದ ಮಾಡಿದರು. ಶಿಶುಪಾಲಜರಾಸಂಧಾದಿ ಮಹಾವೀರರಿಗೇ ಅಸಾಧ್ಯವೆನ್ನಿಸಿದ್ದ ಆ ಮತ್ಸ್ಯಯಂತ್ರ ಭೇದನ ಕಾರ್ಯವು ತ್ರಿಲೋಕ ವೀರನಾದ ಅರ್ಜುನನಿಂದಲ್ಲದೆ, ಮಿಕ್ಕವರಿಂದ ಆಗಿರಲಾರದೆಂದೂ, ಆ ವೀರವರನೇ ಆ ಪಾಂಡವ ಮಧ್ಯಮನಿರಬೇಕೆಂದೂ ಸಂದೇಹಿಸಿ, ಭೀಷ್ಮದ್ರೋಣಾದಿಗಳು, ಹೇಗಾದರೂ ಪಾಂಡವರು ಜೀವಂತರಾಗಿದ್ದರೆ ಸಾಕೆಂದುಕೊಂಡು ತಮ್ಮ ಬಿಡಾರಗಳನ್ನು ಸೇರಿದರು.

ಕ್ಷತ್ರಿಯೋತ್ತಮರೂ ರಾಜಾಧಿರಾಜರೂ ಆದ ತಮ್ಮ ಸಮ್ಮುಖದಲ್ಲಿ-ವೀರಪಣವಾದ ಪಾಂಚಾಲಪುತ್ರಿಯನ್ನು, ಬಡಬ್ರಾಹ್ಮಣನೊಬ್ಬನು ಗೆದುಕೊಂಡು, ಶಸ್ತ್ರಜೀವಿಗಳಾದ ತಮ್ಮ ಮೂತಿಗೆ ಕಪ್ಪುಬಳಿದಂತೆ ಅಪಮಾನಗೊಳಿಸಿದನೆಂದು ಪಾಂಚಾಲನಗರಿಯಲ್ಲಿ ನೆರೆದ ಶಿಶುಪಾಲ ಜರಾಸಂಧ ದುರ್ಯೋಧನಾದಿ ಕ್ಷತ್ರಿಯರೆಲ್ಲರೂ ಏಕವಾಗಿ ಯುದ್ಧಕ್ಕೆ ಸಿದ್ಧರಾದರು. ದ್ರುಪದರಾಜನು ವಿವಾಹಕಾಲದಲ್ಲಿ ಪ್ರಾಪ್ತವಾದ ಆ ವಿಘ್ನವನ್ನು ಕುರಿತು ಮಹದಾತಂಕಯುಕ್ತನಾಗಿರಲು, ಭೀಮಾರ್ಜುನರು ಬೆದರಬೇಡವೆಂದು ಆತನಿಗೆ ಧೈರ್ಯಹೇಳಿ, ಶತ್ರುಸೈನ್ಯದಮೇಲೆ ಕಾಣಿಸಿಕೊಂಡು, ಅಖಂಡ ಪರಾಕ್ರಮದಿಂದ ಪ್ರಹರಿಸತೊಡಗಿದರು. ಭೀಮಸೇನನಾದರೋ, ಹೆಮ್ಮರವೊಂದನ್ನು ಬೇರೊಂದಿಗೆ ಕಿತ್ತುಕೊಂಡು ಅದರಿಂದ ಶತ್ರುಸೇನೆಯನ್ನು ಕಾಲಾಂತಕನೋ ಎಂಬಂತೆ ಸವರತೊಡಗಿದನು. ವಿವಿಧಾಸ್ತ್ರಪ್ರಯೋಗದಿಂದ ಶತ್ರುಸೇನೆಯನ್ನು ಸಂಹರಿಸತೊಡಗಿದ ಅರ್ಜುನನ ಶರಘಾತಕ್ಕಾದರೂ ತಡೆದು ನಿಲ್ಲುವುದು ಶತ್ರುದಳಕ್ಕೆ ಅಸಾಧ್ಯವೆನ್ನಿಸಿ ಎಲ್ಲರೂ ಫಲಾಯನವಾದರು.

ತರುವಾಯ ಪಾಂಡವರು ಪರಮಾನಂದಭರಿತರಾಗಿ, ಅಲ್ಲಿಂದ ಹೊರಟು ತಮ್ಮನ್ನು ಅನುಸರಿಸಿಬಂದ ದ್ರೌಪದಿಯನ್ನೂ ಕರೆದುಕೊಂಡು, ತಾವು ಇಳಿದಿದ್ದ ಕುಂಬಾರನ ಮನೆಯನ್ನು ಸೇರಿ – 'ಅಮ್ಮಾ ನಾವು ಈ ದಿನ ಒಂದು

ಭಿಕ್ಷೆಯನ್ನು ತಂದಿದ್ದೇವೆ' ಎಂದು ಹೇಳಲು, ಆಕೆಯು ಅದು ಏನೆಂದು ವಿಚಾರಿಸುವುದಕ್ಕೆ ಮುಂಚಿತವಾಗಿಯೇ, - 'ಅಪ್ಪಾ ಆ ವಸ್ತುವನ್ನು ನೀವೈವರೂ ಸಮಾನವಾಗಿ ಅನುಭವಿಸಿರಪ್ಪಾ' ಎಂದುಬಿಟ್ಟಳು. ಆದರೆ, ಆ ವಸ್ತುವೇನೆಂಬುದು ತಿಳಿದ ತರುವಾಯ - ಸರ್ವಸುಲಕ್ಷಣಯುಕ್ತಳಾದ ಆ ಕನ್ಯಾಮಣಿಯನ್ನು ಕಂಡು ಮಹದಾತಂಕಯುಕ್ತಳಾಗಿ, ಪ್ರಮಾದವಾಯಿತೆಂದು ಚಿಂತಿಸುತ್ತಿರಲು, ಧರ್ಮಜನು,- 'ಅಮ್ಮಾ ಹಾಗಲ್ಲ, ತಾಯಿಯಾದ ನಿನ್ನ ಆಜ್ಞೆಯು ನಮ್ಮೆಲ್ಲರಿಗೂ ಶಿರೋಧಾರ್ಯವು. ಇದು ದೈವನಿಯಾಮಕವು. ನಿನ್ನಾಜ್ಞೆಯಂತೆ, ಈ ಕನ್ಯೆಯನ್ನು ನಾವೈವರೂ ಸಮಾನವಾಗಿ ಅನುಭವಿಸತಕ್ಕವರು' ಎಂದು ನುಡಿದನು. ಅರ್ಜುನನ ಆ ಮಾತನ್ನು ಕೇಳಿ ನೋಡಿದರರೆಲ್ಲರೂ ಪರಮಾನಂದಪಟ್ಟರು. ಧರ್ಮಜನು, ಧನಂಜಯನು ಮತ್ಸ್ಯಯಂತ್ರವನ್ನು ಭೇದಿಸಿ, ಆ ದ್ರುಪದರಾಜ ಕುವರಿಯನ್ನು ಗೆದ್ದು ತಂದ ಆದ್ಯಂತ ವಾರ್ತೆಯನ್ನೂ ತಿಳಿಸಿ ತಮ್ಮ ತಾಯಿಯನ್ನು ಸಂತೋಷಪಡಿಸಿದನು.



**ಅಧ್ಯಾಯ ೫.** **'ಸುಭದ್ರಾ ಕಲ್ಯಾಣ'**

ಪಾಂಚಾಲಾಧಿಪತಿ ದ್ರುಪದರಾಜನು, ವೇದವ್ಯಾಸರಿಂದ, ತನ್ನ ಮಗಳಾದ ದ್ರೌಪದಿಯ ಮತ್ತು ಪಾಂಡವರ ಪೂರ್ವವೃತ್ತಾಂತವನ್ನು ತಿಳಿದು ಸಂತುಷ್ಟನಾಗಿ ಆ ಕನ್ಯಾಶಿರೋಮಣಿಯನ್ನು ಯುಧಿಷ್ಠಿರ ಭೀಮ ಅರ್ಜುನ ನಕುಲ ಸಹದೇವರೈವರಿಗೂ ಏಕಮಾತ್ರ ಪತ್ನಿಯಾಗಿರಲು ದಾನಮಾಡಿ, ಅತಿ ವಿಜೃಂಭಣೆಯಿಂದ ವಿವಾಹ ಪ್ರಸ್ತುತವನ್ನೂ ವಿವಾಹಾಂಗವಾಗಿ ಮಹದುತ್ಸವಗಳನ್ನೂ ನಡೆಯಿಸಿ, ಕೆಲಕಾಲ ಅಳಿಯಂದಿರನ್ನು ತನ್ನ ರಾಜಧಾನಿಯಲ್ಲೇ ಇಟ್ಟುಕೊಂಡಿದ್ದನು.

ಮತ್ಸ್ಯ ಯಂತ್ರವನ್ನು ಭೇದಿಸಿದವನು ಧನಂಜಯನೆಂಬ ಸಂಗತಿಯೂ, ದ್ರೌಪದಿಯೊಬ್ಬಳನ್ನು ಪಾಂಡವರೈದುಮಂದಿಯೂ ವಿವಾಹವಾದರೆಂಬ ವಾರ್ತೆಯೂ ದೇಶದೇಶಾಂತರಗಳಲ್ಲೂ ಹಬ್ಬಿತು. ಆ ಸಂಗತಿಯನ್ನು ಕೇಳಿದೊಡನೆಯೇ, ಕೌರವರು ತಮ್ಮ ಜ್ಞಾತಿಗಳಿಗೆ ಮೇಲೆಮೇಲೆ ಉಂಟಾಗುತ್ತಿದ್ದ ಪ್ರಾದುರ್ಭಾವಕ್ಕಾಗಿ ಅತಿಶಯ ಅಸೂಯೆಗೊಂಡು, ಅವರನ್ನು

ಹೇಗೆ ಕೊನೆಗಾಣಿಸಬೇಕೆಂಬುದು ತೋರದೆ ಸಂಕಟಪಡುತ್ತಿದ್ದರು. ಅಷ್ಟರಲ್ಲಿ ಭೀಷ್ಮ ದ್ರೋಣ ವಿದುರರು, ಧೃತರಾಷ್ಟ್ರನೊಂದಿಗೆ ಯೋಚಿಸಿ, ವಿದುರನ ಮೂಲಕ ಪಾಂಡವರನ್ನು ಹಸ್ತಿನಾವತಿಗೆ ಕರೆಯಿಸಿಕೊಂಡು, ಇಂದ್ರಪ್ರಸ್ಥ ರಾಜಧಾನಿಯನ್ನು ಅವರಿಗೆ ವಿಂಗಡಿಸಿಕೊಟ್ಟು ಅಲ್ಲಿ ರಾಜ್ಯಭಾರವಮಾಡಿಕೊಂಡಿರುವಂತೆ ಅನುಮತಿಸಿ ಆಶೀರ್ವಾದ ಪೂರ್ವಕ ಕಳುಹಿಸಿದರು. ಯುಧಿಷ್ಠಿರನು, ಸಕಲರಿಂದಲೂ ಕಳುಹಿಸಿಕೊಂಡು, ಸೋದರರೊಂದಿಗೂ, ತಾಯಿಯೊಂದಿಗೂ, ಪತ್ನಿ ದ್ರೌಪದೀದೇವಿಯೊಂದಿಗೂ ತನ್ನ ರಾಜಧಾನಿಯನ್ನು ಸೇರಿ, ಪ್ರಜೆಪರಿವಾರಗಳನ್ನು ಧರ್ಮದಿಂದ ಪೋಷಿಸುತ್ತಾ ಸುಖವಾಗಿ ರಾಜ್ಯಭಾರ ಮಾಡಿಕೊಂಡಿದ್ದನು.

ವೀರಾದಿ ವೀರರೂ ಪ್ರಾಯಸಮರ್ಥರೂ ಆದ ಐವರು ರಾಜಪುತ್ರರಿಗೆ ಒಬ್ಬಳೇ ಸುಂದರಿಯು ಪತ್ನಿಯಾಗಿರುವುದೆಂದರೆ, ಲೌಕಿಕ ಬಾಳ್ವೆಯಲ್ಲಿ ಬಹು ಪ್ರಮಾದಕರ ವಿಚಾರವಲ್ಲವೆ? ಈ ಸಂಗತಿಯನ್ನು ಇತ್ಯರ್ಥಪಡಿಸಿ, ಅವರಲ್ಲಿ ಮನಃಕಷಾಯವುಂಟಾಗದಂತೆ ಮಾಡಬೇಕೆಂದು, ನಾರದರುವರಲ್ಲೊಬ್ಬೊಬ್ಬರೂ ಒಂದೊಂದು ವರ್ಷಕಾಲ, ದ್ರೌಪದಿಯನ್ನು ಪತ್ನೀಭಾವದಿಂದ ಕಂಡು ಆಕೆಯಲ್ಲಿ ಸುಖಿಸಬೇಕೆಂದೂ, ಹಾಗೆ ಒಬ್ಬರ ವಶದಲ್ಲಿದ್ದಾಗ್ಗೆ, ಆ ದಂಪತಿಗಳ ಏಕಾಂತಸ್ಥಳಕ್ಕೆ ಬೇರೊಬ್ಬರು ಪ್ರವೇಶಿಸುವುದಾದರೆ, ಅಂಥವರು ತೀರ್ಥಯಾತ್ರೆ ಮಾಡಬೇಕೆಂದೂ ಏರ್ಪಡಿಸಿ ಹೋದರು. ಸತ್ಕುಲ ಪ್ರಸೂತರಾದ ಪಾಂಡವರು, ಮಹರ್ಷಿಗಳ ವಾಕ್ಯದಂತೆಯೇ ನಡೆಯುತ್ತಾ, ಅನ್ಯೋನ್ಯತೆಯಿಂದ ಇರುತ್ತಿದ್ದರು. ಒಂದಾನೊಂದು ವೇಳೆ, ಅರ್ಜುನನು ಆರ್ತರಾದ ಭೂಸುರರ ಗೋಧನವನ್ನು ಕಳ್ಳರಿಂದ ರಕ್ಷಿಸಲು, ಆಯುಧಗಳನ್ನು ತೆಗೆದುಕೊಳ್ಳುವುದಕ್ಕಾಗಿ, ಯುಧಿಷ್ಠಿರನ ಏಕಾಂತ ಗೃಹವನ್ನು ಪ್ರವೇಶಿಸಬೇಕಾಯಿತು. ಅಲ್ಲಿ ಆತನು ತಮ್ಮ ಪ್ರತಿಜ್ಞೆಗೆ ವಿರೋಧವಾಗಿ, ಆ ದಂಪತಿಗಳು ಏಕಾಂತದಲ್ಲಿದ್ದುದನ್ನು ಕಂಡು, ಪ್ರಮಾದವಾಯಿತೆಂದು, ತಾಯಿ ಮತ್ತು ಸಹೋದರರ ಅನುಮತಿಪಡೆದು, ತೀರ್ಥಯಾತ್ರೆಗೆಂದು ಹೊರಟು ದೇಶಸಂಚಾರ ಮಾಡತೊಡಗಿದನು. ಈ ತೀರ್ಥಯಾತ್ರಾ ಪ್ರಸಂಗದಲ್ಲೇ ಗಂಗಾನದಿಯಲ್ಲಿ ಸ್ನಾನಮಾಡುತ್ತಿದ್ದ ಆತನನ್ನು ಕರೆಸಿಕೊಂಡು, ನಾಗಕನ್ಯೆಯಾದ ಉಲೂಪಿಯು ವರಿಸಿ ಆತನಿಂದ ಇರಾವತನೆಂಬ ಪುತ್ರನನ್ನು ಪಡೆದಳು. ತರುವಾ

ಯು ಮಣಿಪುರ ಪ್ರಾಂತದಲ್ಲಿ ಸಂಚಾರ ಮಾಡುತ್ತಿದ್ದಾಗ್ಗೆ ಆ ದೇಶದ ರಾಜನ ಮಗಳಾದ ಚಿತ್ರಾಂಗದೆಯು ಆತನನ್ನು ವರಿಸಿ ವಿವಾಹವಾಗಲು, ಆಕೆಯಲ್ಲಿ ಬಭ್ರುವಾಹನನೆಂಬ ಪುತ್ರನು ಜನಿಸಿದನು. ಮುಂದೆ ಉಳಿದ ಸ್ವಲ್ಪಕಾಲ ವನ್ನು ಶ್ರೀಕೃಷ್ಣ ಸನ್ನಿಧಿಯಲ್ಲಿ-ದ್ವಾರಕೆಯಲ್ಲಿದ್ದು ಕಳೆದು, ತರುವಾಯ ತನ್ನ ರಾಜಧಾನಿಯನ್ನು ಸೇರಬೇಕೆಂದು ಯೋಚಿಸಿಕೊಂಡಿರಲು, ಆ ವೇಳೆಗೆ ನಾ ರದರು ಬಂದು -'ಅಯ್ಯಾ ಅರ್ಜುನಾ, ಯದುಯುವತಿ ಸುಭದ್ರೆಯನ್ನು ದುರ್ಯೋಧನನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಬಲರಾಮನು ಯೋಚಿಸಿದ್ದಾನೆ. ಈಗ ನೀನು ಸನ್ಯಾಸಿಯ ವೇಷದಿಂದ ಇಲ್ಲೇ ರೈವತಕ ಪರ್ವತಪ್ರಾಂತದಲ್ಲಿ ವಾಸವಾಗಿರು ಶ್ರೀಕೃಷ್ಣನು ಮುಂದೆ ಎಲ್ಲವೂ ಅನುಕೂಲಿಸುವಂತೆ ಏರ್ಪಡಿಸುತ್ತಾನೆ' ಎಂದು ನುಡಿದು ಹೋದರು.

ಅರ್ಜುನನು ಮುನಿಗಳ ಮಾತಿನಂತೆ ಸನ್ಯಾಸಿಯ ವೇಷದಿಂದ ರೈವತ ಕಗಿರಿಯನ್ನು ಸೇರಿ, ಅಲ್ಲಿ ಚಳಿಯಿಂದ ಒಂದು ಮರದ ಪೊಟರೆಯಲ್ಲಡಗಿ ಕ ಷ್ಟಪಡುತ್ತ ಶ್ರೀ ಕಷ್ಣನನ್ನು ಧ್ಯಾನಿಸುತ್ತಿರಲು, ಸರ್ವಜ್ಞನಾದ ಆತನು, ಅರ್ಜುನನ ವೃತ್ತಾಂತವನ್ನು ತಿಳಿದು, ಆ ಸಂಗತಿಯನ್ನು ಬಲರಾಮನಲ್ಲಿ ಹೇಳಲು, ಆತನು ಆ ಸನ್ಯಾಸಿಯನ್ನು ಕಂಡು ಗೌರವಿಸಿ, ರಾಜಭವನದಲ್ಲೇ ವಸತಿಯನ್ನೇರ್ಪಡಿಸಿ, ಆತನ ಸೇವೆಗೆ ರಾಜಪುತ್ರಿ ಸುಭದ್ರಾದೇವಿಯನ್ನೇ ನಿ ಯಮಿಸಿದನು.

ಮುನಿವೇಷದಿಂದ ಇದ್ದರೂ, ಪ್ರಾಯಸಮರ್ಥನೂ, ಮನಸಿಜನಂತೆ ಸುಂದರಾಕಾರನೂ ಆದ ಆ ಧನಂಜಯನಲ್ಲಿ ಯುವತಿಯಾದ ಸುಭದ್ರೆಗೆ ಸ್ವಾ ಭಾವಿಕವಾಗಿಯೇ ಮೋಹವುತ್ಪನ್ನವಾಯಿತು. ಅರ್ಜುನನೂ ಆಕೆಯ ರೂ ಪುಲಾವಣ್ಯಗಳನ್ನು ಮೆಚ್ಚಿಕೊಳ್ಳದಿರಲಿಲ್ಲ. ಸುಭದ್ರಾರ್ಜುನರನ್ನು ಈ ಬಗೆ ಯಿಂದ ಏಕತ್ರಸೇರಿಸಿ, ಉಭಯರ ಸಂಬಂಧಕ್ಕೂ ಅವಕಾಶವನ್ನು ಕಲ್ಪಿಸ ಬೇಕೆಂಬುದೇ ಶ್ರೀಕೃಷ್ಣನ ಸಂಕಲ್ಪವಾಗಿದ್ದುದರಿಂದ ಎಲ್ಲವೂ ಸುರಕ್ಷಿತವಾ ಗಿಯೇ ನಡೆಯಿತು. ಮುಂದೊಂದು ದಿನ ಶ್ರೀಕೃಷ್ಣನು ಕುಶಸ್ಥಳಿಯಲ್ಲೊಂ ದು ಮಹೋತ್ಸವವನ್ನು ಏರ್ಪಡಿಸಿ, ಅದಕ್ಕೆ ಬಲರಾಮನೂ ರಾಜಾಂತಃಪುರ ದ ಸಮಸ್ತ ಜನರೂ ಹೋಗುವಂತೆ ಉಪಾಯಮಾಡಿ, ಆ ದಿನವೇ ಇತ್ತ ವಸು ದೇವ ದೇವಕಿಯರನ್ನು ಕರೆತಂದು ವಿವಾಹಮಾಡಿಸಿ, ತನ್ನ ರಥವನ್ನು ವೈ

ದುನನಿಗೆ ಕೊಟ್ಟು, ಇನ್ನು ನಿನ್ನ ಪತ್ನಿಯೊಂದಿಗೆ ಪ್ರಯಾಣಮಾಡೆಂದು ಸೂಚಿಸಿದನು. ಅರ್ಜುನನು, ಪರಮಾನಂದದಿಂದ ಬಾರಿಬಾರಿಗೂ ಶ್ರೀಕೃಷ್ಣನನ್ನು ಅಭಿನಂದಿಸುತ್ತ, ಸುಭದ್ರೆಯೊಂದಿಗೆ ರಥಾರೂಢನಾಗಿ ಹೊರಟನು.

ಇತ್ತ ಸನ್ಯಾಸಿಯು ರಾಜಪುತ್ರಿಯನ್ನು ಅಪಹರಿಸಿಕೊಂಡು ಹೋದನೆಂದು ದ್ವಾರಕೆಯಲ್ಲಿ ಕೋಲಾಹಲವೆದ್ದಿತು. ಆ ಸಂಗತಿಯನ್ನು ತಿಳಿದು ಬಲರಾಮನು, ಆ ಕಪಟ ಯತಿಯನ್ನು ಹಿಡಿದು ದಂಡಿಸಬೇಕೆಂದು ಸೈನ್ಯವನ್ನು ಕಳುಹಿಸಿದನು. ಆದರೆ ಅರ್ಜುನನು ತನ್ನ ಶರಪ್ರಯೋಗ ಚಾತುರ್ಯದಿಂದ ಆ ಸೈನ್ಯವನ್ನೆಲ್ಲಾ ಹೊಡೆದೋಡಿಸಿ ಸುರಕ್ಷಿತವಾಗಿ ಇಂದ್ರಪ್ರಸ್ಥ ರಾಜಧಾನಿಯನ್ನು ಸೇರಿ, ತನ್ನ ತಾಯಿಗೂ ಸೋದರರಿಗೂ, ದ್ರೌಪದಿಗೂ ಮಹದಾನಂದವನ್ನುಂಟುಮಾಡಿದನು. ಅಷ್ಟರಲ್ಲಿ, ತಮ್ಮ ಯದುಕನ್ಯೆಯನ್ನು ಯತಿವೇಷದಿಂದ ಅಪಹರಿಸಿಕೊಂಡು ಹೋದವನು ಪಾಂಡವ ವೀರನಾದ ಅರ್ಜುನನೆಂದು ತಿಳಿದು ಬರಲು, ಬಲರಾಮಾದಿಗಳು ಸಂತುಷ್ಟರಾಗಿ ಯಾದವ ಪರಿವಾರದೊಂದಿಗೆ ಇಂದ್ರಪ್ರಸ್ಥಕ್ಕೆ ಬಂದು, ಅಲ್ಲಿ ಕ್ರಮವಾಗಿ ಕನ್ಯಾಪ್ರದಾನ ಮಾಡಿಕೊಟ್ಟರು. ಸುಭದ್ರಾರ್ಜುನರ ಪರಿಣಯ ಮಹೋತ್ಸವವು ರಾಜಧಾನಿಯಲ್ಲಿ ಅತಿಶಯ ವಿಜೃಂಭಣೆಯಿಂದ ನೆರವೇರಿತು.

ಶ್ರೀಕೃಷ್ಣಾನುಗ್ರಹಕ್ಕೆ ಪಾತ್ರರಾದ ಪಾಂಡವರು, ತಮ್ಮ ಸದ್ಗುಣ ಸಚ್ಚಾರಿತ್ರ್ಯಗಳಿಂದ ಪ್ರಜಾರಂಜಕರಾಗಿ ರಾಜ್ಯಭಾರ ಮಾಡುತ್ತಿರಲು, ಶ್ರೀಕೃಷ್ಣನೂ ಒಂದು ವರ್ಷಕಾಲ ಇಂದ್ರಪ್ರಸ್ಥದಲ್ಲೇ ವಾಸವಾಗಿದ್ದನು. ಪಾಂಡವರಿಗೆ ದ್ರೌಪದೀದೇವಿಯಲ್ಲಿ ಕ್ರಮವಾಗಿ ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತಸೇನರೆಂಬ ಐದುಮಂದಿ ಮಕ್ಕಳು ಜನಿಸಿ ಉಪಪಾಂಡವರೆಂದು ಪ್ರಸಿದ್ಧರಾದರು. ಧನಂಜಯನಿಗೆ ಸುಭದ್ರಾದೇವಿಯಲ್ಲಿ ಅಭಿಮನ್ಯುವೆಂಬ ಪುತ್ರನು ಜನಿಸಿ, ಧನುರ್ವಿದ್ಯೆಯಲ್ಲಿ ಅರ್ಜುನನಿಂದಲೇ ಶಿಕ್ಷಿತನಾಗಿ ಮಹಾವೀರನೆನಿಸಿದನು.



## ಅಧ್ಯಾಯ ೬. ‘ಉತ್ತರ ಗೋಗ್ರಹಣ’

ವಸಂತಕಾಲದಲ್ಲಿ ಒಂದುದಿನ ಶ್ರೀಕೃಷ್ಣನೂ ಅರ್ಜುನನೂ ವಿಹಾರಾರ್ಥರಾಗಿ ಯಮುನಾತಟದಲ್ಲಿ ಸಂಚರಿಸುತ್ತಿದ್ದರು. ಆಗ ಒಬ್ಬ ವೃದ್ಧಬ್ರಾ

ಹ್ಮಣನು ಬಂದು, ಅರ್ಜುನನನ್ನು ಕಂಡು ಅತಿಥಿಯಾದ ತನಗೆ ಆಹಾರವನ್ನು ನೀಡೆಂದು ಯಾಚಿಸಿದನು. ಅರ್ಜುನನು ಆಗಬಹುದೆಂದು ವಾಗ್ದಾನಮಾಡಿದೊಡನೆಯೇ, ಆತನು ತನ್ನ ಸ್ವರೂಪವನ್ನು ಪ್ರಕಟಿಸಿ, ಯಜ್ಞೇಶ್ವರನಾದ ತನಗೆ ದೇವೇಂದ್ರನ ಖಾಂಡವವನವನ್ನು ದಹಿಸಲು ಅಪೇಕ್ಷೆಯಾಗಿರುವುದೆಂದು ನುಡಿ, ತಾನು ಅದನ್ನು ದಹಿಸುವಾಗ್ಗೆ, ಅದರಲ್ಲಿನ ಒಂದು ಪ್ರಾಣಿಯೂ ಒಂದು ವಸ್ತುವೂ ಹೊರಕ್ಕೆ ಹೋಗದಂತೆ ರಕ್ಷಿಸಬೇಕೆಂದೂ, ಆ ಸಂದರ್ಭದಲ್ಲಿ ದೇವತೆಗಳಿಂದ ಪ್ರಾಪ್ತವಾಗುವ ವಿಘ್ನವನ್ನು ಪರಿಹರಿಸಿ, ತನಗೆ ಅದು ಸಂಪೂರ್ಣರೀತಿಯಿಂದ ಆಹಾರವಾಗುವಂತೆ ಅನುಗೊಳಿಸಬೇಕೆಂದೂ ಕೇಳಿಕೊಂಡನು. ಅರ್ಜುನನು ಒಂದುಸಾರಿ ವಾಗ್ದಾನ ಮಾಡಿಬಿಟ್ಟಿದ್ದನಾದುದರಿಂದ ಅದಕ್ಕೆ ಪ್ರತಿಹೇಳಲರಿಯದೆ, ಶ್ರೀಕೃಷ್ಣನ ಅನುಮತಿಯಿಂದ ಆ ಕಾರ್ಯಕ್ಕೆ ಒಡಂಬಟ್ಟನು. ಒಡನೆ ಆ ಮಹಾವನಕ್ಕೆ ಅಗ್ನಿಯು ಪ್ರವೇಶವಾಗಿ, ಒಂದು ಕಡೆಯಿಂದ ಅಮೌಲ್ಯ ಮೂಲಿಕೆಗಳನ್ನೂ, ಅನೇಕ ಬಗೆಯ ಪುಷ್ಪಲತೆ-ಫಲವೃಕ್ಷಗಳನ್ನೂ, ಅವುಗಳಲ್ಲಡಗಿದ್ದ ಅನೇಕಾನೇಕ ಜೀವ ಜಂತುಗಳನ್ನೂ ದಹಿಸತೊಡಗಿದನು. ಆ ಸಂಗತಿಯು ದೇವರಾಜನಿಗೆ ತಿಳಿದೊಡನೆಯೇ ಆತನು ಕಾಲಮೇಘಗಳನ್ನು ಕಳುಹಿಸಲು ಅವು ಕುಂಭದ್ರೋಣವಾಗಿ ಮಳೆಯನ್ನು ಸುರಿಸಿ, ಅಗ್ನಿಯನ್ನು ಶಮನಗೊಳಿಸಲು ಯತ್ನಿಸಿದುವು. ಆದರೆ ಅರ್ಜುನನು, ಮಂತ್ರಾಸ್ತ್ರ ಪ್ರಯೋಗಗಳಿಂದ ಮೇಘಗಳ ಶಕ್ತಿಯನ್ನು ಉಡುಗಿಸಿದನಾದುದರಿಂದ, ದೇವೇಂದ್ರನು ವಿಶೇಷ ಸೈನ್ಯಗಳನ್ನು ಕಳುಹಿಸಿ, ಕೊನೆಗೆ ತಾನೇ ವಜ್ರಹಸ್ತನಾಗಿ ಐರಾವತವನ್ನೇರಿ ಅವರ ಮೇಲೇರಿ ಬಂದನು. ಅಷ್ಟರಲ್ಲಿ, ಆಕಾಶವಾಣಿಯಾಗಿ, ಅಗ್ನಿಗೆ ಸಹಾಯಕರಾಗಿ ಬಂದ ಆ ಇಬ್ಬರು ವೀರರೂ ನರ-ನಾರಾಯಣರೆಂದೂ, ಅವರ ಸಂಗಡ ಹೋರಾಡುವುದು ವ್ಯರ್ಥವೆಂದೂ ತಿಳಿಸಿದುದರಿಂದ, ಒಡನೆ ಯುದ್ಧವನ್ನು ಸಾಕುಮಾಡಿ, ಶ್ರೀಕೃಷ್ಣಾರ್ಜುನರನ್ನು ಕಂಡು, ಅವರನ್ನು ಉಪಚಾರೋಕ್ತಿಗಳಿಂದ ಸಂತೈಸಿದನು. ವನದಹನ ಕಾಲದಲ್ಲಿ ಉರಿಗೆ ಸಿಕ್ಕುಸಾಯದೆ. ಅರ್ಜುನನ ಮರೆಹೊಕ್ಕು ಬದುಕಿದ ದೈತ್ಯರ ಶಿಲ್ಪಿಯಾದ ಮಯನು, ಶ್ರೀಕೃಷ್ಣನ ಇಷ್ಟದಂತೆ ಧರ್ಮರಾಜನಿಗೆ ಮೂರುಲೋಕದಲ್ಲೂ ಎಣೆಯಿಲ್ಲದ ಸೌಂದರ್ಯದಿಂದೊಪ್ಪುವಂತಹ ಒಂದು ದಿವ್ಯ ಸಭಾಭವನವನ್ನು ತನ್ನ ಶಿಲ್ಪ ವಿದ್ಯಾ

ಚಾತುರ್ಯವು ಮೆರೆಯುವಂತೆ ರಚಿಸಿ ಕೊಟ್ಟುದಲ್ಲದೆ, ಭೀಮಸೇನನಿಗೊಂದು ಗದೆಯನ್ನೂ, ಅರ್ಜುನನಿಗೆ ದೇವದತ್ತವೆಂಬೊಂದು ಶಂಖವನ್ನೂ ಕೊಟ್ಟು ತನ್ನ ಕೃತಜ್ಞತೆಯನ್ನು ಪ್ರಕಟಿಸಿದನು.

ಆ ಮಹಾಸಭಾ ಪ್ರವೇಶ ಮಹೋತ್ಸವಕ್ಕಾಗಿ ನೆರೆದ ಅನೇಕಮಂದಿ ರಾಜಾಧಿರಾಜರೂ, ಮಹರ್ಷಿಗಳೂ ಧರ್ಮರಾಜನಿಂದ ವಿಶೇಷ ರೀತಿಯಿಂದ ಪೂಜಿಸಲ್ಪಟ್ಟು ಸಂತುಷ್ಟರಾದರು. ಆಗ ನಾರದ ಮಹರ್ಷಿಗಳು, ಧರ್ಮಜನಿಗೆ ಸಕಲವಿಧ ರಾಜನೀತಿಗಳನ್ನೂ ಬೋಧಿಸಿ ತಂದೆಯಾದ ಪಾಂಡುರಾಜನಿಗೆ ಸದ್ಗತಿಪ್ರದವಾದ ರಾಜಸೂಯಯಾಗ ಮಾಡೆಂದು ಸೂಚಿಸಿದರು. ಧರ್ಮಜನಾದರೂ, ಶ್ರೀಕೃಷ್ಣನೊಂದಿಗೂ ಭೀಮಾರ್ಜುನರೊಂದಿಗೂ ಯೋಚಿಸಿ ಹಾಗೆ ಮಾಡಲು ನಿರ್ಧರಿಸಿದನು. ಒಡನೆ, ಶ್ರೀಕೃಷ್ಣಸ್ವಾಮಿಯು ಭೀಮಾರ್ಜುನರನ್ನು ಜೊತೆಗೆ ಕರೆದುಕೊಂಡು, ಪ್ರಚಂಡ ವಿಕ್ರಮನಾದ ಜರಾಸಂಧನ ರಾಜಧಾನಿಗೆ ಹೋದನು. ಅಲ್ಲಿ ಭೀಮಸೇನನು ಅವನೊಂದಿಗೆ ಮಲ್ಲಯುದ್ಧವನ್ನು ಮಾಡಿ ಸಂಹರಿಸಲು, ಸೆರೆಯಲ್ಲಿದ್ದ ಸಹಸ್ರಾರು ಮಂದಿ ರಾಜಪುತ್ರರು ಅವರಿಗೆ ಕೃತಜ್ಞತೆಯಿಂದ ನಮಸ್ಕರಿಸಿ ಧರ್ಮಜನ ಯಾಗಕ್ಕೆ ಸಹಕರಿಸಲು ಸಿದ್ಧರಾದರು. ಅರ್ಜುನನು, ಅಗ್ನಿದೇವನು ಅನುಗ್ರಹಿಸಿ ಕೊಟ್ಟಿದ್ದ ದಿವ್ಯರಥದಲ್ಲಿ ಕುಳಿತು ಸಪ್ತದ್ವೀಪ, ಪಾತಾಳ, ಸಪ್ತಕಾದಿ ಸ್ಥಳಗಳಲ್ಲಿ ದಿಗ್ವಿಜಯಮಾಡಿ, ಆಯಾ ದೇಶಗಳಲ್ಲಿದ್ದ ರಾಜರನ್ನು ಜಯಿಸಿ, ಪುಷ್ಕಳ ಧನವನ್ನಾರ್ಜಿಸಿ ತಂದು ತಮ್ಮಣ್ಣನಿಗೆ ಒಪ್ಪಿಸಿದನು. (ಈ ಕಾರಣದಿಂದಲೇ ಆತನಿಗೆ ಧನಂಜಯನೆಂಬ ಸಾರ್ಥಕನಾಮವು ಲಭಿಸಿತೆಂದು ಪಂಡಿತವಾಕ್ಯವುಂಟು.) ಅರ್ಜುನನಂತೆಯೇ ಭೀಮಸೇನನೂ ನಕುಲ ಸಹದೇವರೂ, ಬೇರೆಬೇರೆ ದಿಕ್ಕುಗಳಲ್ಲಿ ದಿಗ್ವಿಜಯಮಾಡಿ, ವಿಶೇಷ ಧನವನ್ನಾರ್ಜಿಸಿ ತಂದು ಒದಗಿಸಿದರು. ದೇಶ ವಿದೇಶಗಳ ಸಾಮಂತರಾಜರು ಸೊಂಟಕಟ್ಟಿಕೊಂಡು, ಆಜ್ಞಾ ಬದ್ಧರಾಗಿ ನಿಂತು ಯಜ್ಞಕಾರ್ಯಗಳಲ್ಲಿ ಸಹಾಯಕರಾಗಿದ್ದರು. ರಾಜಸೂಯ ಮಹಾಯಾಗವು ವಿಶೇಷ ವಿಜೃಂಭಣೆಯಿಂದ ನೆರವೇರಿತು. ಸುರರು ಹವಿಸ್ಸಿನಿಂದಲೂ, ಭೂಸುರರೂ ಅತಿಥಿ ಅಭ್ಯಾಗತರೂ ಅನ್ನವಸ್ತ್ರ ಕ್ಷೇಮಭೂಮಿ ಮುಂತಾದ ವಿವಿಧ ದಾನಗಳಿಂದಲೂ ಸಂತುಷ್ಟರಾದರು.

ಈ ಯಾಗ ಕಾಲದಲ್ಲೇ ಮಹಾ ದುರಭಿಮಾನಿಯಾದ ದುರ್ಯೋಧನನು, ಕಾರಣಾಂತರದಿಂದ ತನಗೆ ಅಪಮಾನವಾಯಿತೆಂದು ಅಸಮಾಧಾನಗೊಂಡನು. ಪಾಂಡುವರಮೇಲೂ, ದ್ರೌಪದಿಯಮೇಲೂ ದ್ವೇಷಾಸೂಯೆಗಳು ದಶಾಧಿಕ ಶತಾಧಿಕ ಪ್ರಮಾಣದಿಂದ ಹೆಚ್ಚಿ, ಅವನಲ್ಲಿ ಜ್ವಾಲಾರೂಪದಿಂದ ಉರಿಯುತ್ತೊಡಗಿದವು. ಒಡನೆ ಊರಿಗೆ ಹೋದ ಅವನು, ಕರ್ಣ ದುಶ್ಶಾಸನಾದಿಗಳೊಂದಿಗೆ ಯೋಚಿಸಿ-ಧೃತರಾಷ್ಟ್ರನನ್ನು ಪ್ರೇರಿಸಿ, ಪಾಂಡವರನ್ನು ಹಸ್ತಿನಾವತಿಗೆ ಕರೆಸಿಕೊಂಡನು. ಶಕುನಿ ಮುಂತಾದ ಕಪಟಿಗಳು ದುರ್ಮಂತ್ರದಿಂದ ಸಿದ್ಧರಾಗಿ, ದ್ಯೂತವನ್ನು ಏರ್ಪಡಿಸಿ ಸಾಧು ಪ್ರಕೃತಿಯ ಧರ್ಮಜನನ್ನು ಸೋಲಿಸಿ, ಸರ್ವಸ್ವವನ್ನೂ ಅಪಹರಿಸಿಬಿಟ್ಟರು. ಯುಧಿಷ್ಠಿರನು ತನ್ನ ಸರ್ವ ಸಂಪತ್ತನ್ನು ಮಾತ್ರವಲ್ಲ-ತನ್ನ ನಾಲ್ಕುಮಂದಿ ತಮ್ಮಂದಿರನ್ನೂ, ದ್ರೌಪದಿಯನ್ನೂ, ತನ್ನನ್ನೂ ಸಹ ಪಣಕ್ಕಿಟ್ಟು ಸೋತುಬಿಟ್ಟನು. ಒಡನೆ ಆ ಘಾತುಕರು, ರಜಸ್ವಲೆಯಾಗಿದ್ದ ಮಹಾಪತಿವ್ರತೆ ದ್ರೌಪದೀ ದೇವಿಯನ್ನು ಸಭೆಗೆ ಎಳೆತರಿಸಿ ಅಲ್ಲಿ ವಸ್ತ್ರಹರಣ ಮಾಡಿ ಅವಮಾನಪಡಿಸಲುದ್ಯುಕ್ತರಾದರು. ಸತ್ಯ ಪ್ರತಿಜ್ಞೆಯಿಂದ ಬದ್ಧರಾಗಿದ್ದ ಪಾಂಡವರು, ಅಂತಹ ವಿಷಮ ಸ್ಥಿತಿಯಲ್ಲಿ ಸಹ ಏನುಮಾಡಲೂ ಮಾರ್ಗವಿಲ್ಲದೆ, ಮೂಗರಂತೆ ಸುಮ್ಮನಿದ್ದು ತಮ್ಮ ಧರ್ಮಪತ್ನಿಗೆ ತಮ್ಮ ಸಮಕ್ಷಮದಲ್ಲೇ ಆಗುತ್ತಿದ್ದ ಅಸಹನೀಯ ಪರಾಭವವನ್ನು ನೋಡುತ್ತಾ ಕುಳಿತಿರಬೇಕಾಯಿತು.

ಹತವೀರ್ಯರಂತೆ ಕುಳಿತಿದ್ದ ತನ್ನ ಪತಿಗಳಿಂದ ತನ್ನ ರಕ್ಷಣೆಯಾಗಲಾರದೆಂಬುದನ್ನು ತಿಳಿದ ತರುವಾಯ, ಆ ಸಾಧ್ವಿಯು, ಅನನ್ಯ ಶರಣಳಾಗಿ ಶ್ರೀಕೃಷ್ಣಪರಮಾತ್ಮನನ್ನು ಧ್ಯಾನಿಸಿ ಅಕ್ಷಯ ವಸ್ತ್ರವನ್ನು ಪಡೆದಳು. ಆಕೆಯ ಪತಿವ್ರತಾ ಪ್ರಭಾವಕ್ಕಾಗಿ ಧೃತರಾಷ್ಟ್ರ ಗಾಂಧಾರಿ ಮುಂತಾದವರೂ ಪರಮಾಶ್ಚರ್ಯಪಟ್ಟು, ತಮ್ಮ ಮಕ್ಕಳ ದುರುಳತನಕ್ಕಾಗಿ ರೋಸಿ ಪಾಂಡವರ ದಾಸ್ಯವನ್ನು ತಪ್ಪಿಸಿ, ಅವರ ರಾಜ್ಯೈಶ್ವರ್ಯಾದಿಗಳನ್ನು ಪುನಃ ಕೊಡಿಸಿ, ಅವರನ್ನು ಇಂದ್ರಪ್ರಸ್ಥ ರಾಜಧಾನಿಗೆ ಕಳುಹಿಸಿದರು. ಆದರೆ, ದುರ್ಯೋಧನಾದಿ ದುಷ್ಟ ಚತುಷ್ಟಯವು ಪುನಃ ಗುಪ್ತಾಲೋಚನೆಮಾಡಿ, ಧರ್ಮಜಾದಿಗಳನ್ನು ಹಿಂದಕ್ಕೆ ಕರೆಯಿಸಿ, ಪುನಃ ದ್ಯೂತವಾಡಿಸಿದರು. ಅದರಲ್ಲೂ ಯುಧಿಷ್ಠಿರನು ಸಂಪೂರ್ಣವಾಗಿ ಸೋತುಹೋದನು. ತರುವಾಯ, ಈ ಬಾರಿ

ಸಿಬಂಧನೆಮಾಡಿಕೊಂಡಿದ್ದ ಮೇರೆಗೆ ಪಂಚಪಾಂಡವರೂ ದ್ರೌಪದಿಯೂ, ಹನ್ನೆರಡು ವರ್ಷ ವನವಾಸ-ಒಂದು ವರ್ಷ ಅಜ್ಞಾತವಾಸ ಮಾಡಲು, ಪರದೇಶಿಗಳಂತೆ ಹೊರಹೊರಟರು.

ಧರ್ಮಾತ್ಮರಾದ ಪಾಂಡವರಿಗೆ ಪ್ರಾಪ್ತವಾದ ಈ ದುರ್ದೆಸೆಗಾಗಿ, ಧರ್ಮ ಪಕ್ಷಪಾತಿಗಳಾದ ಸಕಲರೂ ಮರುಗಿ, ದುರುಳನಾದ ದುರ್ಯೋಧನನನ್ನು ನಿಂದಿಸಿದರು. ಸಹಸ್ರಾರು ಮಂದಿ ಬ್ರಾಹ್ಮಣರು ಅವರನ್ನು ಬಿಟ್ಟಿರಲಾರದೆ ವನಕ್ಕೆ ಅವರೊಂದಿಗೇ ಪ್ರಯಾಣಮಾಡಿದರು. ಮಹಾಪತಿವ್ರತಾ ಶಿರೋಮಣಿಯಾದ ದ್ರೌಪದಿಯು ಸೂರ್ಯಭಗವಾನನನ್ನು ಉಪಾಸಿಸಿ ಪಡೆದ ಅಕ್ಷಯ ಪಾತ್ರೆಯಿಂದ, ಅಲ್ಲೂ ಸಹಸ್ರಾರು ಮಂದಿ ವಿಪ್ರರಿಗೆ ಮೃಷ್ಟಾನ್ನವನ್ನುಣ್ಣಿಸುತ್ತ, ಆ ಧರ್ಮಾತ್ಮರು ತೇಜಃಪುಂಜರಾಗಿ ಪ್ರಕಾಶಿಸಿದರು. ಅವರಿಗೆ ದುರುಳರಾದ ಆ ದಾಯಾದ್ಯರ ಕಾಟವು ಅಲ್ಲೂ ತಪ್ಪಿದುದಿಲ್ಲ. ದುರ್ಯೋಧನನು, ಒಂದು ಬಾರಿ ತನ್ನ ಸಕಲೈಶ್ವರ್ಯದ ಸೊಬಗನ್ನು ಮೆರೆಯಿಸಿಕೊಂಡು ಘೋಷಯಾತ್ರಾ ನೆಪದಿಂದ ಅರಣ್ಯವನ್ನು ಪ್ರವೇಶಿಸಿ ವನವಾಸಿಗಳಾಗಿದ್ದ ಅವರೆದುರಿಗೆ ಪ್ರದರ್ಶಿಸಿ, ಅವರ ಮನಸ್ಸನ್ನು ನೋಯಿಸಲು ಪ್ರಯತ್ನಿಸಿದನು. ಅವನೊಂದಿಗೆ ಬಂದಿದ್ದ ಕೌರವ ಪರಿವಾರದ ಜಯದ್ರಥನು ದ್ರೌಪದೀದೇವಿಯನ್ನು ಅಪಹರಿಸಿಕೊಂಡು ಹೋಗಿರಲು, ಭೀಮಸೇನನು ಆ ನೀಚನನ್ನು ಹಿಡಿದು ಪರಾಭವಗೊಳಿಸಿದನು. ದುರ್ಯೋಧನನು ಗಂಧರ್ವರ ಕೋಪಕ್ಕೀಡಾಗಿ ಅವರಿಂದ ಬಂಧಿತನಾಗಿರಲು, ಅರ್ಜುನನು ಧರ್ಮಾತ್ಮನಾದ ಯುಧಿಷ್ಠಿರನ ಆಜ್ಞೆಯಿಂದ ಗಂಧರ್ವರನ್ನು ಜಯಿಸಿ, ಅವನನ್ನು ಬಂಧನದಿಂದ ಬಿಡಿಸಿ, ಧರ್ಮಜನ ಸಮ್ಮುಖಕ್ಕೆ ತಂದು ಹಾಕಿದನು.

ಗಂಧರ್ವರ ಸೆರೆಯಿಂದ ಬಿಡುಗಡೆಯಾಯಿತಾದರೂ, ಅವರು ಕಟ್ಟಿದ್ದ ಪಾಶಬಂಧನಗಳಿಂದ ಅವನನ್ನು ಮುಕ್ತಮಾಡಲು, ಧನಂಜಯನ ಅಸ್ತ್ರಶಸ್ತ್ರಗಳಿಗಾಗಲೀ, ಭೀಮಸೇನನ ಪರಾಕ್ರಮಕ್ಕಾಗಲೀ ಸಾಧ್ಯವಿಲ್ಲವೆಂಬುದನ್ನು ಕಂಡು, ವ್ಯಸನಕ್ರಾಂತನಾದ ಯುಧಿಷ್ಠಿರನು, ಮಹರ್ಷಿಗಳನ್ನು ಪರಿಹಾರ ಕೇಳಿದನು. ಅವರು, 'ಈ ಗಂಧರ್ವರು ಕಟ್ಟಿದ ಗಂಟು, ಅವರಿಂದಲೇ ಬಿಚ್ಚಲ್ಪಡಬೇಕು, ಅಥವ ಮನಸಾವಾಚಾಕರ್ಮಣಾ, ಪತಿಯೇ ಪರದೇವತೆಯೆಂಬ ನಿಶ್ಚಯದಿಂದ ಪತಿಸೇವೆಯಲ್ಲಿ ತೊಡಗಿರುವ ಮಹಾಪತಿವ್ರತೆ

ಯು ಬಿಚ್ಚಬೇಕು. ಹಾಗಲ್ಲದೆ, ಭೂಮಿಯಲ್ಲಿ ಮತ್ತಾರಿಂದಲೂ ಈ ಕಾರ್ಯವು ಸಾಧ್ಯವಿಲ್ಲ'ವೆಂದು ನುಡಿದುಬಿಟ್ಟರು. ಒಡನೆ ಅಜಾತಶತ್ರುವಾದ ಧರ್ಮರಾಜನು, ದ್ರೌಪದಿಯನ್ನು ಕುರಿತು, ಆ ಕಟ್ಟನ್ನು ಬಿಚ್ಚಿ, ನಿನ್ನ ಮೈದುನನ ಪ್ರಾಣರಕ್ಷಣೆಮಾಡೆಂದು ಆಜ್ಞಾಪಿಸಲು, ಆ ಸಾಧ್ವಿಯು, ಪ್ರತಿಮಾತು ಹೇಳದೆ ಆ ದುರುಳನ ಕಡೆಗೆ ನೋಡಲಿಕ್ಕೂ ಹೇಸಿ, ತನ್ನ ಎಡಗಾಲಿನಿಂದ ಆ ಕಟ್ಟನ್ನು ಸೋಕಲು ಅದು ಒಡನೆ ಬಿಚ್ಚಿಹೋಯಿತು. ಮಹಾದುರಭಿಮಾನಿಯಾದ ಕೌರವನು ತನಗೆ ತನ್ನ ನಾಯಾದ್ಯರ ಕಣ್ಣೆದುರಿನಲ್ಲೇ ಮರಣ ಸದೃಶವಾದ ಈ ಬಗೆಯ ಅಪಮಾನವಾದುದಕ್ಕಾಗಿಯೂ, ತನ್ನ ಬಿಡುಗಡೆಯೂ ಅವರಿಂದಲೇ ಆದುದಕ್ಕಾಗಿಯೂ, ಅತಿಶಯ ಸಂತಾಪಗೊಂಡು, ಅವರಿಗೆ ಪುನಃ ತಲೆಯೆತ್ತಿ ಮುಖ ತೋರಿಸಲು ಸಹ ನಾಚಿ, ಪರಿವಾರದೊಂದಿಗೆ ಹೊರಟು, ಮೂಗು ಹೋದವನಂತೆ ಊರು ಸೇರಿಕೊಂಡನು.

ಧನ್ಯಾತ್ಮರಾದ ಪಾಂಡುಪುತ್ರರು, ಹೀಗೆ ಹಲವು ವರ್ಷಕಾಲ ವನದಲ್ಲಿ ವಾಸಿಸಿ, ಋಷಿ ಮುನಿಗಳಿಗೆ ಹಿಂಸಕರಾಗಿದ್ದ ರಾಕ್ಷಸರನ್ನೂ ದುಷ್ಟ ಮೃಗಗಳನ್ನೂ ಸಂಹರಿಸಿ ತಪೋವನಗಳನ್ನು ನಿರುಪದ್ರವಗೊಳಿಸಿದರು. ಮುಂದೆ ಒಂದು ದಿನ ಶ್ರೀ ವೇದವ್ಯಾಸ ಮಹರ್ಷಿಗಳು, ಅವರಿದ್ದ ಆಶ್ರಮದೆಡೆಗೆ ಬರಲು, ಯುಧಿಷ್ಠಿರನು ಒಡನೆ ಇದಿರೆದ್ದು, ತಮ್ಮಂದಿರೊಡನೆ ಅವರನ್ನು ಎದುರುಗೊಂಡು ನಮಿಸಿ, ಉಪಚರಿಸಿ ಒಳಕ್ಕೆ ಕರೆತಂದು, ಅರ್ಘ್ಯಪಾದ್ಯಾದಿ ಷೋಡಶೋಪಚಾರಗಳಿಂದ ಪೂಜಿಸಿದನು. ಸಂತುಷ್ಟರಾದ ಆ ಮುನಿವರ್ಯರು ಕುಶಲಪ್ರಶ್ನೆಗಳಾದ ನಂತರ - 'ಅಯ್ಯಾ ಯುಧಿಷ್ಠಿರಾ, ನಿಮ್ಮ ವನವಾಸದ ಈ ಹನ್ನೆರಡು ವರ್ಷಗಳೂ, ಅಜ್ಞಾತವಾಸದ ಒಂದು ವರ್ಷವೂ ಮುಗಿವ ತರುವಾಯ, ನಿಮಗೆ ಕೌರವನೊಂದಿಗೆ ಲೋಕಭೀಕರವೆನಿಸುವಂತಹ ಮಹದ್ಯುದ್ಧವೊಂದು ನಡೆವ ಸಂಭವವಿದೆ. ಯುದ್ಧದಲ್ಲಿ ಪರಶುರಾಮನನ್ನೇ ನಷ್ಟೆಮಾಡಿದ ಭೀಷ್ಮನೊಂದಿಗೂ, ದ್ರೋಣ ಕೃಪ ಅಶ್ವತ್ಥಾಮರೊಂದಿಗೂ ಪ್ರಾಪ್ತವಾಗುವ ಕದನದಲ್ಲಿ ಅಲ್ಪಶ್ರಮೆಯಿಂದ ಜಯವನ್ನು ಹೊಂದಲು ಸಾಧ್ಯವಿಲ್ಲ ಆದುದರಿಂದ ಅರ್ಜುನನು ಇಲ್ಲೇ ಸಮೀಪದಲ್ಲಿರುವ ಇಂದ್ರಕೀಲ ಪರ್ವತದಲ್ಲಿ ತಪಸ್ಸುಮಾಡಿ, ಪರಮೇಶ್ವರನನ್ನು ಮೆಚ್ಚಿಸಿ, ಪಾಶುಪತಾದಿ ಮಹಾಸ್ತ್ರಗಳನ್ನು ಸಂಪಾದಿಸಲಿ. ಆಗ್ಗೆ ಆತನಿಗೆ ಎದುರಾಗುವವರು ಯಾ

ರೂ ಇರಲಾರರು' ಎಂದು ಹಿತೋಕ್ತಿಗಳನ್ನು ಹೇಳಿ, ಮಂತ್ರೋಪದೇಶ ಮಾಡಿ, ಹೊರಟುಹೋದರು. ಒಡನೆ ಅರ್ಜುನನು ಸಹೋದರರಿಂದಲೂ, ದ್ರೌಪದಿಯಿಂದಲೂ ಅನುಮತಿ ಪಡೆದು, ಆ ಇಂದ್ರಕೀಲಗಿರಿತಟವನ್ನು ಸೇರಿ, ಅಲ್ಲಿ ಸ್ನಾನ ಸಂಧ್ಯಾದಿಗಳನ್ನಾಚರಿಸಿ, ನಿರ್ಜನವಾದ ಒಂದು ಪವಿತ್ರ ಪ್ರದೇಶದಲ್ಲಿ ನಿಂತು, ಮುನಿಗಳು ಉಪದೇಶಿಸಿದ್ದ ಮಂತ್ರರಾಜವನ್ನು ಜಪಿಸುತ್ತ ಏಕಾಗ್ರಚಿತ್ತನಾಗಿ ಪರಶಿವನ ಧ್ಯಾನದಲ್ಲಿ ತೊಡಗಿದನು. ಹೀಗೆ ಫಲಾಹಾರ ಪರ್ಣಾಹಾರ ಜಲಾಹಾರ ಉಪವಾಸಗಳಿಂದ ಹಲವು ದಿನಗಳ ವರೆಗೆ ನಿದ್ರೆ, ವಿಶ್ರಾಂತಿಗಳನ್ನು ಅಪೇಕ್ಷಿಸದೆಯೇ, ಕುಳಿತು, ನಿಂತು, ಏಕಪಾದದಲ್ಲಿ, ಅಂಗುಷ್ಠವನ್ನು ಮಾತ್ರ ನೆಲಕ್ಕೂರಿನಿಂತು, ಹೀಗೆ ವಿವಿಧ ರೀತಿಗಳಿಂದ ಬಹು ಉಗ್ರವಾದ ತಪಸ್ಸಿನಿಂದ ತನ್ನ ಮನೋರಥ ಸಿದ್ಧಿಗಾಗಿ ಶ್ರಮಿಸಿದನು. ಆ ಸಂಯಮಿಯು ಹಾಗೆ ನಿಶ್ಚಲಚಿತ್ತದಿಂದ ಮಾಡಿದ ತಪಸ್ಸು ಪರಮೇಶ್ವರನ ಗಮನವನ್ನು ಆಕರ್ಷಿಸದಿರಲಿಲ್ಲ. ಶಂಕರನು ತನ್ನ ಭಕ್ತನಾದ ಆತನ ಇಷ್ಟಾರ್ಥ ಪೂರ್ಣಮಾಡಬೇಕೆಂಬ ಇಚ್ಛೆಯಿಂದ, ಪತ್ನಿಯೊಡನೆ ಹೊರಟು, ಆತನಿದ್ದ ಪ್ರದೇಶಕ್ಕೆ ಬಂದನು. ಅಲ್ಲಿಗೆ ಬಂದೊಡನೆಯೇ, ಧನುರ್ಧಾರಿಯಾಗಿಯೇ ನಿಂತು, ತಪಸ್ಸು ಮಾಡುತ್ತಿದ್ದ ಆತನೊಂದಿಗೆ ಸ್ವಲ್ಪ ವಿನೋದ ಯುದ್ಧವನ್ನು ಬಯಸಿ, ತಾನು ಶಬರವೇಷವನ್ನು ಧಾರಣ ಮಾಡಿಕೊಂಡು, ಶಾಪದಿಂದ ಹಂದಿಯ ರೂಪಿನಿಂದ ಸಂಚರಿಸುತ್ತಿದ್ದ ಮೂಕದಾನವನನ್ನು ಅಟ್ಟಿಸಿಕೊಂಡು ಬೇಟೆಯಾಡುತ್ತಾ ಕಾಡಿನ ಆ ಭಾಗದಲ್ಲಿ ಸಂಚರಿಸತೊಡಗಿದನು. ಮಹಾರೋಷದಿಂದ ತನ್ನೆಡೆಗೆ ನುಗ್ಗಿಬಂದ ಆ ಹಂದಿಯನ್ನು ಕಂಡು ಅರ್ಜುನನು ಗಾಂಡೀವ ಧನುಸ್ಸಿನಲ್ಲಿ ಬಾಣವನ್ನೇರಿಸಿ ಪ್ರಹರಿಸಿದನು. ಹಂದಿಯು ಸತ್ತುಬಿದ್ದಿತು. ಸ್ವಲ್ಪ ಹೊತ್ತಿನಲ್ಲೇ ಅಲ್ಲಿಗೆ ಬಂದ ಶಬರರೂಪೀ ಶಂಕರನು, ತನ್ನ ಬಾಣಕ್ಕೆ ಗುರಿಯಾಗಿದ್ದ ಆ ಬೇಟೆಯನ್ನು ಹೊಡೆದವನಾರೆಂದು ತರ್ಘಟಿಸಲು, ಅರ್ಜುನನಿಗೂ ಅವನಿಗೂ ಕದನವು ಕೈಗಟ್ಟಿತು.

ಧನುರ್ಧರಾಗ್ರೇಸರನಾದ ಧನಂಜಯನು ತನಗೆ ಆವರೆಗೆ ಪರಿಚಯವಾಗಿದ್ದ ಸಮಸ್ತ ಅಸ್ತ್ರಶಸ್ತ್ರಗಳನ್ನೂ ಪ್ರಯೋಗಿಸಿ, ಆ ಪ್ರತಿದ್ವಂದ್ವಿಯನ್ನು ಪರಾಜಯಗೊಳಿಸಲು ಪ್ರಯತ್ನಿಸಿದನಾದರೂ ಸಾಧ್ಯವಾಗಲಿಲ್ಲ. ವೀರಕ್ಷತ್ರಿಯನಾದ ತನಗೆ, ಒಬ್ಬ ಸಾಮಾನ್ಯ ಬೇಡನು ಹಾಗೆ ಅಜೇಯನಾಗಿ ಎದು

ರಾದುದನ್ನು ಕಂಡು, ಅರ್ಜುನನು ಸಂತಾಪಗೊಂಡನು. ಅವನನ್ನು ಜಯಿಸದಿದ್ದರೆ, ತನ್ನ ಜನ್ಮವೇತಕ್ಕೆಂದು ಹಳಿದುಗೊಂಡನು. ತನ್ನ ಪೌರುಷವನ್ನು ಹಲವು ಬಗೆಯಿಂದ ನಿಂದಿಸಿಕೊಂಡನು. ಮತ್ತೊಂದುವೇಳೆ ಮಹಾರೋಷದಿಂದ ಯುದ್ಧಮಾಡಿದನು. ಆದರೂ ಏನೂ ಪ್ರಯೋಜನವಾಗಲಿಲ್ಲ. ಆಗಲಾತನು ಹಾಗೆ ಬಲಹೀನನಾದ ತಾನು, ಶಂಕರನನ್ನು ಕುರಿತು ಆರಾಧಿಸಿ ನೂತನ ಶಕ್ತಿಸಾಮರ್ಥ್ಯಗಳನ್ನು ಗಳಿಸಿ, ತರುವಾಯ ಆ ತನ್ನ ಶತ್ರುವನ್ನು ನಿರ್ಮೂಲಗೊಳಿಸಬೇಕೆಂದು ಸಂಕಲ್ಪಿಸಿ, ಮಳಲ ಲಿಂಗವನ್ನು ಮಾಡಿ, ಪುಷ್ಪ ಪತ್ರಾಕ್ಷತೆಗಳಿಂದ ವಿಧ್ಯುಕ್ತವಾಗಿ ಅದನ್ನು ಪೂಜಿಸಿದನು. ಅತಿಶಯ ಶ್ರದ್ಧಾಭಕ್ತಿಗಳಿಂದ ಲಿಂಗಾರ್ಚನೆ ಮಾಡಿದ ತರುವಾಯ ಆತನು ಭಕ್ತ್ಯುದ್ರೇಕದಿಂದ. ಪರಶಿವನ ಕೃಪೆಗೆ ಪಾತ್ರನಾದ ತನಗೆ ಆ ಪಾಮರ ಶಬರನು ಎಷ್ಟುಮಾತ್ರದವನೆಂದು ಆವನಿಗೆ ಎದುರಾಗಿ ನಿಲ್ಲಲು, ತಾನು ಆವರೆಗೆ ಲಿಂಗದಮೇಲೆ ಏರಿಸಿದ್ದ ಪತ್ರಪುಷ್ಪಾದಿಗಳೆಲ್ಲವೂ, ಆ ಶಬರನ ತಲೆಯ ಮೇಲಿರುವುದನ್ನು ಕಂಡು ಆಶ್ಚರ್ಯಚಕಿತನಾಗಿ, ಇದೇನು ಸೋಜಿಗವೆಂದುಕೊಂಡು, ಮತ್ತೊಂದುವೇಳೆ ಹಾಗೆಯೇ ಅರ್ಚಿಸಿದನು. ಆಗಲೂ ಹಾಗೆಯೇ ಲಿಂಗಕ್ಕೇರಿಸಿದ ಪುಷ್ಪ ಪತ್ರಾಕ್ಷತೆಗಳೆಲ್ಲವೂ ಆ ಶಬರನ ತಲೆಯಮೇಲೆ ಕಂಡುಬಂದುವು. ಅರ್ಜುನನಿಗೆ ಸಂಶಯವು ನಿವಾರಣೆಯಾಯಿತು. ಶಬರ ರೂಪದಿಂದ ತನ್ನೆದುರಿಗೆ ನಿಂತವನು, ಭಕ್ತಾಭೀಷ್ಟವರಪ್ರದನಾದ ಶಂಕರಮೂರ್ತಿಯೆಂದು ನಿರ್ಧರವಾಯಿತು. ಒಡನೆ, ದಂಡವತ್ ಸಾಷ್ಟಾಂಗಪ್ರಣಾಮ ಮಾಡಿ, ಅಜ್ಞನಾದ ತನ್ನ ಮಹಾಪರಾಧವನ್ನು ಕ್ಷಮಿಸಬೇಕೆಂದು ಆ ದೇವದೇವನನ್ನು ಅನೇಕವಿಧದಿಂದ ಪ್ರಾರ್ಥಿಸಿದನು. ದಯಾಳುವಾದ ಶಂಕರನು, ಆ ತನ್ನ ಭಕ್ತೋತ್ತಮನನ್ನು ಮೇಲಕ್ಕೆತ್ತಿ, ಉಚಿತವಚನಗಳಿಂದ ಆದರಿಸಿ, ಪಾಶುಪತಮಹಾಸ್ತ್ರವನ್ನು ಪ್ರಯೋಗೋಪಸಂಹಾರಮರ್ಮಗಳೊಂದಿಗೆ ಪ್ರಸಾದಿಸಿ ಪಾರ್ವತೀದೇವಿಯೊಂದಿಗೆ ಅಂತರ್ಧಾನನಾದನು.

ಪರಶಿವನ ಅಗಲಿಕೆಯಿಂದ ಚಿತ್ತಚಾಂಚಲ್ಯವನ್ನು ಹೊಂದಿ ವ್ಯಸನಾಕ್ರಾಂತನಾಗಿದ್ದ ಧನಂಜಯನೆಡೆಗೆ. ದೇವೇಂದ್ರನು ವಿಮಾನಾರೂಢನಾಗಿ ಬಂದು, ತನ್ನ ಕುಮಾರನ ಪ್ರಾದುರ್ಭಾವಕ್ಕಾಗಿ ಆತನನ್ನು ಬಹುಬಗೆಯಿಂದ ಅಭಿನಂದಿಸಿ. ತನ್ನೊಂದಿಗೆ ಅಮರಾವತಿಗೆ ಕರೆದೊಯ್ದನು. ಅಲ್ಲಿ ಆತನ

ಮನೋರಂಜನೆಗಾಗಿ, ಹಲವು ಮಹೋತ್ಸವಗಳನ್ನು ನಡೆಸಿ, ಆ ವೀರನನ್ನು ಆದರಿಸಿದನು. ಪಾಶುಪತಾಸ್ತ್ರಲಾಭದಿಂದ ತ್ರಿಲೋಕವೀರನೆನಿಸಿದ್ದ ಅರ್ಜುನನು, ಇಂದ್ರನಿಂದ ಆಜ್ಞಪ್ತನಾಗಿ ದೇವವೈರಿಗಳಾಗಿದ್ದ ಕಾಲಕೇಯ- ನಿವಾತಕವಚರೆಂಬ ದಾನವರನ್ನು ಜಯಿಸಿ ಸಕಲ ದೇವವರ್ಗದಿಂದಲೂ ಸನ್ಮಾನಿತನಾದನು. ಈ ಸಂದರ್ಭದಲ್ಲೇ, ಆತನನ್ನು ಮೇನಕೆಯೆಂಬ ಅಪ್ಸರೆಯು ಕಾಮಿಸಿ ಬರಲು, ಧೀರೋದಾತ್ತನಾಯಕನಾದ ಆತನು, ತನ್ನ ತಂದೆಯಾದ ಇಂದ್ರನ ಭೋಗಕಾಂತೆಯಾದುದರಿಂದ ಆಕೆಯು ತನಗೆ ಮಾತೃಸದೃಶಳೆಂಬ ಭಾವನೆಯನ್ನಿಟ್ಟು ಅವಳ ಇಷ್ಟಕ್ಕೆ ಒಡಂಬಡದಿರಲು, ಕಾಮಾಂಧಳಾದ ಆ ದೇವವೇಶ್ಯೆಯು ಅವನನ್ನು ಕುರಿತು ಒಂದು ವರ್ಷಕಾಲ ನಪುಂಸಕನಾಗೆಂದು ಶಾಪಕೊಟ್ಟಳು.

ಧರ್ಮಾತ್ಮರಾದ ಪಾಂಡವರ ಹನ್ನೆರಡು ವರ್ಷದ ವನವಾಸಾವಧಿಯು ಮುಗಿಯಲು, ಮುಂದೆ ಅವರು ಅಜ್ಞಾತವಾಸದ ಒಂದು ವರ್ಷದ ಕಾಲವನ್ನು ವಿರಾಟರಾಜ್ಯದಲ್ಲಿದ್ದು ಕಳೆಯಬೇಕೆಂದು ನಿರ್ಧರಿಸಿದರು. ಯುಧಿಷ್ಠಿರನು ಯತಿವೇಷ ಸ್ವೀಕಾರಮಾಡಿ ಕಂಕಭಟ್ಟನೆಂಬ ಹೆಸರಿನಿಂದ ವಿರಾಟನ ಸಭೆಯಲ್ಲಿ ಇರಲೊಪ್ಪಿದನು. ಭೀಮಸೇನನು ವಲಲನೆಂಬ ಹೆಸರಿನಿಂದ ವಿರಾಟರಾಜನ ಪಾಕಶಾಲಾಧ್ಯಕ್ಷತೆಯನ್ನು ವಹಿಸಿದನು. ನಮ್ಮ ಕಥಾನಾಯಕನು, ಬೃಹನ್ನಳೆ ಎಂಬ ಹೆಸರಿನಿಂದ ಮೇನಕೆಯು ತನಗೆ ಕೊಟ್ಟಿದ್ದ ಶಾಪವನ್ನು ಉಪಯೋಗಿಸಿಕೊಂಡು, ನಪುಂಸಕನಾಗಿ ರಾಜಕನ್ನಿಕೆಯರಿಗೆ ಭರತಶಾಸ್ತ್ರವನ್ನೂ ಸಂಗೀತವನ್ನೂ ಕಲಿಸುತ್ತ ಅಂತಃಪುರದಲ್ಲಿ ವಾಸಿಸಿದನು. ನಕುಲ ಸಹದೇವರು ದಾಮಗ್ರಂಥಿ, ತಂತಿಪಾಲರೆಂಬ ನಾಮಧೇಯಗಳಿಂದ, ವಿರಾಟನ ಗೋಸಮೂಹವನ್ನೂ, ಅಶ್ವಸಮೂಹವನ್ನೂ ರಕ್ಷಿಸಿಕೊಂಡಿರಲು ನಿಯಮಿತರಾದರು. ದ್ರೌಪದಿಯು ಸೈರಂಧ್ರಿಯ ವೇಷದಿಂದ ವಿರಾಟಪತ್ನಿ ಸುದೇಷ್ಣೆಯ ಸೇವೆಗೆ ನಿಂತಳು. ಮಹಾವೀರರೂ, ಮಹತ್ಸೌಭಾಗ್ಯಸಂಪನ್ನರೂ ಆದ ಪಾಂಡುಪುತ್ರರು ಹೀಗೆ ಪರರ ಸೇವಾಕಾರ್ಯಗಳನ್ನು ಮಾಡುತ್ತ ಕಾಲಯಾಪನೆ ಮಾಡಬೇಕಾದುದು ವಿಧಿಯ ವಿಚಿತ್ರ ಗತಿಯಲ್ಲವೆ?

ವಿರಾಟನಗರದಲ್ಲಿ ಪಾಂಡವರು ಹತ್ತು ತಿಂಗಳ ಕಾಲ ಯಾವ ಈತಿ ಬಾಧೆಯೂ ಇಲ್ಲದ ಕಳೆದರು. ಆ ವೇಳೆಯಲ್ಲಿ ದ್ರೌಪದೀದೇವಿಯು ರೂಪನಾ

ಸಿಗೆ ಮೋಹಿತನಾದ ಕೀಚಕನು ಭೀಮಸೇನನಿಂದ ಪರಿವಾರ ಸಮೇತ ಹತನಾದನು. ಈ ಸಮಾಚಾರವು ದಿಗ್ದೇಶಗಳಲ್ಲೂ ಹರಡಿತು. ಹಸ್ತಿನಾವತಿಯಲ್ಲಿ ದುರುಳ ದುರ್ಯೋಧನನು, ಅಜ್ಞಾತವಾಸದ ಸಂದರ್ಭದಲ್ಲಿ ಪಾಂಡವರು ಎಲ್ಲಿದ್ದಾರೆಂಬುದನ್ನು ಗೊತ್ತು ಹಚ್ಚಿದರೆ, ಪೂರ್ವದ ನಿಬಂಧನೆಯ ಮೇರೆಗೆ, ಅವರನ್ನು ಪುನಃ ಹನ್ನೆರಡು ವರ್ಷಕಾಲ ವನವಾಸಕ್ಕೆ ಕಳುಹಿಸಬಹುದೆಂದು ಯೋಚಿಸಿ, ಜೀಮೂತನೇ ಮುಂತಾದ ಮಲ್ಲಜಟ್ಟಿಗಳನ್ನು ಕಳುಹಿಸಿ, ಆ ಮೂಲಕ ಪಾಂಡವರ ಸುಳಿವನ್ನು ತಿಳಿಯಬಹುದೆಂದು ಪ್ರಯತ್ನಿಸಿದನು. ವಲಲ ವೇಷದಿಂದಿದ್ದ ಭೀಮಸೇನನು, ವಿರಾಟರಾಜನಿಂದ ಪ್ರೇರಿತನಾಗಿ ಹಸ್ತಿನಾವತಿಯ ಆ ಜಟ್ಟಿಗಳೆಲ್ಲರನ್ನೂ ಸದೆದೋಡಿಸಲು, ದುರ್ಯೋಧನನು, ಅಷ್ಟುಮಂದಿಯನ್ನೂ ಏಕಾಂಗಿಯಾಗಿ ಪರಾಜಯಗೊಳಿಸಿದ ಅವನು, ತಪ್ಪದೆ ಭೀಮನೇ ಆಗಿರಬೇಕೆಂದು ನಿಶ್ಚಯಿಸಿ, ಹಾಗೆ ಅಲ್ಲಿ ವೇಷಾಂತರದಿಂದಿರುವ ಪಾಂಡವರನ್ನು ಬಹಿರಂಗಕ್ಕೆ ಬರುವಂತೆ ಮಾಡಬೇಕೆಂದು, ತ್ರಿಗರ್ತ ದೇಶಾಧೀಶನನ್ನು ದಕ್ಷಿಣದಿಕ್ಕಿನಿಂದ ದಂಡೆತ್ತಿಬಂದು ವಿರಾಟರಾಜನ ಗೋಧನವನ್ನು ಮುತ್ತುವಂತೆ ಆಜ್ಞಾಪಿಸಿ ಕಳುಹಿಸಿ, ತಾನು ಉತ್ತರದಿಕ್ಕಿನಿಂದ ದಂಡೆತ್ತಿ ಬರಲು ಯೋಚಿಸಿದನು. ಅಕಸ್ಮಾತ್ತಾಗಿ ತನ್ನ ರಾಜ್ಯದಮೇಲೆ ದಂಡೆತ್ತಿ ಬಂದ ತ್ರಿಗರ್ತಾಧೀಶನ ಸೈನ್ಯವನ್ನು ಎದುರಿಸಲಿಕ್ಕಾಗಿ ವಿರಾಟರಾಜನು ಸೈನ್ಯದೊಂದಿಗೆ ಹೊರಟಿರಲು, ಕಂಕಭಟ್ಟನೂ ವಲಲ ದಾಮಗ್ರಂಥಿ ತಂತಿಪಾಲರೂ ಆತನಿಗೆ ಸಹಾಯರಾಗಿ ಹೊರಟಿದ್ದರು. ಇತ್ತ ರಾಜಧಾನಿಯಲ್ಲಿ ಯಾರೂ ಇಲ್ಲದಿದ್ದ ಆ ಸಂದರ್ಭದಲ್ಲೇ ಅತ್ತ ಉತ್ತರ ದಿಕ್ಕಿನಿಂದ ಭೀಷ್ಮ ದ್ರೋಣ ಕರ್ಣಾಶ್ವತ್ಥಾಮಾದಿ ವೀರ ವೃಂದದಿಂದ ಕೂಡಿ ದುರ್ಯೋಧನನು ಅಗಣಿತ ಸೇನೆಯನ್ನು ತಂದು, ಆ ಪ್ರಾಂತದಲ್ಲಿದ್ದ ವಿರಾಟನ ಗೋಧನವನ್ನು ಪಹರಿಸಿ ಕೊಂಡೊಯ್ದನೆಂಬ ವಾರ್ತೆಯು ರಾಜಧಾನಿಯನ್ನು ತಲಪಿತು. ಆಗ ರಾಜಧಾನಿಯಲ್ಲಿ ಯಾರೂ ಇಲ್ಲದೆ, ರಾಜಪುತ್ರನಾದ ಉತ್ತರನೊಬ್ಬನೇ ಇದ್ದುದರಿಂದ, ಅಂತಃಪುರದ ಸ್ತ್ರೀ ವೃಂದದ ಮಧ್ಯದಲ್ಲಿ ಕುಳಿತ ಅವನು ಯಾವ ತಡೆಬಡೆಯೂ ಇಲ್ಲದೆ ತನ್ನ ಪೌರುಷಪ್ರತಾಪಗಳನ್ನು ಹೇಳಿಕೊಳ್ಳುತ್ತ ತನಗೊಬ್ಬ ಯೋಗ್ಯ ಸಾರಥಿ ದೊರೆತರೆ, ತಾನು ಏಕಾಂಗಿಯಾಗಿ ಕೌರವಸೈನ್ಯದ ಮೇಲೆ ಯುದ್ಧಕ್ಕೆ ನಡೆದು, ಭೀಷ್ಮ ದ್ರೋಣ ಕರ್ಣಾದಿಗಳನ್ನು ನಿಮಿಷ

ಮಾತ್ರದಲ್ಲಿ ಜಯಿಸಿ, ತುರುಕರುಗಳನ್ನು ತಿರುಗಿಸುವೆನೆಂದು ಬೊಬ್ಬೆಯಿಡ ತೊಡಗಿದನು. ಆ ವೇಳೆಗೆ ತಮ್ಮ ಅಜ್ಞಾತವಾಸಾವಧಿಯೂ ತೀರಿದ್ದುದರಿಂದ ಧನಂಜಯನು ಇನ್ನು ತಾನು ಆ ಅನುಕೂಲ ಸಂದರ್ಭವನ್ನು ಸಾಧಿಸಿ ಶತ್ರುಗಳಮೇಲೆ ಕಾಣಿಸಿಕೊಳ್ಳುವುದು ಉಚಿತವೆಂದು ಭಾವಿಸಿ, ತನ್ನ ಶಿಷ್ಯಳಾದ ಉತ್ತರೆಯ ಮೂಲಕ ರಾಜಕುಮಾರನಿಗೆ ಸೂಚನೆ ಕೊಟ್ಟು, ತಾನು ಆತನ ಸಾರಥ್ಯಮಾಡಲು ಅನುಮತಿಯನ್ನು ಪಡೆದನು. ಹೀಗೆ ಉತ್ತರನು ರಥಿಕನಾಗಿಯೂ, ಬೃಹನ್ನಳಾವೇಷದಿಂದಿದ್ದ ಅರ್ಜುನನು ಸಾರಥಿಯಾಗಿಯೂ, ಹೊರಹೊರಡಲು, ಅರ್ಜುನನು, ತಾವು ಅಜ್ಞಾತವಾಸಾರಂಭದಲ್ಲಿ ತಮ್ಮ ಆಯುಧಗಳನ್ನು ಮರೆಸಿಟ್ಟಿದ್ದ ಶಮೀವೃಕ್ಷದ ಸಮೀಪಕ್ಕೆ ಬಂದು, ತನ್ನ ಗಾಂಡೀವ ಧನುಸ್ಸು, ದೇವದತ್ತ ಶಂಖ ಮುಂತಾದ ಸಾಮಗ್ರಿಗಳನ್ನು ತೆಗೆದುಕೊಂಡು, ಶತ್ರುಭೀಕರವಾಗಿ ಮಹಾರ್ಣವದಂತೆ ಕಾಣುತ್ತಿದ್ದ ಕೌರವ ಸೇನೆಯನ್ನು ಕಂಡು ಭೀತನಾದ ಉತ್ತರನಿಗೆ ಮೇಲೆಮೇಲೆ ಬೆದರಬೇಡವೆಂದು ಧೈರ್ಯಕೊಡುತ್ತ ಶತ್ರುಸೇನೆಯೊಂದಿಗೆ ಕಾದಲನುವಾದನು. ತಮ್ಮ ವೀರಪರಿವಾರಕ್ಕೆ ಏಕಾಂಗಿಯಾಗಿ ಎದುರಾದ ಆ ವೀರಶಿರೋಮಣಿಯನ್ನೂ, ಆತನ ವಿಕೃತವೇಷವನ್ನೂ ಕಂಡು, ಕೌರವಸೇನೆಯು ಕೌತುಕಪಡುತ್ತಿರಲು, ಅರ್ಜುನನು ತನ್ನ ಶರಸಂಧಾನ ಚಾತುರ್ಯದಿಂದಲೇ ತಾನು ಯಾರೆಂಬುದರ ಪರಿಚಯವನ್ನು ಮಾಡಿಕೊಟ್ಟು, ಯುದ್ಧಕ್ಕೆ ಪ್ರಾರಂಭಿಸಿದನು. ಬಹು ಕಾಲದಿಂದಲೂ, ಬತ್ತಳಿಕೆಯೊಳಗೆ ಅಡಗಿದ್ದ ಆತನ ಅಮೋಘ ಬಾಣಗಳು, ಕಟ್ಟುದಾತುರತೆಯಿಂದ ಓಡುತ್ತಿರುವುವೋ ಎಂಬಂತೆ ಶತ್ರುಸೈನ್ಯವನ್ನು ಪ್ರವೇಶಿಸಿ, ಕೌರವರ ಅಸಂಖ್ಯಬಲವನ್ನೂ ಮುಹೂರ್ತಮಾತ್ರದಲ್ಲಿ ನಿಶ್ಶೇಷಿತಗೊಳಿಸಿದುವು. ಭೀಷ್ಮ, ದ್ರೋಣ, ಕರ್ಣ, ಅಶ್ವತ್ಥಾಮ, ಕೃಪಾಚಾರ್ಯ, ದುಶ್ಶಾಸನ ಮುಂತಾದ ಅತಿರಥ ಮಹಾರಥರನೇಕರು - ಪರಮೇಶ್ವರನೊಂದಿಗೆ ಖಾಡಾಖಾಡಿಯಾಗಿ ಯುದ್ಧಮಾಡಿ, ಮಹಾಸ್ತ್ರವನ್ನು ಪಡೆದ ಆ ವೀರಶಿರೋಮಣಿಯ ಧನುಸ್ಸಿನಿಂದ ಹೊರಟು ಕಾಲಾಗ್ನಿ ಜ್ವಾಲೆಗಳಂತೆ ಬರುತ್ತಿದ್ದ ಶರಘಾತಗಳನ್ನು ತಡೆದುಕೊಳ್ಳಲಾರದೆ ಹಿಮ್ಮೆಟ್ಟಿದರು. ಕೊನೆಗೆ ಧನಂಜಯನು ವಿರಾಟರಾಜನ ಗೋಸಮೂಹವನ್ನು ತಿರುಗಿಸಿಕೊಂಡು, ರಾಜಕುಮಾರನೊಂದಿಗೆ ರಾಜಧಾನಿಗೆ ಅಭಿಮುಖವಾಗಿ ಪ್ರಯಾಣಮಾಡಿದನು. ಉತ್ತರಕುಮಾ

ರನು, ತಮ್ಮಲ್ಲಿಗೆ ಬಂದು ವರ್ಷಕಾಲದಿಂದಲೂ, ವಾಸಿಸಿದ್ದ ಕಂಕಭಟ್ಟ, ವಲಲ, ಬೃಹನ್ನಳಾ, ದಾಮಗ್ರಂಥಿ, ತಂತಿಪಾಲರು ಕ್ರಮವಾಗಿ ಯುಧಿಷ್ಠಿರ ಭೀಮ ಅರ್ಜುನ ನಕುಲ ಸಹದೇವರೆಂದೂ, ಸೈರಂಧ್ರಿಯು ಆ ಐವರ ಏಕಮಾತ್ರಪತ್ನಿಯಾದ ದ್ರೌಪದೀದೇವಿಯೆಂದೂ ತನ್ನ ತಂದೆಗೆ ಪರಿಚಯಮಾಡಿ ಕೊಟ್ಟನು. ಅಜ್ಞಾತವಾಸಾಂತ್ಯವಾದೊಡನೆಯೇ ವಿಜಯನಿಗೆ, ಉತ್ತರಗೋಗ್ರಹಣದ ವಿಜಯವು ಪ್ರಾಪ್ತವಾದುದರಿಂದ, ಅದು ತಮ್ಮ ಮುಂದಿನ ರಾಜ್ಯಲಾಭಕ್ಕೆ ಶುಭ ಸೂಚನೆಯೆಂದು ತಿಳಿದು ಪಾಂಡವರು ಮುಂದೊಂದು ಶುಭದಿನದಲ್ಲಿ ಸಿಂಹಾಸನಾರೋಹಣಮಾಡಿ, ಕೃತಜ್ಞನಾದ ವಿರಾಟರಾಜನಿಂದಲೂ, ಉತ್ತರಕುಮಾರನಿಂದಲೂ ಪೂಜಿತರಾದರು.



## ಅಧ್ಯಾಯ ೭. “ ಭಾರತ ಮಹಾ ಯುದ್ಧ ”

ದುರ್ಯೋಧನನ ಪ್ರಚಂಡಸೇನೆಗೆ ಅಭಿಮುಖವಾಗಿ, ಬಾಲಭಾವದಿಂದ ಏಕಾಂಗಿಯಾಗಿ ಹೋದ ತನ್ನ ಮಗನನ್ನು ಪ್ರಾಣದೊಂದಿಗೆ ರಕ್ಷಿಸಿ ಕರೆತಂದು ತನ್ನ ವಂಶವನ್ನೂ, ತನ್ನ ದೇಶದ ಮೇಲೆ ದಂಡೆತ್ತಿ ಬಂದ ಶತ್ರುಸೇನೆಯನ್ನು ಬಡಿದೋಡಿಸಿ ತನ್ನ ರಾಜ್ಯವನ್ನೂ ಸಂರಕ್ಷಿಸಿದ ಮಹಾನುಭಾವನು ಧನಂಜಯನು, ಎಂಬ ಸಂಗತಿಯು ತಿಳಿದೊಡನೆಯೇ, ವಿರಾಟರಾಜನು, ಮಹದಾನಂದದಿಂದ ತನ್ನ ವಂಶಕ್ಕೆ ಮಹೋಪಕಾರಿಯಾದ ಆ ಪಾಂಡವ ವೀರನನ್ನು ಹಲವು ಬಗೆಯಿಂದ ಅಭಿನಂದಿಸಿ, ತನ್ನ ಪುತ್ರಿಯಾದ ಉತ್ತರೆಯನ್ನು ಪತ್ನೀತ್ವ ಸ್ವೀಕಾರಮಾಡಿ, ತನ್ನ ಮನಸ್ಸಿಗೆ ಸಮಾಧಾನವನ್ನುಂಟುಮಾಡಬೇಕೆಂದು ಪ್ರಾರ್ಥಿಸಿದನು. ಆದರೆ, ಪರನಾರೀಸಹೋದರನೆಂಬ ಬಿರುದುಳ್ಳ ಆ ಅರ್ಜುನದೇವನು, — ‘ಇಲ್ಲ. ಆ ರಾಜಕನ್ನಿಕೆಯಲ್ಲಿ ನಾನು ಪುತ್ರೀಭಾವವನ್ನಿಟ್ಟು ವಿದ್ಯಾಭ್ಯಾಸ ಮಾಡಿಸಿರುವುದರಿಂದ, ಈಗ ಆಕೆಯನ್ನು ಪತ್ನಿಯಾಗಿ ವರಿಸತಕ್ಕುದು ಧರ್ಮ ವಿರುದ್ಧವಾಗುವುದು. ಇಷ್ಟವಿದ್ದರೆ, ನನ್ನ ಪುತ್ರನಾದ ಅಭಿಮನ್ಯುವಿಗೆ ಆಕೆಯನ್ನಿತ್ತು ವಿವಾಹ ಮಾಡಬಹುದು’ ಎಂದನು. ಆ ಸಂಗತಿಯು ಉಭಯರಿಗೂ ಒಪ್ಪಿಗೆಯಾಯಿತು. ಆ ಶುಭವಾರ್ತೆಯು ಒಡನೆ ದ್ವಾರಕೆಗೆ ತಿಳಿಸಲ್ಪಟ್ಟಿತು. ಸುಭದ್ರಾಭಿಮನ್ಯುಗಳೂ, ಶ್ರೀ ಕೃಷ್ಣಮೂರ್ತಿಯೂ, ಯದುಪರಿವಾರವೂ ಆ ಸಂಗತಿಯನ್ನು ಕೇಳಿ ಪರಮ ಸಂತೋಷ

ಗೊಂಡರು. ಶ್ರೀಕೃಷ್ಣನು ತನ್ನ ಸೋದರತ್ತೆಯ ಮಕ್ಕಳು ಹದಿಮೂರು ವರ್ಷಗಳ ಕಾಲ ವಿವಿಧ ಕಷ್ಟಗಳನ್ನನುಭವಿಸಿ, ಹಲವು ಗಂಡಾಂತರಗಳಿಂದ ಪಾರಾಗಿ, ಶುಭೋತ್ಕರ್ಷವನ್ನು ಹೊಂದಲಿದ್ದ ಆ ಸಂದರ್ಭದಲ್ಲಿ ಅವರನ್ನು ದರ್ಶಿಸಿ ಅಭಿನಂದಿಸಬೇಕೆಂಬ ಅಭಿಲಾಷೆಯಿಂದ, ಪರಿವಾರ ಸಮೇತ ಹೊರಟು ವಿರಾಟನಗರಿಯನ್ನು ಸೇರಿದನು. ಅಭಿಮನ್ಯುವಿಗೂ ಮತ್ತು ಉತ್ತರಾದೇವಿಗೂ ವಿವಾಹವು ಅತಿಶಯ ವಿಜೃಂಭಣೆಯಿಂದ ನೆರವೇರಿತು. ಸಕಲರೂ ಸಂತೋಷಸಾಗರದಲ್ಲಿ ಮುಳುಗಿದರು.

ವಿವಾಹ ಮಂಗಳ ಕಾರ್ಯಕ್ಕಾಗಿ ನೆರೆದಿದ್ದ ಪಾಂಡವರಿಗೆ ಆಪ್ತರಾದ ಸಕಲರೂ, ಮುಂದೆ ಅವರ ರಾಜ್ಯಸಾಧನೆಯ ವಿಷಯದಲ್ಲಿ ಮಾಡಬೇಕಾದ ಕಾರ್ಯವೇನೆಂದು ಯೋಚಿಸಿ, ಬಹುಜನ ಸಮ್ಮತಿಯಿಂದ ಕೌರವನಲ್ಲಿಗೆ ದ್ರುಪದರಾಜನ ಪುರೋಹಿತನನ್ನು ಕಳುಹಿಸಿ, ತಮ್ಮ ಪಾಲಿಗೆ ಬರಬೇಕಾದ ರಾಜ್ಯಭಾಗವನ್ನು ಕೊಡಿಸಬೇಕೆಂದು ಕೇಳಿಸಿದರು. ಅದಕ್ಕೆ ಪ್ರತ್ಯುತ್ತರವಾಗಿ, ದುರ್ಯೋಧನನು ಸಂಜಯನೆಂಬಾತನನ್ನು ಕಳುಹಿಸಿ, ಕ್ಷತ್ರಿಯರಾದ ಪಾಂಡವರು ಸಾಮರ್ಥ್ಯವಿದ್ದರೆ, ಯುದ್ಧದಲ್ಲೇ ರಾಜ್ಯವನ್ನು ಜಯಿಸಿಕೊಳ್ಳಬೇಕಲ್ಲದೆ, ಭಿಕ್ಷೆ ಬೇಡಿದರೆ ಅದು ದೊರೆಯಲಾರದೆಂದು ತಿಳುಹಿಸಿದನು. ರಾಜ್ಯಕ್ಕಾಗಿ ಯುದ್ಧ ಮಾಡತಕ್ಕುದೇ ನಿಶ್ಚಯವೆಂದು ನಿರ್ಧರವಾಯಿತು. ಅರ್ಜುನನು, ದ್ವಾರಕಾನಗರಿಗೆ ನಡೆದು ಶ್ರೀಕೃಷ್ಣಸ್ವಾಮಿಯನ್ನು ತಮಗೆ ಸಹಾಯಕನಾಗಿ ಬರಬೇಕೆಂದೂ, ತನ್ನ ರಥಕ್ಕೆ ಸಾರಥಿಯಾಗಿರಬೇಕೆಂದೂ ಪ್ರಾರ್ಥಿಸಿಕೊಂಡು ಕರೆತಂದನು. ಶ್ರೀಕೃಷ್ಣನು, ಆ ಭಯಂಕರವಾದ ಯುದ್ಧದಿಂದ ಸಂಭವಿಸಲಿದ್ದ ಮಹಾಜನಪ್ರಳಯವನ್ನು ತಪ್ಪಿಸುವುದಕ್ಕಾಗಿ. ಇನ್ನೂ ಒಂದು ಬಾರಿ ಪ್ರಯತ್ನಿಸೋಣವೆಂದು, ರಾಯಭಾರವನ್ನು ಕೈಕೊಂಡು, ಕೌರವ ಸಭೆಗೆ ಹೋಗಿ, ಪಿತ್ರಾರ್ಜಿತ ಆಸ್ತಿಗೆ ಹಕ್ಕುದಾರರಾದ ಆ ಪಾಂಡವರಿಗೆ ಒಬ್ಬನಿಗೆ ಒಂದೊಂದು ಗ್ರಾಮದಂತೆ ಐದು ಗ್ರಾಮಗಳನ್ನಾಗಲೀ, ಕೊನೆಗೆ ಐವರಿಂದ ಒಂದು ಗ್ರಾಮವನ್ನಾಗಲೀ ಕೊಡೆಂದು ದುರ್ಯೋಧನನಿಗೆ ಬೋಧಿಸಿದನು. ಆದರೆ ಮಹಾ ಛಲವಾದಿಯಾದ ಆ ಕೌರವನು ಸೂಜಿಯ ಮೊನೆಯನ್ನೂರುವಷ್ಟು ಸ್ಥಳವನ್ನಾದರೂ ಪಾಂಡವರು ಬಲಪ್ರದರ್ಶನದಿಂದಲೇ ಪಡೆಯಬೇಕಲ್ಲದೆ, ಭಿಕ್ಷೆಯಿಂದ ದೊರೆಯಲಾರದು ಎಂದು ತಿಳಿಸಿಬಿ

ಟ್ಟುದಲ್ಲದೆ, ಆ ದೇವರದೇವನನ್ನೇ ಸೆರೆಗೊಳಿಸಬೇಕೆಂದು ಪ್ರಯತ್ನಿಸಿದನು. ಆಗ ಶ್ರೀ ಕೃಷ್ಣಸ್ವಾಮಿಯು ತನ್ನ ಅದ್ಭುತಮಹಿಮೆಯನ್ನು ಪ್ರಕಟಿಸಿ, ಎಲ್ಲರನ್ನೂ ಭ್ರಾಂತಿಗೊಳಿಸಿ, ಸಂಧಿಯು ಸಾಧ್ಯವಿಲ್ಲ-ಯುದ್ಧವೇ ನಿಶ್ಚಯವು ಎನ್ನಿಸಿಕೊಂಡು ಪಾಂಡವರ ಠಾಣ್ಯವಾಗಿದ್ದ ಉಪಪ್ಲಾವ್ಯಕ್ಕೆ ಹಿಂದಿರುಗಿದನು.

ಲೋಕಭೀಕರವಾದ ಆ ಮಹಾ ಯುದ್ಧಕ್ಕಾಗಿ ಪಾಂಡವರ ಪಕ್ಷದಲ್ಲಿ ಏಳು ಅಕ್ಷೋಹಿಣೀ ಸೇನೆಯೂ, ಕೌರವರ ಕಡೆ ಹನ್ನೊಂದು ಅಕ್ಷೋಹಿಣೀ ಸೇನೆಯೂ. ಕುರುಕ್ಷೇತ್ರ ಮೈದಾನದಲ್ಲಿ ನೆರೆಯಿತು ಪಾಂಡವ ಸೇನೆಗೆ ಧೃಷ್ಟದ್ಯುಮ್ನನೂ. ಕೌರವ ಸೇನೆಗೆ ಭೀಷ್ಮಾಚಾರ್ಯನೂ ನಾಯಕತ್ವವನ್ನು ವಹಿಸಿ, ಪಟ್ಟಾಭಿಷಿಕ್ತರಾದರು. ಯುದ್ಧ ಪ್ರಾರಂಭಕಾಲದಲ್ಲಿ ಅರ್ಜುನನು ಪರಸ್ಪರ ಅಭಿಮುಖವಾಗಿದ್ದ ಆ ಸೇನೆಗಳ ನಡುವೆ ಶ್ರೀಕೃಷ್ಣಸಾರಥ್ಯದಿಂದ ನಡೆಸಲ್ಪಡುತ್ತಿದ್ದ ತನ್ನ ರಥದಲ್ಲಿ ಕುಳಿತು, ತಾನು ಯಾರೊಂದಿಗೆ ಯುದ್ಧ ಮಾಡಬೇಕಾಗಿದೆ ಯೆಂಬುದನ್ನು ಒಂದುಸಾರಿ ನೋಡಿದನು. ಕೌರವ ಸೈನ್ಯದಲ್ಲೂ, ತಮ್ಮ ಸ್ವಂತ ಸೈನ್ಯದಲ್ಲೂ ಎಲ್ಲಿ ನೋಡಿದರೂ ಸೋದರರು ಚಿಕ್ಕಪ್ಪಂದಿರು, ಸೋದರಮಾವಂದಿರು, ತಾತಂದಿರು, ಸ್ನೇಹಿತರು, ಗುರುಗಳು, ಗುರುಪುತ್ರರು ಮುಂತಾದ ಆಪ್ತರೇ- ಬಾಂಧವರೇ ನೆರೆದಿದ್ದುದು ಕಾಣಿಸಿತು. ತಾವು ರಾಜ್ಯಾಭಿಲಾಷೆಯಿಂದ, ಆ ಸ್ವಜನರನ್ನೂ ಸ್ನೇಹಿತರನ್ನೂ ಬಾಂಧವರನ್ನೂ ಯುದ್ಧದಲ್ಲಿ ಜಯಿಸಿ- ಸಂಹರಿಸಿ, ಅವರ ರಕ್ತದಿಂದ ಕಲಿತ ಸುಖಭೋಗಗಳನ್ನು ಅನುಭವಿಸಬೇಕಲ್ಲವೆ! ಎಂಬ ವಿಷಾದ ಭಾವವು ಅರ್ಜುನನ ಮನಸ್ಸಿಗೆ ಬಂದಿತು. ಒಡನೆ ಆತನ ಧೈರ್ಯವು ಕುಂದಿತು. ಯೋಚಿಸಿ ಯೋಚಿಸಿದಂತೆ, ತಾವು ಮಾಡಲು ಎಣಿಸಿದ ದುರಂತ ಪಾಪಕಾರ್ಯದ ಭಯಂಕರ ಸ್ವರೂಪವು ಮೂರ್ತಿಮತ್ತಾಗಿ ಕಣ್ಣೆದುರಿಗೆ ನಿಂತಂತಾಗಿ, ಆತನನ್ನು ನಡುಗಿಸಿಬಿಟ್ಟಿತು. ಗಾಂಡೀವವು ಕೈಯಿಂದ ಜಾರಿಬಿದ್ದಿತು. ಮೈ ಕಂಪನವಿಟ್ಟಿತು. ಬಾಯಲ್ಲಿನ ದ್ರವವಾರಿಹೋಯಿತು. ತ್ರಿಲೋಕವೀರನಾದ ಅರ್ಜುನನು, ಕೇವಲ ಬಾಲಕನಂತೆ ಭಯಕಂಪಿತನಾಗಿ, - 'ಕೃಷ್ಣಾ ನಾನು, ಸ್ವಜನವಧಾಸ್ವರೂಪವಾದ ಈ ಕಾರ್ಯವನ್ನು ಮಾಡಲಾರೆನು' ಎಂದು ನಿರ್ವಿಣ್ಣನಂತೆ ಸುಮ್ಮನೆ ಕುಳಿತುಬಿಟ್ಟನು. ಉಭಯ ಸೇನೆಗಳೂ ಪರಸ್ಪರ ಅಭಿಮುಖವಾಗಿ, ಯುದ್ಧ ಪ್ರಾರಂಭವಾಗಲಿದ್ದ ಆ ವೇಳೆಯಲ್ಲಿ, ಅರ್ಜುನ

ನಿಗೆ ಪ್ರಾಪ್ತವಾದ ಈ ವಿಷಾದಭಾವವನ್ನು ಕುರಿತು, ಶ್ರೀಕೃಷ್ಣನು ಮಹದಾ
ತಂಕಯುಕ್ತನಾಗಿ ಆತನನ್ನು ಕುರಿತು – 'ಅರ್ಜುನಾ, ಈ ವಿಷಮಸಂದರ್ಭ
ದಲ್ಲಿ ನಿನಗೆ ಇಂತಹ ಮನೋದೌರ್ಬಲ್ಯವು ಏಕೆ ಪ್ರಾಪ್ತವಾಯಿತು? ಇದರಲ್ಲಿ
ಕೊಲ್ಲುವರಾರು? ಸಾಯುವರಾರು? ತತ್ವವನ್ನು ಯೋಚಿಸುವುದಾದರೆ, ಆತ್ಮ
ವು ಅವಿನಾಶಿಯು. ಅದು ಬೆಂಕಿಯಿಂದ ಸುಡಲ್ಪಡದು, ಶಸ್ತ್ರದಿಂದ ಭೇದಿಸಲ್ಪ
ಡದು, ನೀರಿನಿಂದ ನೆನೆಯದು, ಗಾಳಿಯು ಅದನ್ನು ಶೋಷಿಸಲಾರದು. ಅದ
ನ್ನು ಕೊಲ್ಲುವುದೆಂದರೆ ಹೇಗೆ ಸಾಧ್ಯ? ಇನ್ನು ಪಾಂಚ ಭೌತಿಕವಾದ ದೇಹ
ವೆಂದರೋ, ಅದು ಹೇಗೂ ನಾಶವಾಗತಕ್ಕದು. ಅದಕ್ಕಾಗಿ ನೀನು ಯೋ
ಚಿಸಿ ಫಲವಿಲ್ಲ. ಈಗ ಕ್ಷತ್ರಿಯನಾದ ನಿನ್ನ ಕುಲಧರ್ಮವನ್ನನುಸರಿಸಿ ಫಲಾ
ಪೇಕ್ಷಾರಹಿತನಾಗಿ, ನಿರ್ಮಮನಾಗಿ ಯುದ್ಧಮಾಡತಕ್ಕದೇ ಕರ್ತವ್ಯವು! ಕ್ಷ
ತ್ರಿಯನಿಗೆ ಇಂತಹ ಧರ್ಮಯುದ್ಧವು ಲಭಿಸತಕ್ಕದು ಅವನ ಸುಕೃತ ವಿಶೇ
ಷದಿಂದಲ್ಲವೆ! ಇಂತಹ ಸುಸಂದರ್ಭವು ಲಭಿಸಿರುವಾಗ್ಗೆ ಇದಕ್ಕೆ ಬೆಂಗೊ
ಟ್ಟೋಡದೆ, ಧೈರ್ಯದಿಂದ ಎದೆಗೊಟ್ಟು ಯುದ್ಧಮಾಡಿ ಜಯಿಸಿ, ಧರ್ಮದಿಂ
ದ ರಾಜ್ಯವಾಳತಕ್ಕದು ನಿನ್ನ ಕುಲಧರ್ಮವು. ಫಲಾಪೇಕ್ಷಾರಹಿತನಾಗಿ ನಿ
ರ್ಮಮನಾಗಿ ಈ ಕುಲಧರ್ಮವನ್ನು ಅನುಸರಿಸಿ ಯುದ್ಧಮಾಡತಕ್ಕದೇ ನಿನ್ನ
ಕರ್ತವ್ಯವು' ಎಂದು ಅನೇಕ ವಿಧ ಧರ್ಮಗಳನ್ನು ಬೋಧಿಸಿದನು. ಮಾತ್ರವಲ್ಲ
-ಶ್ರೀ ಕೃಷ್ಣಸ್ವಾಮಿಯು, ದೇವತೆಗಳ ದರ್ಶನಕ್ಕೂ ದುರ್ಲಭವಾದ ತನ್ನ ವಿಶ್ವ
ರೂಪವನ್ನೂ ಭಕ್ತೋತ್ತಮನಾದ ಆತನಿಗೆ ತೋರಿಸಿದನು. ಅರ್ಜುನನು ವಿಶ್ವ
ರೂಪಿಯಾದ ಆ ಪರಮಾತ್ಮನಿಂದ, ಆದ್ಯಂತಗಳು ತೋರದಂತೆ ವ್ಯಾಪ್ತವಾದ
ಪ್ರಪಂಚವನ್ನೂ, ಅದರಲ್ಲಿ ಅಣುಮಾತ್ರವಾಗಿ ನಿಂತಿದ್ದ ತನ್ನನ್ನೂ ಕಂಡು, ಆ
ಮಹದ್ಯುದ್ಧದಲ್ಲಿ ತಾನು ಕೇವಲ ನಿಮಿತ್ತಮಾತ್ರನು ಎಂಬುದು ಮನಸ್ಸಿಗೆ
ನಿಶ್ಚಯವಾಗಲು,-'ಕೃಷ್ಣಾ, ಸಂಶಯವು ಛೇದವಾಯಿತು. ಇನ್ನು ನಿನ್ನ
ಆಜ್ಞಾನುಸಾರ ಯುದ್ಧಮಾಡಲು ಸಿದ್ಧನಾಗಿದ್ದೇನೆ' ಎಂದು ನುಡಿದು ಪುನಃ
ಗಾಂಡೀವ ಧನುಸ್ಸನ್ನು ಧಾರಣಮಾಡಿದನು.

ಯುದ್ಧಾರಂಭವಾಯಿತು. ಭೀಷ್ಮನು ಕೌರವ ಸೈನ್ಯವನ್ನು ರಕ್ಷಿಸಿ
ಕೊಂಡು, ಹತ್ತು ದಿನಗಳ ಪರ್ಯಂತ, ದಿನವೊಂದಕ್ಕೆ ಹತ್ತು ಸಹಸ್ರಯೋ
ಧರಂತೆ ಶಪಥಪೂರ್ವಕ ಸಂಹರಿಸತೊಡಗಿದನು. ಧನುರ್ಧರಾಗ್ರೇಸರನಾದ

ಧನಂಜಯನಾದರೂ, ಆ ವೀರಶಿರೋಮಣಿಯನ್ನು ಎದುರಿಸಿ, ಕೌರವ ಸೈನ್ಯದಲ್ಲಿ ಸಹಸ್ರಸಹಸ್ರ ಸಂಖ್ಯೆಯಿಂದ ಅರಿವೀರರನ್ನು ಕೊಲ್ಲುತ್ತಲೂ, ಭೀಷಣಪ್ರತಾಪಿಯಾದ ಭೀಷ್ಮನ ವ್ಯೂಹದಲ್ಲೂ ಕಣ್ಣೀರನ್ನು ತರಿಸಿ, ದಣಿಸುತ್ತಲೂ ಆತನೊಂದಿಗೆ ಸರಿಸಮನಾಗಿ ಯುದ್ಧ ಮಾಡುತ್ತ ಬಂದನು. ಕೊನೆಗೆ ಆಜನ್ಮ ಬ್ರಹ್ಮಚಾರಿಯೂ ಅಖಂಡ ಪ್ರತಾಪಿಯೂ ಆದ ಆ ವೃದ್ಧ ವೀರನ ಪ್ರತಾಪವು ಹೆಚ್ಚಿ ಬರಲು, ಕೊನೆಯ ದಿನ ಅರ್ಜುನನು, ಆತನ ಅಪೇಕ್ಷಾನುಸಾರವಾಗಿಯೇ, ಶಿಖಂಡಿಯನ್ನು ಮುಂದಿಟ್ಟುಕೊಂಡು ಬಾಣಪ್ರಯೋಗ ಮಾಡಿ, ಆತನನ್ನು ವಿರಥನನ್ನಾಗಿಸಿದನು. ಶರತಲ್ಪಗತನಾದ ಆತನಿಗೆ, ಮಿಕ್ಕ ಯಾವ ಧನುರ್ಧಾರಿಯಿಂದಲೂ ಸಾಧ್ಯವಿಲ್ಲವೆನಿಸುವಂತಹ, ಶರಗಳ ತಲೆಗಿಂಬನ್ನೇ ಒದಗಿಸಿ, ಅರ್ಜುನನು, ಆತನು ಬಾಯಾರಿಕೆಯೆನ್ನಲು, ತನ್ನ ಬಾಣಪ್ರಯೋಗಚಮತ್ಕಾರದಿಂದ ಆತನ ಬಲಭಾಗದ ಭೂಮಿಯಿಂದಲೇ ಚಿಲುಮೆಯಿಂದ ನೀರು ಹೊರಟು ಬಾಯಲ್ಲಿ ಬಂದು ಬೀಳುವಂತೆ ಮಾಡಿದನು. ಆ ಶೀತಳ ಜಲಪಾನದಿಂದ ಸಂತುಷ್ಟನಾದ ಆ ಗಂಗಾಪುತ್ರನು, ಆಗಲೂ ದುರ್ಯೋಧನನನ್ನು ಕುರಿತು, ಬಲಿಷ್ಟರಾದ ಪಾಂಡವರೊಂದಿಗೆ ಸಂಧಿ ಮಾಡಿಕೊಂಡು, ಬಂಧುಬಾಂಧವರೊಂದಿಗೆ ಬದುಕೆಂದು ಎಷ್ಟೋ ಬಗೆಯಿಂದ ಹೇಳಿದನು. ಆದರೂ ಸಾರ್ಥಕವಾಗಲಿಲ್ಲ. ಆ ಮೂರ್ಖಾಗ್ರಣಿಯು ಯುದ್ಧದಿಂದ ವಿಮುಖನಾಗಲು ಒಪ್ಪಲಿಲ್ಲ. ಭೀಷ್ಮಾಚಾರ್ಯನು ಶರತಲ್ಪಗತನಾಗಿಯೇ, ತನ್ನ ಪ್ರಾಣೋತ್ಕ್ರಮಣಕ್ಕಾಗಿ ಉತ್ತರಾಯಣವನ್ನು ನಿರೀಕ್ಷಿಸುತ್ತಾ, ಶ್ರೀ ಕೃಷ್ಣಧ್ಯಾನತತ್ಪರನಾಗಿ ಕಾಲ ಕಳೆಯತೊಡಗಿದನು.

ಯುದ್ಧವು ಮುಂದರಿಸಿತು. ಭೀಷ್ಮರ ತರುವಾಯ ದ್ರೋಣಾಚಾರ್ಯನು, ಸೈನ್ಯಾಧಿಪತ್ಯವನ್ನು ವಹಿಸಿ ಐದು ದಿನಗಳು ಯುದ್ಧ ಮಾಡಿದನು. ಶಸ್ತ್ರಾಚಾರ್ಯನಾದ ಆತನ ಯುದ್ಧವನ್ನು ಕೇಳುವುದೇನು! ಆಚಾರ್ಯನು ಕೌರವಸೈನ್ಯದಲ್ಲಿ ಅನೇಕ ವಿಧ ವ್ಯೂಹಗಳನ್ನು ರಚಿಸಿ, ಬಗೆಬಗೆಯ ಶತ್ರು ಹರಣೋಪಾಯಗಳನ್ನು ಕಲ್ಪಿಸಿ, ಪಾಂಡವ ಸೈನ್ಯವನ್ನು ಹಣ್ಣಿಗೆ ತಂದನು. ಆಗಲೂ ಅರ್ಜುನನು ಅಜೇಯನೆನ್ನಿಸಿ ಕೌರವ ಸೇನೆಯ ಹಲವು ಸಹಸ್ರ ಮಂದಿ ವೀರರನ್ನೂ ಹಸ್ತಿ ಅಶ್ವ ರಥ ಪದಾತಿಗಳನ್ನೂ, ಲಯಗೊಳಿಸಿ ಸಾಕುಸಾಕೆನ್ನಿಸಿದನು.

ಈ ದ್ರೋಣಾಚಾರ್ಯನು ನಿರ್ಮಿಸಿದ ಪದ್ಮವ್ಯೂಹದಲ್ಲೀ ನಮ್ಮ ಕಥಾನಾಯಕನ ಪುತ್ರನಾದ ಅಭಿಮನ್ಯುವು ಕಾಪಿ ಶಸ್ತ್ರಗಳಿಂದ ಸಂಹೃತನಾಗಲು, ಕ್ರೋಧಾರುಣಲೋಚನನಾದ ಧನಂಜಯನು, ಶಪಥಪೂರ್ವಕವಾಗಿ ಮಾರನೆಯ ದಿನ ಸೂರ್ಯಾಸ್ತಮಯಕಾಲದೊಳಗಾಗಿ, ತನ್ನ ಮಗನ ಮರಣಕ್ಕೆ ಕಾರಣನಾದ ಜಯದ್ರಥನನ್ನು ಸಂಹರಿಸಿ ಕೆಡಹಿದನು.

ದ್ರೋಣಾಚಾರ್ಯನು ಧೃಷ್ಟದ್ಯುಮ್ನನ ಶರಘಾತಕ್ಕೆ ಸಿಕ್ಕಿ ಹತನಾಗಲು, ಆತರುವಾಯ ಕರ್ಣನು ಸೇನಾಧಿಪತಿಯಾದನು. ಪಾಂಡವರಲ್ಲಿ ಪ್ರಬಲ ಪರಾಕ್ರಮಿಯೂ ಧನುರ್ಧರಾಗ್ರೇಸರನೂ ಆದ ಅರ್ಜುನನೊಂದಿಗೆ ಕಾದಬೇಕೆಂಬುದೇ ಕರ್ಣನ ಜೀವಿತಧ್ಯೇಯವಾಗಿದ್ದಿತು. ಆತನು ತನ್ನ ತಾಯಿಯಾದ ಕುಂತೀದೇವಿಯು ಪಾಂಡವರ ಜೀವಿತದಾನವನ್ನು ಬೇಡಿದಾಗ, ಅರ್ಜುನನ್ನು ಬಿಟ್ಟು ಮಿಕ್ಕವರನ್ನು ಕೊಲ್ಲೆನೆಂದು, ವಾಗ್ದಾನ ಮಾಡಿದ್ದನು. 'ಅರ್ಜುನನು ನನ್ನನ್ನು ಕೊಲ್ಲಬೇಕು. ಅಥವ ನಾನು ಅರ್ಜುನನನ್ನು ಕೊಲ್ಲಬೇಕು' ಎಂಬುದೇ ಅವನ ನಿಶ್ಚಯವಾಗಿದ್ದಿತು. ಕರ್ಣಾರ್ಜುನರಿಗೆ ರಣವು ಬಹು ಭೀಕರವಾಗಿ ನಡೆಯಿತು. ಶರಸಮೂಹವು ಭೂವ್ಯಂತರಿಕ್ಷಗಳನ್ನು ತುಂಬಿತು. ಆ ಮಹಾವೀರರ ಕರಚಮತ್ಕ್ರಿಯೆಯನ್ನೂ ವೀರ್ಯವನ್ನೂ ಕಂಡು ಉಭಯದಳದವರೂ ಪರಮಾಶ್ಚರ್ಯಮಗ್ನರಾದರು. ಕರ್ಣನು ತನ್ನಲ್ಲಿ ಬಹು ದಿನಗಳಿಂದಲೂ ಸಂಗ್ರಹಿಸಿಟ್ಟುಕೊಂಡಿದ್ದ ಸರ್ಪಾಸ್ತ್ರವನ್ನು ಅರ್ಜುನನ ಕಂಠಕ್ಕೆ ಗುರಿಯಿಟ್ಟು ಪ್ರಯೋಗಿಸಿರಲು, ಅದು ಶ್ರೀಕೃಷ್ಣಾನುಗ್ರಹದಿಂದ ನಿವಾರಣೆಯಾಯಿತು. ಬರುಬರುತ್ತಾ, ಧನಂಜಯನ ಶಕ್ತಿ ಸಾಮರ್ಥ್ಯಗಳು ಹೆಚ್ಚಾಗುತ್ತಾ ಬಂದುವು. ಕೊನೆಗೆ ಆ ವೀರನು, ಒಂದು ನಿಶಿತ ಶರಪ್ರಯೋಗದಿಂದ ಸೂರ್ಯಪುತ್ರನ ಬಲ ಶೌರ್ಯಗಳನ್ನು ಕುಂದಿಸಿ, ಆತನನ್ನು ಸಂಹರಿಸಿ, ಕೌರವ ಸೈನ್ಯಕ್ಕೆ ಅಂತಕನೆನ್ನಿಸಿದನು.

ದುರ್ಯೋಧನನು, ತನ್ನ ವಿಜಯಸೌಧಕ್ಕೆ ಆಧಾರ ಸ್ತಂಭರೆನ್ನಿಸಿದ್ದ ಭೀಷ್ಮ ದ್ರೋಣ ಕರ್ಣರು ಹತರಾದುದರಿಂದ ಮುಂದೆ ಹತಾಶನಾಗಿದ್ದರೂ, ಯುದ್ಧವನ್ನು ನಿಲ್ಲಿಸಲು ಸಾಧ್ಯವಿಲ್ಲದೆ, ಶಲ್ಯ ದುಶ್ಶಾಸನ ಕೃಪ ಅಶ್ವತ್ಥಾಮ ಮುಂತಾದವರನ್ನು ಬೆಂಬಲವಾಗಿಟ್ಟುಕೊಂಡು ಹೇಗೂ ಮುಂದರಿಸಿದನು. ಬರಬರುತ್ತ ಪಾಂಡವರ ಕೈ ಬಲವಾಯಿತು. ಭೀಮಾರ್ಜುನರ ಉಪಟಳಕ್ಕೆ

ತರಹರಿಸಲಾರದೆ, ಕೌರವ ಸೈನ್ಯದ ಬಲವು ಅತಿಶಯ ಶಿಥಿಲವಾಯಿತು. ಯುದ್ಧಪ್ರಾರಂಭವಾಗಿ ಹದಿನೇಳು ದಿನಗಳು ಕಳೆವ ವೇಳೆಗೆ ಕೌರವನ ತೊಂಬತ್ತೊಂಬತ್ತು ಮಂದಿ ತಮ್ಮಂದಿರೂ, ಹನ್ನೊಂದು ಅಕ್ಷೋಹಿಣೀ ಸೈನ್ಯದ ಸುಪ್ರಸಿದ್ಧಯೋಧರೂ ಹತರಾಗಿ, ದುರ್ಯೋಧನನೊಬ್ಬನೇ ಉಳಿದನು. ಅಸಂಖ್ಯ ಧನಬಲ, ಜನಬಲಗಳಿಂದ ಕೂಡಿ, ಶತ್ರುಸೇನೆಯೆಂದರೆ ಲಕ್ಷ್ಯವೇ ಇಲ್ಲದೆ, ಮಹದಹಂಕಾರದಿಂದ ಮೆರೆಯುತ್ತಿದ್ದ ಆ ಅಭಿಮಾನಿಯ ಆಗಿನ ಸ್ಥಿತಿಯನ್ನು ವರ್ಣಿಸಲಳವೇ ? ದುರ್ಯೋಧನನು ಹಾಗೆ ಏಕಾಂಗಿಯಾಗಿ ನಿಂತನಾದರೂ, ಶರಣಾಗತನಾಗಿ ಶತ್ರುವಿನಲ್ಲಿ ಜೀವದಾನ ಬೇಡಲೊಪ್ಪದೆ, ಆಗಲೂ ಕ್ಷಾತ್ರತೇಜವು ಮೆರೆಯುವಂತೆ, ಭೀಮನೊಂದಿಗೆ ಗದಾಯುದ್ಧದಲ್ಲಿ ಹೋರಾಡಿ ತೊಡೆಯೊಡೆದು ಪ್ರಾಣಬಿಟ್ಟನು. ಭೀಮಾರ್ಜುನರು ಲೋಕವು ಮೆಚ್ಚುವಂತೆ ಯುದ್ಧಮಾಡಿ ತಮ್ಮ ಪ್ರತಿಜ್ಞೆಗಳನ್ನು ಈಡೇರಿಸಿಕೊಂಡರು. ಇಂತು ಶ್ರೀಕೃಷ್ಣನು, ಪಾಂಡವರನ್ನು-ಮುಖ್ಯವಾಗಿ ನಮ್ಮ ಕಥಾನಾಯಕ ಧನಂಜಯನನ್ನು ಉಪಕರಣವಾಗಿ ಕೈಗೊಂಡು, ಭಾರತಮಹಾಯುದ್ಧದ ಮೂಲಕ, ದುಷ್ಟ ಕ್ಷತ್ರಿಯವಂಶವನ್ನು ಹತಗೊಳಿಸಿ, ಭೂಭಾರವನ್ನಿಳಿಸಿದನು.

---

# ಉಪಸಂಹಾರ

ಭಾರತ ಮಹಾಯುದ್ಧವು, ಕೌರವ ವಂಶಕ್ಕೆ ಮಾತ್ರವಲ್ಲ-ಭಾರತ ದೇಶಕ್ಕೇ ಪ್ರಳಯಕಾರಿಯಾಗಿ ಪರಿಣಮಿಸಿತೆಂದರೆ, ಅದೊಂದು ಅತಿಶಯೋಕ್ತಿಯಲ್ಲ.-ಲೋಕಭೀಕರವಾದ ಆ ಯುದ್ಧದಲ್ಲಿ ಅಸಂಖ್ಯಮಂದಿ ಅದ್ವಿತೀಯ ಶಕ್ತಿ ಸಾಹಸ ಸಂಪನ್ನರಾದ ವೀರರೂ, ಶಸ್ತ್ರವಿದ್ಯಾನಿಪುಣರೂ, ವಿವಿಧ ಕುಶಲಕಲಾಭಿಜ್ಞರೂ ಪ್ರಾಣವನ್ನು ನೀಗಿದರು. ಯುದ್ಧದಿಂದುಟಾದ ಜಯದಿಂದ ಪಾಂಡವರಿಗಾದರೂ ವಿಶೇಷ ಸಂತೋಷ ಉಂಟಾದುದಿಲ್ಲ. ಯುದ್ಧಕಾರ್ಯದಲ್ಲಿ ತೊಡಗಿದ ಇತರ ಎಲ್ಲರಿಗಿಂತಲೂ, ಧರ್ಮಮೂರ್ತಿಯಾದ ಯುಧಿಷ್ಠಿರನಿಗೆ ಈ ಜಯವು ಸಂತೋಷಕ್ಕೆ ಪ್ರತಿಯಾಗಿ ಮಹದ್ವ್ಯಾಕುಲವನ್ನುಂಟು

ಮಾಡಿತು. ಜ್ಞಾತಿವಧೆಯಿಂದ ದೂಷಿತವಾದ ತನ್ನಾದೇಹವನ್ನು, ಪ್ರಾಯೋಪವೇಶದಿಂದ ನೀಗಿ ಸಮಾಧಾನ ಹೊಂದುತ್ತೇನೆಂದು ಆತನು ನಿಶ್ಚಯಿಸಿದನು. ಆಗ ಶ್ರೀಕೃಷ್ಣ ವೇದವ್ಯಾಸ ಮುಂತಾದ ಹಿತಚಿಂತಕರು, ಬಹುಬಗೆಯಿಂದ ಬೋಧಿಸಿದ್ದಲ್ಲದೆ, ಶರತಲ್ಪದಲ್ಲಿ ಶಯನಮಾಡಿದ್ದ ಭೀಷ್ಮ ಪಿತಾಮಹನಿಂದಲೂ ರಾಜಧರ್ಮಗಳನ್ನು ಉಪದೇಶಮಾಡಿಸಿ, ಆತನನ್ನು ಪಟ್ಟಾಭಿಷೇಕಕ್ಕೆ ಒಪ್ಪಿಸಿದರು.

ವೇದವ್ಯಾಸ ಧೌಮ್ಯ ಮುಂತಾದ ತಪಸ್ವಿಜನರೂ, ವಿದುರ ಧೃತರಾಷ್ಟ್ರ ಮುಂತಾದ ಕುಲವೃದ್ಧರೂ, ಬ್ರಾಹ್ಮಣೋತ್ತಮರೂ ಆಶೀರ್ವದಿಸುತ್ತಿರಲು ನೆರೆದ ಸಕಲ ಪ್ರಜೆಗಳೂ ಜಯಜಯವೆನ್ನುತ್ತಿರಲು, ಶ್ರೀಕೃಷ್ಣಭಗವಾನನು ಯುಧಿಷ್ಠಿರನನ್ನು ಪರಂಪರಾನುಗತವಾಗಿ ಬಂದ ಕುರುಭೂಪಾಲರ ಅರಮನೆಯಲ್ಲಿ ಸಿಂಹ ಪೀಠದಲ್ಲಿ ಕೂರಿಸಿ, ಸಕಲ ಪುಣ್ಯನದೀ ತೀರ್ಥಗಳನ್ನು ತರಿಸಿ ವಿಧ್ಯುಕ್ತರೀತಿಯಲ್ಲಿ ರಾಜ್ಯಾಭಿಷೇಕವಮಾಡಿದನು. ಧರ್ಮಜನು ನಾಲ್ವರು ತಮ್ಮಂದಿರೂ ಓಲಗಿಸುತ್ತಿರಲು, ಸಾಧ್ವೀಮಣಿ ದ್ರೌಪದಿಯೊಂದಿಗೆ ರತ್ನಸಿಂಹಾಸನದಲ್ಲಿ ಕುಳಿತು, ಭೂತಳಕ್ಕಿಳಿದು ಬಂದ ದೇವೇಂದ್ರನೋ ಎಂಬಂತೆ ಪ್ರಕಾಶಿಸಿದನು.

ಭೀಮಾರ್ಜುನರೂ ನಕುಲ ಸಹದೇವರೂ ಸಹಾಯಕರಾಗಿರಲು, ಧರ್ಮಜನು, ಲೋಕದಲ್ಲಿ ಸತ್ಯ ಧರ್ಮ ನ್ಯಾಯಗಳು ಲೇಶಮಾತ್ರವೂ ಕ್ರಮ ತಪ್ಪದಂತೆ ಮೂವತ್ತಾರು ವರ್ಷಕಾಲ ಭೂಮಿಯನ್ನು ಪಾಲಿಸಿದನು. ಜ್ಞಾತಿವಧಾಮೂಲಕ ತನಗೆ ಪ್ರಾಪ್ತವಾದ ಅಗಣಿತ ಪಾಪವನ್ನು ಹೇಗಾದರೂ ನೀಗಿಸಿಕೊಂಡು ಶುದ್ಧನಾಗಬೇಕೆಂಬ ಚಿಂತೆಯು ಆತನನ್ನು ಪುನಃ ಬಾಧಿಸತೊಡಗಿತು. ಆಗಲಾತನು ಶ್ರೀ ವೇದವ್ಯಾಸರ ಆಜ್ಞಾನುಸಾರ ಅಶ್ವಮೇಧ ಯಾಗಕ್ಕೆ ಪ್ರಯತ್ನಿಸಿದನು. ಅರ್ಜುನನು ಯಜ್ಞಾಶ್ವರಕ್ಷಕನಾಗಿ ಹೊರಟು, ಭಾರತದೇಶದ ವಿವಿಧ ಭಾಗಗಳಲ್ಲಿದ್ದ ಅನೇಕ ಸುಪ್ರಸಿದ್ಧ ಯೋಧರೊಂದಿಗೆ ಹೋರಾಡಿ, ಜಯಸಂಪಾದನೆಮಾಡಿ, ಅಸಂಖ್ಯ ಧನವನ್ನೊದಗಿಸಿ ಆ ಮಹಾಯಾಗವನ್ನು ಯಶಸ್ವಿಯನ್ನಾಗಿಸಿದನು. ಅಶ್ವಮೇಧ ಯಾಗವು ಇಂದ್ರಾದಿ ಸುರರಿಗೂ, ಭೂಸುರರಿಗೂ ತುಷ್ಟಿಯನ್ನುಂಟುಮಾಡಿ, ಶ್ರೀಕೃಷ್ಣಸಾನ್ನಿಧ್ಯದಲ್ಲಿ ಅತಿಶಯವೈಭವದಿಂದ ನಡೆಯಿತು.

ಶ್ರೀಕೃಷ್ಣಭಗವಾನನು ಸೂತ್ರಧಾರಕನಾಗಿರಲು, ನಮ್ಮ ಕಥಾನಾಯಕನು ಧರ್ಮಜನಿಗೆ ಸರ್ವದಾ ಬೆಂಬಲನಾಗಿದ್ದು, ಕ್ಷತ್ರಿಯರಾದ ತಮಗೆ ದೈವದತ್ತವಾಗಿ ಪ್ರಾಪ್ತವಾಗಿದ್ದ ಧರ್ಮದಂಡವನ್ನು ಸತ್ಯ-ಧರ್ಮ ನ್ಯಾಯಗಳ ಸ್ಥಾಪನೆಗಾಗಿ ಉಪಯೋಗಿಸಿ, ಧರೆಯಲ್ಲಿ ಶಾಶ್ವತವಾಗಿ ತನ್ನ ಯಶಶ್ಚಂದ್ರಿಕೆಯನ್ನು ಬೆಳಗಿಸಿದನು. ದೈವನಿಯಾಮಕದಂತೆ ಅತ್ತ ಶ್ರೀಕೃಷ್ಣಸ್ವಾಮಿಯೂ ಲೌಕಿಕಲೀಲೆಯನ್ನು ಸಾಕುಮಾಡಿ ವೈಕುಂಠಧಾಮಕ್ಕೆ ತೆರಳಲು, ಧರ್ಮಜನೂ ತನ್ನ ತಮ್ಮಂದಿರೊಂದಿಗೂ ಪತ್ನಿಯಾದ ದ್ರೌಪದೀದೇವಿಯೊಂದಿಗೂ ಪರಂಧಾಮಕ್ಕೆ ಹೊರಟನು. ಆಗ್ಗೆ ನಮ್ಮ ಕಥಾನಾಯಕನಿಗೆ ನೂರಾರು ಸಂವತ್ಸರಗಳ ವಯಸ್ಸಾಗಿತ್ತೆಂದು ಉಕ್ತವಾಗಿದೆ. ಹಿಮಾಲಯಪರ್ವತ ಪ್ರಾಂತದಲ್ಲಿ ನಡೆಯತೊಡಗಿದ ಅವರು, ಪ್ರಕೃತಿ ನಿಯಮವನ್ನನುಸರಿಸಿ ಭೌತಿಕದೇಹಗಳನ್ನು ನೀಗಿ ಸದ್ಗತಿಯನ್ನೈದಿದರು.

‘ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥

‘ಎಲ್ಲಿ ಯೋಗೇಶ್ವರನಾದ ಶ್ರೀಕೃಷ್ಣಸ್ವಾಮಿಯೂ, ಧನುರ್ಧರನಾದ ಪಾರ್ಥನೂ ಇರುತ್ತಾರೋ ಅಲ್ಲಿ ರಾಜ್ಯಲಕ್ಷ್ಮಿಯೂ, ವಿಜಯವೂ, ಉತ್ತರೋತ್ತರದ ಅಭಿವೃದ್ಧಿಯೂ, ನ್ಯಾಯನೀತಿಗಳೂ ಇವೆಲ್ಲವೂ ಸ್ಥಿರವಾಗಿರುತ್ತವೆ.’

ಈ ಗೀತಾವಾಕ್ಯವು ಸಾರ್ಥಕವೆನ್ನಿಸುವಂತೆ, ಈತನ ಕ್ಷತ್ರಧರ್ಮಪಾಲನೆಯು ಸಕಲ ಕ್ಷತ್ರಿಯರಿಗೂ, ಧರ್ಮಾಭಿಮಾನಿಗಳಾದ ಸಕಲರಿಗೂ ಮೇಲ್ಪಂಕ್ತಿಯಾಗಿದ್ದು ಎಲ್ಲರೂ ಧರ್ಮಪಕ್ಷಪಾತಿಗಳಾಗಿರುವಂತೆ ಪ್ರೇರಿಸಲಿ. ಆತನಿಗೆ ಬೆಂಬಲನೂ ಮಾರ್ಗದರ್ಶಕನೂ ಸೂತ್ರಧಾರಕನೂ ಆಗಿದ್ದ ಶ್ರೀಕೃಷ್ಣಮೂರ್ತಿಯು - ರಾಜ್ಯಪಾಲನೆಯಲ್ಲಿ ತೊಡಗಿರುವ ಸಕಲ ಕ್ಷತ್ರಿಯರಿಗೂ, ಧರ್ಮದಂಡವನ್ನು ಯೋಗ್ಯಮಾರ್ಗದಲ್ಲಿ ವಿನಿಯೋಗಿಸಿ ಲೋಕದಲ್ಲಿ ಸತ್ಯ ಧರ್ಮ ನ್ಯಾಯಗಳನ್ನು ಸ್ಥಾಪಿಸಿ ಪ್ರಜಾರಂಜಕರಾಗುವಂತಹ ಸದ್ಬುದ್ಧಿಯನ್ನು ದಯಪಾಲಿಸಲಿ.

ತಥಾಸ್ತು.



ಶ್ರೀರಾಮ ಸಹಾಯ

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

### ಮುನ್ನುಡಿ

" ಅಹಲ್ಯಾ ದ್ರೌಪದೀ ತಾರಾ ತಾರಾ ಮಂಡೋದರಿ ತಥಾ ।
ಪಂಚ ಕನ್ಯಾ ಸ್ಮರೇನ್ನಿತ್ಯಂ ಮಹಾಪಾತಕನಾಶನಂ ||

"ಮಾನವರು, ತಮ್ಮ ಮಹಾಪಾತಕಗಳು ನಾಶವಾಗುವುದಕ್ಕಾಗಿ, ಅಹಲ್ಯಾ, ದ್ರೌಪದೀ, ತಾರಾ, ತಾರಾ, ಮಂಡೋದರಿ ಎಂಬ ಈ ಐದುಮಂದಿ ಕನ್ಯಾ ಶಿರೋಮಣಿಯರನ್ನು ಪ್ರತಿದಿನದಲ್ಲೂ ಸ್ಮರಣೆಮಾಡುತ್ತಿರಬೇಕು ಎಂದು ಹಿರಿಯರು ಸಲಹೆಕೊಡುತ್ತಾರೆ. ಪುಣ್ಯಶೀಲರ ಸ್ಮರಣೆಯು, ಪುಣ್ಯದಾಯಕವೂ-ಅಂತೆಯೇ ಪಾಪನಾಶಕವೂ ಆದುದೆಂಬುದಕ್ಕೆ ಸಂದೇಹವೇನು? ಭಾರತದೇಶ ಚರಿತ್ರಾಕಾಶವಲ್ಲಿ-ಪುರಾಣಯುಗದಲ್ಲಿ ಈ ಐದು ಮಂದಿ ಮಾತ್ರವೇ ಅಲ್ಲ! ಸೀತಾ, ಸಾವಿತ್ರಿ, ಲೋಪಾಮುದ್ರೆ, ಅರುಂಧತಿ, ಅನಸೂಯೆ, ರುಕ್ಮಿಣಿ ಮುಂತಾದ ಹಲವುಮಂದಿ ಪತಿವ್ರತಾ ಶಿರೋಮಣಿಯರೂ ನಕ್ಷತ್ರ ಸ್ವರೂಪರಾಗಿ ಬೆಳಗುತ್ತಿದ್ದಾರೆ. ಆದರೆ ಅವರಲ್ಲೊಬ್ಬರನ್ನೂ ಹೆಸರಿಸದೆ, ಮೇಲೆ ಹೇಳಿರುವ ಅಹಲ್ಯಾದಿ ಈ ಐವರನ್ನೇ ಹೇಳಿರುವುದಕ್ಕೆ ಏನಾದರೂ ವಿಶೇಷ ಕಾರಣವಿರಬೇಕು!

ಅಹಲ್ಯೆಯು ಗೌತಮ ಋಷಿಯ ಭಾರ್ಯೆ. ಈಕೆಯನ್ನು ಇಂದ್ರನು ಮೋಹಿಸಿ, ವಂಚನೆಯಿಂದ ಸತೀತ್ವಹರಣ ಮಾಡಿದನೆಂದೂ ತನ್ಮೂಲಕ ಈಕೆಯು ತನ್ನ ಪತಿಯಿಂದ ಭಯಂಕರ ಶಾಪಗ್ರಸ್ತಳಾದಳೆಂದೂ ಪುರಾಣ ಕಥೆ ಇದೆ. ದ್ರೌಪದಿಗೆ ಯುಧಿಷ್ಠಿರಾದಿ ಐವರು ಪತಿಗಳು. ತಾರೆಯು ದೇವಗುರು ಬೃಹಸ್ಪತಿಯ ಪತ್ನಿ. ಈಕೆಯಲ್ಲಿ ಚಂದ್ರನು ರಮಿಸಿ ಬುಧನೆಂಬ ಪುತ್ರನನ್ನು ಪಡೆದನೆಂದು ಪುರಾಣಕಥೆ! ಇನ್ನೊಬ್ಬ ತಾರಾ ಎಂಬಾಕೆಯು ಕಪಿರಾಜ ವಾಲಿಯ ಪತ್ನಿ· ಈಕೆಯು, ವಾಲಿಯು ಜೀವಂತ

ನಾಗಿದ್ದವರೆಗೂ ಆತನಿಗೆ ಭಾರ್ಯೆಯಾಗಿದ್ದಳು. ತರುವಾಯ ಈಕೆಯನ್ನು ಮೈದುನನಾದ ಸುಗ್ರೀವನು ಪರಿಗ್ರಹಿಸಿ ಆಳಿದನೆಂದು ಹೇಳಲ್ಪಟ್ಟಿದೆ. ಇನ್ನು ಮಂಡೋದರಿಯು, ಮಹಾಕಾಮುಲಂಪಟನೆಂದು ಪ್ರಸಿದ್ಧನಾಗಿ ಸೀತಾಪಹರಣ ಮಾಡಿ ತನ್ಮೂಲಕವಾಗಿಯೇ ನಾಶವನ್ನೈದಿದ ರಾಕ್ಷಸ ರಾಜ ರಾವಣನ ಮಡದಿ. ಹೀಗೆ ಅಹಲ್ಯಾ ದ್ರೌಪದೀ ತಾರಾ ತಾರಾ ಮಂಡೋದರಿ ಈ ಐವರೂ, ಸದ್ಯಃ ಪ್ರಚಲಿತವಿರುವ ಸಮಾಜ ನೀತಿಯ ದೃಷ್ಟಿಯಿಂದಲಂತೂ ಸೀತೆ ಸಾವಿತ್ರಿ ಅರುಂಧತಿ ಮುಂತಾದ ಮಹಾಪತಿವ್ರತೆಯರಿಗಿಂತಲೂ ಶ್ರೇಷ್ಠರಲ್ಲವೆಂದು ನಮ್ಮ ಸ್ಥೂಲದೃಷ್ಟಿಗೆ ಬೋಧವಾಗುತ್ತದೆ. ಆದರೆ ಮಾನವರು ತಮ್ಮ ಪಾಪ ನಾಶಕ್ಕೆ ಈ ಐವರನ್ನು ಸ್ಮರಣೆ ಮಾಡಬೇಕೆಂದು ಹಿರಿಯರು ಸಲಹೆ ಕೊಟ್ಟರೇಕೆ ?—

ಲೋಕದಲ್ಲಿ ಮನುಷ್ಯನು ಸುಲಲಿತರೀತಿಯಿಂದ ಜೀವನವನ್ನು ಸಾಗಿಸಿಕೊಂಡು ನಡೆದು ಶ್ರೇಯಸ್ಸನ್ನು ಪಡೆಯಲು, ಸತ್ಕಾರ್ಯಗಳನ್ನು ಮಾಡಿ ಪುಣ್ಯಸಂಪಾದನೆ ಮಾಡಬೇಕಾದುದು ಎಷ್ಟು ಅವಶ್ಯಕವೋ, ದುಷ್ಕಾರ್ಯಗಳ ಪಾಪಮಾರ್ಗದಿಂದ ದೂರನಾಗಿದ್ದು ಅಥವಾ ಅಜ್ಞಾನದಿಂದ ಪ್ರಾಪ್ತವಾದ ಪಾಪಗಳನ್ನು ನಿವಾರಣೆಮಾಡಿಕೊಳ್ಳತಕ್ಕುದೂ, ಅಷ್ಟೇ ಅಥವ ಅದಕ್ಕಿಂತ ಹೆಚ್ಚು ಆವಶ್ಯಕವಾಗಿದೆ. ಪುಣ್ಯಸಂಪಾದನೆಗಾಗಿ, ನಿಷ್ಕಲ್ಮಷ ಜೀವನ ಪಥದಲ್ಲಿ ಹೆಜ್ಜೆಯಿಡುವುದಕ್ಕಾಗಲೀ, ಅಥವ ಪಾಪನಾಶನಕ್ಕಾಗಿ ದುರಿತ ಮಾರ್ಗದಿಂದ ದೂರವಾಗಿರುವುದಕ್ಕಾಗಲೀ ನಾವು ನಮಗಿಂತಲೂ ಶ್ರೇಷ್ಠರೆನಿಸಿಕೊಂಡಿರುವವರ ಉದಾಹರಣೆಗಳನ್ನು ತೆಗೆದುಕೊಂಡು, ಅವುಗಳನ್ನು ನಮ್ಮ ನಡೆವಳಿಕೆಯಲ್ಲಿ ತರಬೇಕಾದುದು ಕರ್ತವ್ಯವು! ಪ್ರತಿಯೊಂದು ವಿಚಾರವನ್ನೂ ಮನುಷ್ಯನು ತನ್ನ ಜೀವಮಾನದಲ್ಲೇ ಸ್ವತಃ ಅನುಭವಿಸಿ ತರುವಾಯ ಬುದ್ಧಿ ಕಲಿಸಿಕೊಳ್ಳತಕ್ಕುದು ಸಾಧ್ಯವಿಲ್ಲ. ಬೆಂಕಿಯು ಸುಡುತ್ತದೆಂಬುದನ್ನು ತಿಳಿಯಲು ನಾನು ಸ್ವತಃ ನನ್ನ ಕೈಯನ್ನು ಬೆಂಕಿಯಲ್ಲಿಟ್ಟು ಅನುಭವ ಪಡಬೇಕಾದ ಪ್ರಕೃತವಿಲ್ಲವಷ್ಟೆ! ಬೇರೊಬ್ಬನ ಕೈ ಸುಟ್ಟುದರಿಂದಲೂ ಗ್ರಹಿಸಬಹುದಲ್ಲವೆ? ಹಾಗೆಯೇ ನಮ್ಮ ಉನ್ನತಮಾರ್ಗಗಮನಕ್ಕಾಗಲೀ ಅಥೋ ಮಾರ್ಗತ್ಯಾಗಕ್ಕಾಗಲೀ ನಾವು ಈ ಹಿಂದೆಯೇ ಆಯಾಮಾರ್ಗಗಳಲ್ಲಿ

ನಡೆದು ಅಗಾಧ ಸುಖದುಃಖಗಳನ್ನು ಅನುಭವಿಸಿರುವವರ ಚರಿತ್ರೆಗಳಿಂದ ಆಯಾ ವಿಚಾರಗಳನ್ನು ತಿಳಿದು ಜಾಗ್ರತರಾಗಕೂಡದೇಕೆ?

ಹೀಗೆ ಹೇಳಿದುದರಿಂದ, ಮೇಲೆ ಹೇಳಿದ ಐವರು ಸಾಧ್ವಿಯರ ಪಾವಿತ್ರ್ಯತೆಯ ವಿಷಯದಲ್ಲಿ ನಾವು ಉತ್ತಮಾಭಿಪ್ರಾಯವುಳ್ಳವರಾಗಿಲ್ಲವೆಂದು ಯಾರೂ ಭಾವಿಸಬಾರದು. ಹಾಗಲ್ಲ! ಶ್ರೀರಾಮ ಶ್ರೀಕೃಷ್ಣರೇ ಅಹಲ್ಯಾ ದ್ರೌಪದಿಯರ ಪಾವಿತ್ರ್ಯತೆಯನ್ನು ಮೆಚ್ಚಿಕೊಂಡು ಅನುಗ್ರಹಿಸಿರುವರಲ್ಲವೆ? ನಾವು ಈ ಹಿಂದೆ ಅನೇಕವೇಳೆ ಹೇಳಿರುವಂತೆ ಪುರಾಣಗಳಲ್ಲಿ ವಿವರಿಸಲ್ಪಟ್ಟಿರುವ ಕೆಲಕೆಲವು ಸಂಗತಿಗಳು ಬಹುಗಹನವಿಚಾರಗಳನ್ನೊಳಕೊಂಡಿವೆ! ಅವುಗಳಿಗೆ ದೃಷ್ಟಿ ಭೇದದಿಂದ ಅರ್ಥಭೇದಗಳುಂಟಾಗುತ್ತವೆ ಎಂಬುದನ್ನು ಮರೆಯಬಾರದು. ಅಲ್ಲದೆ ಕಲ್ಪಾಂತರದಲ್ಲಿ ಪ್ರಚಾರವಿದ್ದ ಸಮಾಜನೀತಿಗೂ ಪ್ರಕೃತಕಾಲದಲ್ಲಿ ಪ್ರಚಲಿತವಿರುವ ಸಮಾಜ ನೀತಿಗೂ ವಿಶೇಷ ವ್ಯತ್ಯಾಸಗಳಿರುವುವಾದರೂ ಸ್ವಾಭಾವಿಕ! ಮಾತ್ರವಲ್ಲದೆ ಗ್ರಹಗಳು ನಕ್ಷತ್ರಗಳು ಚಂದ್ರಸೂರ್ಯರು ಪಂಚಭೂತಗಳು ಮುಂತಾದುವುಗಳಲ್ಲಿ ಕಲ್ಪಾಂತರಗಳಲ್ಲಿ ನಡೆದ ಹಲವುಸಂಗತಿಗಳನ್ನು ನಮಗೆ ಬೋಧವಾಗುವಂತೆ ತಿಳಿಸುವುದಕ್ಕಾಗಿ ಹಿರಿಯರು (ಪುರಾಣಕಾರರು) ನಮಗೆ ಹೆಚ್ಚು ಪರಿಚಯವಿರುವ ಗಂಡ ಹೆಂಡತಿ ಮಗ ಮಗಳು ಮುಂತಾದ ಸಮಾಜದ ಸಂಬಂಧ ಬಾಂಧವ್ಯಗಳ ದೃಷ್ಟಿಯಿಂದಲೇ ವರ್ಣಿಸಿ ಹೇಳುವ ಪದ್ಧತಿಯೂ ಉಂಟು. ಮುಖ್ಯವಾಗಿ, ಹೇಳಬೇಕಾದುದೇನೆಂದರೆ,—ಅಹಲ್ಯಾ ತಾರಾ ಮುಂತಾದವರ ಚರಿತ್ರೆಗಳಲ್ಲಿ ಅವರುಗಳ ಮೇಲೆ ಹೊರಿಸಲ್ಪಟ್ಟಿರುವ ವ್ಯಭಿಚಾರಾದಿ ದೋಷಗಳನ್ನು ಕುರಿತು ನಮ್ಮ ಸ್ಥೂಲದೃಷ್ಟಿಗೆ ಗೋಚರವಿರುವ ಲೌಕಿಕ ಕ್ರಿಯೆಗಿಂತಲೂ, ತಾತ್ವಿಕವಾದ ಅಂತರಾರ್ಥಗಳನ್ನು ಗ್ರಹಿಸತಕ್ಕುದೇ ಹೆಚ್ಚು ಸಮಂಜಸವೆಂದು ಸೂಚಿಸಬೇಕಾಗಿದೆ.

ದೇವರಾಜನಾದ ಇಂದ್ರನು ಒಬ್ಬ ಮಹರ್ಷಿಯ ಪತ್ನಿಯೊಂದಿಗೆ ದುಷ್ಕಾರ್ಯವನ್ನು ನಡೆಸಿದನೆಂಬುದನ್ನು ಯೋಚಿಸಿದರೆ ಸಾಮಾನ್ಯ ಮನೋಭಾವವುಳ್ಳ ಯಾರಿಗಾದರೂ ದೇವತೆಗಳಲ್ಲಿ ಗೌರವಭಾವವು ಹುಟ್ಟುವುದೇ? ಒಬ್ಬ ಸಾಮಾನ್ಯಮಾನವಾಧಮನು ಮಾಡುವ ಆ ಬಗೆಯ ಕೆಲಸವನ್ನೇ ಹೇಯವೆಂದು ತಿಳಿದು ಅಸಹ್ಯಗೊಳ್ಳುವ ನಾವು ತ್ರಿಲೋ

ಕಾಧಿಪತಿಯಾದ ದೇವರಾಜನು ಇಂತಹ ಕಾರ್ಯಮಾಡಿದನೆಂಬುದನ್ನು ಹೇಗೆ ಒಪ್ಪಲು ಸಾಧ್ಯ! ದೇವತೆಗಳು ಮನುಷ್ಯಲೋಕದ ರಕ್ಷಣೆಗಾಗಿಯೂ ಅದರ ಅಭಿವೃದ್ಧಿಯನ್ನು ಗಮನಿಸುವುದಕ್ಕಾಗಿಯೂ ಇರುವರಲ್ಲದೆ, ಅದನ್ನು ಭ್ರಷ್ಟಗೊಳಿಸುವುದಕ್ಕಾಗಿಯಲ್ಲವೆಂಬುದನ್ನು ನಾವು ಚೆನ್ನಾಗಿ ಗ್ರಹಿಸಬೇಕು. ಮನುಷ್ಯರು ತಮಗೆ ಕೊಡಲ್ಪಟ್ಟಿದ್ದ ಧ್ಯಾನ ತಪಸ್ಸು ಇಂದ್ರಿಯ ನಿಗ್ರಹ ಮುಂತಾದ ಸಾಧನಗಳಿಂದ, ಮಾನುಷಶಕ್ತಿಗಳ ಮೇರೆಯನ್ನು ಮೀರಿಹೋಗಬಹುದೆಂದು ತೋರಿದ ಸಂದರ್ಭಗಳಲ್ಲಿ ಮಾತ್ರ-ಜಗತ್ತಿನ ಪ್ರಕೃತಿತತ್ವಗಳ ಅಗಾಧ ಕಾರ್ಯಕಲಾಪಗಳಲ್ಲಿ ವ್ಯತ್ಯಾಸವುಂಟಾಗದಂತೆ ರಕ್ಷಿಸುವುದಕ್ಕಾಗಿ, ಅವರ ಕೆಲಸಗಳಲ್ಲಿ ಪ್ರವೇಶಿಸಿ, ಮೇರೆ ಮೀರದಂತೆ ಹದ್ದಿನಲ್ಲಿಡತಕ್ಕುದು ಲೋಕರಕ್ಷಕರಾಗಿರುವ ದೇವತೆಗಳ ಕರ್ತವ್ಯವಾಗಿದೆ; ಮೊದಲಿನಿಂದಲೂ ನಡೆದುಬಂದ ಪದ್ಧತಿಯಾಗಿದೆ. ಅದರಂತೆಯೇ ಪ್ರಕೃತಕಥಾ ಸಂದರ್ಭದಲ್ಲೂ ನಡೆದಿದೆ. ಅದು ಹೇಗೆಂಬುದನ್ನು ಕಥಾನುಸರಣೆಯಿಂದ ತಿಳಿಯಬಹುದು.

ಮಹಾವಿಚಾರಶೀಲವಾಗಿರುವ ಈ ಕಾಲದಲ್ಲಿ ಜೀವಿಸಿರುವ ನಾವಾದರೂ, ನಮ್ಮ ಹಿರಿಯರು ವಿಶೇಷಾರ್ಥಗಳನ್ನಿಟ್ಟು ಗುಂಭವಾಗಿ ಹೇಳಿರುವ ಅನೇಕ ಸಂಗತಿಗಳ ಅಂತರಾರ್ಥಗಳನ್ನು ಗ್ರಹಿಸದೆ, ಕುಹಕಿಗಳು ಮಾಡುವ ಅಪಾರ್ಥಗಳನ್ನು ಮೆಚ್ಚಿಕೊಂಡು, ಅಂಧ ಪರಂಪರೆಯನ್ನು ಅನುಸರಿಸಿ ಸಾಗುತ್ತಿರುವುದೇ, ನಮ್ಮಲ್ಲಿ-ನಮ್ಮ ದೇಶದ, ನಮ್ಮ ಶಾಸ್ತ್ರಾದಿಗಳ ವಿಷಯದಲ್ಲಿ ಅಶ್ರದ್ಧೆ ಅನಾಸ್ಥೆಗಳನ್ನು ಹುಟ್ಟಿಸಿ ಹೆಚ್ಚಿಸಲು ಕಾರಣವಾಗಿದೆ. ಪಾಶ್ಚಾತ್ಯ ನಾಗರಿಕತೆಯೆಂಬ ಬಿಸಿಲ್ಗುದುರೆಯ ಬೆನ್ನಟ್ಟಿ ಓಡುವ ಹುಚ್ಚುತನವನ್ನು ಬಿಟ್ಟು, ನಾವು ಇನ್ನಾದರೂ ನಮ್ಮದೆಂಬ ಅಭಿಮಾನದಿಂದ ಅಂತರ್ಮುಖರಾಗಿ, ಪ್ರಪಂಚದ ಹಲವು ಮಹಾಮಹಾ ಸಾಮ್ರಾಜ್ಯಗಳೂ, ಅಗಾಧ ಉಚ್ಛ್ರಾಯ ಸ್ಥಿತಿಗೇರಿದ್ದ ಹಲವು ನಾಗರಿಕತೆಗಳೂ ನಾಶವಾಗಿ, ಧೂಳಾಗಿ ಹಾರಿಹೋದರೂ, ಇನ್ನೂ ತನ್ನ ಸ್ಥಾನದಲ್ಲೇ ದೃಢವಾಗಿ ನಿಂತಿರುವ ನಮ್ಮ ಮಾತೃಭೂಮಿಯ ಸಂಸ್ಕೃತಿಗೃಹದ ತಳಹದಿಯಲ್ಲಿ, ಪೂಜ್ಯರಾದ ನಮ್ಮ ಪೂರ್ವಿಕರು ಯಾವ ಬಗೆಯ ಅಮೂಲ್ಯ ವಸ್ತು ಸಾಮಗ್ರಿಯನ್ನು ಇಟ್ಟಿದ್ದರೆಂಬುದನ್ನು ಯೋಚಿಸದೇ

ಕಾಗಿದೆ. ವಿಮರ್ಶಿಸಬೇಕಾಗಿದೆ. ಗುಣಗ್ರಹಣಮಾಡಿ ಅಭಿಮಾನಪಡಬೇಕಾಗಿದೆ.

ಈ ಧ್ಯೇಯಸಾಧನೆಯ ಮಹೋದ್ದೇಶದಿಂದಲೇ, ಸಂಬೋಧಕುಸುಮಾಂಜಲಿ ಗ್ರಂಥಮಾಲೆಯು, ಅಳಿಲು ಭಕ್ತಿಯಿಂದ ಮಳಲಸೇವಾರೂಪದಲ್ಲಿ, ಕರ್ಣಾಟಕ ಜನತಾರೂಪೀ ಜನಾರ್ದನನ ಸೇವೆಗಾಗಿ, ಶಕ್ತ್ಯನುಸಾರ ಹೆಣಗುತ್ತಿದೆ. ಕರ್ಣಾಟಕ ಭಾಷಾಭಿಮಾನಿಗಳೂ, ದೇಶಾಭಿಮಾನಿಗಳೂ ಈ ಉದ್ಯಮಕ್ಕೆ ಸ್ವಹಸ್ತ ಪರಹಸ್ತ ಸಹಕರಿಸಿ ಪ್ರೋತ್ಸಾಹಿಸಬೇಕೆಂದು ಪ್ರಾರ್ಥನೆ.

ಇತಿ

ಬೆಂಗಳೂರು
ತಾ॥ ೨೮-೨-೨೯

ಸುಜನ ವಿಧೇಯ,
ಯಂ. ರಾಮರಾವ್.

ಶ್ರೀರಾಮ ಸಹಾಯಂ

## ಗೌತಮಪತ್ನಿ—ಮಹಾಪತಿವ್ರತೆ

# ಅಹಲ್ಯಾದೇವಿ

**ಅಧ್ಯಾಯ ೧** **"ಗೌತಮ ಋಷಿ"**

ಮಹರ್ಷಿಗಳ, ಮುನಿ-ಯೋಗಿಗಳ, ಭಕ್ತಭಾಗವತರ ತೌರುಮನೆಯೆಂದರೆ ಜಗತ್ತಿನಲ್ಲಿ ನಮ್ಮ ಮಾತೃಭೂಮಿಯಾದ ಭಾರತದೇಶವಲ್ಲದೆ ಬೇರೊಂದಿಲ್ಲ: ಆಸೇತುಹಿಮಾಚಲವ್ಯಾಪ್ತವಾದ ಈ ವಿಶಾಲದೇಶದ ಯಾವ ಭಾಗವಾದರೂ, ಯಾವನೊಬ್ಬ ಮುನಿಯ ಅಥವ ಯೋಗಸಿದ್ಧನ, ಭಕ್ತಶ್ರೇಷ್ಠನ ಆಶ್ರಮವಾಗಿದ್ದಿತೆಂದು—ಆಯಾ ಸ್ಥಳೀಕರು ಗುರುತು ತೋರಿಸುವುದು ಇಂದಿಗೂ ಅನೇಕರ ಅನುಭವದಲ್ಲಿದೆ. ಅಂತಹ ಮಹಾನ್ ವ್ಯಕ್ತಿಗಳಲ್ಲಿ ಕೆಲವರು ಪುರುಷಾರ್ಥಗಳನ್ನು ಸಾಧಿಸಿ ತನ್ಮೂಲಕ ಜನ್ಮ ಸಾರ್ಥಕತೆಯನ್ನು ಹೊಂದಬೇಕೆಂದು ಶ್ರಮಿಸಿದವರು ; ಕೆಲವರು ಭಗವದನುಗ್ರಹಸಂಪಾದನೆಗಾಗಿ ಕಷ್ಟಪಟ್ಟವರು ; ಹಲವರು ಅಣಿಮಾದಿ ಅಷ್ಟಸಿದ್ಧಿಗಳನ್ನು ಹೊಂದಿ, ತನ್ಮೂಲಕ ಪ್ರಾಪ್ತವಾದ ವಿಶೇಷಶಕ್ತಿಸಾಮರ್ಥ್ಯಗಳಮೂಲಕ ಭೌತಿಕವಸ್ತು ಸಾಮಗ್ರಿಗಳನ್ನು ಆಳಬೇಕೆಂಬ ಅಭಿಲಾಷೆಯಿಂದ ಶ್ರಮಪಟ್ಟವರು. ಅಂಥವರಲ್ಲಿ ಆತ್ಮಸಿದ್ಧಿಗಾಗಿ ಪ್ರಯತ್ನಿಸಿ ಕೃತಕೃತ್ಯರಾದವರು ಬಹಳವಿಲ್ಲದಿದ್ದರೂ ಎಂತೂ ಇರುವರು.

ಆತ್ಮಸಿದ್ಧಿಗಾಗಿಯೇ ತಪಸ್ಸು ಮಾಡುವವರಿಗೆ ಮಧ್ಯದಲ್ಲಿ ಪ್ರಾಪ್ತವಾಗತಕ್ಕ ಕಷ್ಟಸಂಕಟಗಳು ಅನಂತವಿವೆ. ಅವರು ಪಂಚೇಂದ್ರಿಯಗಳ ಉಲ್ಬಣೆಯನ್ನು ತಡೆದು ಅಡಗಿಸಿ, ಉನ್ನತ ಮಾರ್ಗವನ್ನು ಕುರಿತು ಗಮಿಸಬೇಕಾಗುತ್ತದೆ. ಕಾಮಕ್ರೋಧಾದಿ ಅರಿಷಡ್ವರ್ಗಗಳು ಅವರ ಬೆನ್ನಂಟಿ ಬಾಧಿಸತೊಡಗುವುದಂತೂ ಎಂದಿಗೂ ತಪ್ಪದು. ಸಾಲದುದಕ್ಕೆ—ಅವರ ಮಾರ್ಗದಲ್ಲಿ, ಅವರಿಗೆ ನಿಶ್ಚಯವಾದ ಶ್ರದ್ಧಾಭಕ್ತಿಗಳಿವೆಯೋ ಅವರು-

ಮೇಲಿನ ಮೆಟ್ಟಲಿಗೆ ಏರಲು ಯೋಗ್ಯರಾಗಿದ್ದಾರೋ ಎಂಬುದನ್ನು ಪರೀಕ್ಷಿಸಲು ಕರ್ಮಾಭಿಮಾನಿದೇವತೆಗಳು ಸರ್ವದಾ ಜಾಗರೂಕರಾಗಿದ್ದು, ಅವರಿಗೆ ಅನೇಕಬಗೆಯ ವಿಘ್ನಗಳನ್ನು ತಂದೊಡ್ಡಿ, ಅವರ ದಾರ್ಢ್ಯವನ್ನು ಪರೀಕ್ಷಿಸುತ್ತಿರುವರು. ಇವುಗಳ ಮಧ್ಯೆ ಹೇಮಭೂಮಿಕಾಮಿನಿಗಳೆಂಬ ಈ ಭೌತಿಕಸುಖ ವಿಚಾರಗಳೂ ಅವರನ್ನು ಪ್ರಪಂಚದ ಕಡೆಗೆ ಬಲವಂತದಿಂದ ಸೆಳೆಯುತ್ತಿರುವುವು. ಪೂರ್ವದಲ್ಲಿ ಇಷ್ಟು ಅಡಚಣೆಗಳನ್ನು ಸಹಿಸಿ, ಆತ್ಮಸಿದ್ಧಿಯನ್ನು ಪಡೆದು, ಬ್ರಹ್ಮಜ್ಞಾನವನ್ನು ಹೊಂದಿದರೆ, ಅಂದಿಗೆ ಒಬ್ಬನು 'ಬ್ರಾಹ್ಮಣ' ನೆಂಬ ಗೌರವಪದಕ್ಕೆ ಪಾತ್ರನಾಗುತ್ತಿದ್ದನು. ಕ್ಷತ್ರಿಯನಾಗಿದ್ದ ವಿಶ್ವಾಮಿತ್ರ ಮಹರ್ಷಿಯು ಬ್ರಹ್ಮರ್ಷಿ ಪದವಿಯನ್ನು ಪಡೆಯಲು, ಇಷ್ಟು ಕಷ್ಟಗಳನ್ನು ಸಹಿಸಬೇಕಾಯಿತು. ಅನಂತಪ್ರತಿಬಂಧಕಗಳನ್ನು ಧೈರ್ಯದಿಂದ ದಾಟಬೇಕಾಯಿತು. ಬ್ರಾಹ್ಮಣ್ಯವೆಂಬುದು ಕೇವಲ ಉಡುಪನ್ನು ಬದಲಾಯಿಸುವುದರಿಂದ ಪಡೆಯಬಹುದಾದ ವೇಷಾಂತರವೆಂದು ಭಾವಿಸುವುದಾದರೆ ಅದಕ್ಕಿಂತಲೂ ಹುಚ್ಚುತನವು ಮತ್ತೊಂದಿಲ್ಲ. ಬ್ರಾಹ್ಮಣ್ಯವು ಹುಡುಗಾಟಿಕೆಯಿಂದ ಬರತಕ್ಕುದಲ್ಲ. ಬರಿಯ ಮೂರೆಳೆಯ ಒಂದು ದಾರವು ಪತಿತನಾದ ಒಬ್ಬನನ್ನು ಬ್ರಾಹ್ಮಣನೆನ್ನಿಸಲಾರದು!

ಆತ್ಮ ಸಿದ್ಧಿಯನ್ನು ಕುರಿತು ಸಾಗತಕ್ಕ ಜೀವನ ಪ್ರಗತಿಮಾರ್ಗ ಪ್ರಯಾಣದಲ್ಲಿನ ಒಂದು ನಿಲ್ದಾಣ (Station) ವೇ ಬ್ರಾಹ್ಮಣ್ಯವು ಎಂದರೆ ಅದೊಂದು ಅತಿಶಯೋಕ್ತಿಯಲ್ಲ. ಪ್ರಪಂಚದಲ್ಲಿ ಮಾನವ ಧರ್ಮವನ್ನು ರೂಪಿಸಿ, ಗೊತ್ತಾದ ನಿಯಮ ನಿಬಂಧನೆಗಳನ್ನೇರ್ಪಡಿಸಿದ ಮನುವೇ ಮುಂತಾದ ಧರ್ಮಕರ್ತರು ಅದ್ಯಂತ ಮಾನವ ಸಮುದಾಯವನ್ನೂ ಶೂದ್ರ ವೈಶ್ಯ ಕ್ಷತ್ರಿಯ ಬ್ರಾಹ್ಮಣ ಎಂಬ ನಾಲ್ಕು ವರ್ಣಗಳಾಗಿ ವಿಂಗಡಿದುದು, ಲೌಕಿಕ ಕಾರ್ಯಕಲಾಪಗಳ ಸುವ್ಯವಸ್ಥೆಗಾಗಿ ಶ್ರಮವಿಭಾಗ (Division of labour) ದೃಷ್ಟಿಯಿಂದ ಎಂದು ಈವರೆಗೇ ಕೆಲವುವೇಳೆ ಹೇಳಿದ್ದೇವಲ್ಲವೆ? ಅದು ಸುಳ್ಳಲ್ಲ: ಆದರೆ ಅದುಕೇವಲ ಸ್ಥೂಲ ದೃಷ್ಟಿಯಿಂದ ಗೋಚರವಾಗತಕ್ಕ ಸಂಗತಿಮಾತ್ರ! ಸ್ವಲ್ಪಸೂಕ್ಷ್ಮ

ದೃಷ್ಟಿಯಿಂದ, ವರ್ಣವ್ಯವಸ್ಥೆಯ ಅಂತರ್ಯ ಅಂಗಗಳನ್ನು ಕುರಿತು ವಿಚಾರಿಸುವುದಾದರೆ, ನಿಶ್ಚಯತತ್ವವು ಗೋಚರಿಸುವುದು.

ಪ್ರಕೃತ ಈ ನಾಲ್ಕು ವರ್ಣಗಳವರಿಗೆ ಏರ್ಪಟ್ಟಿರುವ ಪ್ರಾಪಂಚಿಕ ವೃತ್ತಿಗಳು ಎಂಥವೆಂದು ಯೋಚಿಸೋಣ! ಜನಾಂಗದಲ್ಲಿ ಯಾರು ಕೇವಲ ವ್ಯವಸಾಯ ಪಶುಪಾಲನೆ ಮುಂತಾದ ಕೆಲಸಗಳನ್ನೂ ಇತರ ಸೇವಕಾವೃತ್ತಿಯನ್ನೂ ಮಾಡಿಕೊಂಡಿರಲು ಮಾತ್ರ ಶಕ್ತರಾಗಿದ್ದರೋ ಅಂಥವರು ಶೂದ್ರರೆನ್ನಿಸಿಕೊಂಡರು. ಯಾರು ಶೂದ್ರರು ಬೆಳೆದ ದವಸ ಧಾನ್ಯಗಳನ್ನು ಒಂದೆಡೆ ಸಂಗ್ರಹಿಸಿಕೊಂಡು, ಒಂದೆಡೆಯಿಂದ ಮತ್ತೊಂದೆಡೆಗೆ ಅದನ್ನು ಸಾಗಿಸಿ, ವ್ಯಾಪಾರಾದಿವೃತ್ತಿಗಳನ್ನು ಮಾಡಿಕೊಂಡಿರಲು ಮಾತ್ರ ಶಕ್ತರಾಗಿದ್ದರೋ ಅಂಥವರು ವೈಶ್ಯರೆನ್ನಿಸಿಕೊಂಡರು. ಯಾರು ವಿಶೇಷಶಕ್ತಿ ಸಾಮರ್ಥ್ಯಗಳನ್ನು ಸಂಪಾದಿಸಿ, ತಮ್ಮ ಭುಜಬಲ ಬುದ್ಧಿಬಲಗಳಿಂದ ಜನಾಂಗದ ಅರ್ಥಮಾನಪ್ರಾಣಗಳು ಪರಾಕ್ರಾಂತವಾಗದಂತೆ ರಕ್ಷಿಸ ಬಲ್ಲವರಾಗಿದ್ದರೋ ಮತ್ತು ಈ ಬಗೆಯ ಪರರಕ್ಷಣಕಾರ್ಯದಲ್ಲಿ ದೇಹತ್ಯಾಗ ಮಾಡಲು ಕೂಡ ಯಾರು ಸಿದ್ಧರಾಗಿದ್ದರೋ ಅಂಥವರು ಕ್ಷತ್ರಿಯರೆಂದು ಕರೆಯಲ್ಪಟ್ಟರು. ಆದರೆ ಯಾರು, ಕೇವಲ ವಿದ್ಯಾರ್ಜನೆಯಲ್ಲೂ, ಭಗವದಾರಾಧನೆಯಲ್ಲೂ ಕಾಲಕಳೆಯುತ್ತಾ ಜನಾಂಗಕ್ಕೆ ಧರ್ಮನೀತಿ ಭೋಧಕರಾಗಿ, ಪಾರಂಪರ್ಯವಾಗಿ ನಡೆದುಬಂದ ತಮ್ಮ ಜನಾಂಗದ ಸಂಸ್ಕೃತಿಯನ್ನು ಕಾಪಾಡುವುದರಲ್ಲೂ, ಆತ್ಮತತ್ವಾನ್ವೇಷಣದಲ್ಲೂ ನಿರತರಾಗಿದ್ದರೋ ಅಂಥವರು ಬ್ರಾಹ್ಮಣರೆಂದು ಕರೆಯಲ್ಪಟ್ಟರು. ಪ್ರಿಯವಾಚಕ ಮಹಾಶಯರೇ! ಇಷ್ಟು ಹೇಳಿದುದರಿಂದ ಬ್ರಾಹ್ಮಣಾದಿ ಚತುರ್ವರ್ಣಗಳ ವಿಚಾರವಾಗಿ ಎಲ್ಲವನ್ನೂ ಹೇಳಿದಂತಾಗಲಿಲ್ಲ. ಈ ವರ್ಣ ವಿಭಾಗಗಳು ಜೀವನಪ್ರಗತಿಮಾರ್ಗ ಪ್ರಯಾಣದಲ್ಲಿನ ಒಂದೊಂದು ನಿಲ್ದಾಣವೆಂದು ಹೇಳಿದೆವಲ್ಲವೆ! ಅದು ಹೇಗೆಂಬುದನ್ನೂ ವಿಚಾರಿಸಬೇಕಾಗಿದೆ: ವ್ಯವಸಾಯ ಪಶುಪಾಲನೆ ಮುಂತಾದ ಸೇವಕಾವೃತ್ತಿಯನ್ನು ಮಾಡಿಕೊಂಡಿರುವವನ ಅನುಭವವೂ ದೃಷ್ಟಿವಿಸ್ತಾರವೂ ಆಶಯವೂ ಜೀವನಧ್ಯೇಯವೂ ಎಷ್ಟುಮಾತ್ರವಿರಬಹುದೆಂಬುದನ್ನು ವಿಚಾರಿಸಿರಿ. ಅವನು ಏನಿದ್ದರೂ ತನ್ನ ಭೂಮಿ, ಮಣ್ಣುಕಲ್ಲುಗಳು, ಹಲಕೆಲವು ಲೋಹಗಳು, ಧಾನ್ಯ

ಷವಸಗಳು, ದನಕರುಗಳು ಇಷ್ಟು ವಿಷಯಗಳಲ್ಲಿ ಮಾತ್ರ ಅನುಭವಗೊಂಡಿರುವನು. ಅವನ ಯೋಚನೆಯಾದರೂ ಅವುಗಳ ಸಂಬಂಧವನ್ನು ಮೀರಿ ಆಚೆಗೆ ಹೋಗಲಾರದು. ಅವನಿಗೆ ತಾನು, ತನ್ನ ಹೆಂಡಿರು ಮಕ್ಕಳು, ಆತ್ಮೀಯರು ಮುಂತಾದವರಿಗೆ ಅನ್ನವಸ್ತ್ರಗಳ ಸಂಪಾದನೆ ಮಾಡಬೇಕೆಂಬುದು ಮಾತ್ರವಲ್ಲದೆ ಹೆಚ್ಚಿನದ್ಯೇಯವಿರದು. ಅವರನ್ನು ಬಿಟ್ಟು ಹೊರಗಿನವರ ಕಷ್ಟಸುಖಗಳ ವಿಚಾರವು ಅವನ ತಲೆಯನ್ನು ಹೊಗುವುದು ಶಕ್ಯವಿಲ್ಲ. ತಾನು ಉಂಡು ಉಟ್ಟು ಸುಖವಾಗಿರಬೇಕೆಂಬುದು ಮಾತ್ರವಲ್ಲದೆ, ಅವನ ಜೀವಿತದಲ್ಲಿ ಸಾಧಿಸಬೇಕಾದ ಹೆಚ್ಚಿನ ಆಶಯವು ಅವನಿಗಿರದು. ಆ ಸ್ಥಿತಿಯಲ್ಲಿ ಅವನ ಪರಮಾವಧಿ ಅಭಿವೃದ್ಧಿಯೆಂದರೆ, ವಿಶೇಷಭೂಸ್ವಾಸ್ಥ್ಯವನ್ನು ಸಂಪಾದಿಸುವಿಕೆ, ದನಕುರಿಗಳನ್ನು ಸಾಕಿ, ವ್ಯವಸಾಯವನ್ನು ವೃದ್ಧಿಪಡಿಸಿ ವಿಶೇಷಪರಿಶ್ರಮಮಾಡಿ ಧನಸಂಗ್ರಹಣ ಮಾಡುವಿಕೆ, ಇಷ್ಟುಮಾತ್ರ! ತರುವಾಯ ಮುಂದೆ ಎರಡನೆಯ ಸ್ಥಿತಿಯಲ್ಲಿರುವವನು, ಹತ್ತೆಂಟು ಸ್ಥಳಗಳಲ್ಲಿರುವ ದವಸಧಾನ್ಯಾದಿಗಳನ್ನು ಒಂದೆಡೆ ಸಂಗ್ರಹಿಸಿ, ಅದನ್ನು ತನ್ನ ಊರಿನ ಮತ್ತು ಪರಊರುಗಳವರ ಉಪಯೋಗಕ್ಕಾಗಿ ಸಾಗಿಸಿ, ತನ್ಮೂಲಕ ಪರರಿಗೆ ಅನುಕೂಲಿಸುವಂತೆ ಪರಿಶ್ರಮಮಾಡುವವನು ಮಾತ್ರ. ಈ ಸ್ಥಿತಿಯಲ್ಲಿ ಅವನು ಮಾಡುವ ಪರಮಾವಧಿ ಕಾರ್ಯವೆಂದರೆ ಅಸಂಖ್ಯ ಧನಸಂಗ್ರಹಣ ಮಾಡಬಹುದು. ಬೇಕಾದಷ್ಟು ಸುಖಸಂಪದಗಳನ್ನು ಅನುಭವಿಸಬಹುದು. ಧಾರ್ಮಿಕಬುದ್ಧಿಯುಳ್ಳವನಾದರೆ ಅದನ್ನು ಧರ್ಮಕಾರ್ಯಗಳಿಗಾಗಿ ದಾನವಾಗಿ ಕೊಡಲೂ ಬಹುದು. ಆದರೆ ಪರೋಪಕಾರಕ್ಕೋಸುಗ ದೇಹವನ್ನು ಬಿಡಲಿಕ್ಕಾಗಲೀ, ಆತ್ಮಸುಖವನ್ನು ತ್ಯಾಗಮಾಡಲಿಕ್ಕಾಗಲೀ ಇವನು ಸಿದ್ಧನಾಗಲಾರನು. ಈ ಸ್ಥಿತಿಯಲ್ಲಿ ಅವನ ದೃಷ್ಟಿಯು ತನ್ನ ಕುಲಸ್ಥರನ್ನು ದಾಟಿ ಮುಂದೆ ವಿಸ್ತರಿಸಲಾರದು, ಕುಲಸ್ಥರಲ್ಲದ ಹೊರಗಿನವರನ್ನೂ ತನ್ನವರೇ ಎಂದು ನೋಡುವಂತಹ ವಿಶಾಲದೃಷ್ಟಿಯು ಅವನಿಗಿರಲಾರದು. ತರುವಾಯ ಮೂರನೆಯ ಸ್ಥಿತಿಯಲ್ಲಿ ಮನುಷ್ಯನ ದೃಷ್ಟಿಯು ಇನ್ನೂ ವಿಸ್ತಾರವಾಗುವುದು. ಅವನಿಗೆ ಹತ್ತು ಹಣ ಹೊನ್ನುಗಳು–ನಾಲ್ಕೈಕರೆ ಭೂಮಿ ಕಾಣಿಗಳು, ದವಸಧಾನ್ಯಗಳು ಮುಂತಾದುವುಗಳಿಂದ ತೃಪ್ತಿಯುಂಟಾಗದು. ಅವನು ದೇಶ ದೇಶಗಳನ್ನು

ಜಯಿಸಿ ಸಾಮ್ರಾಜ್ಯವನ್ನು ಕಟ್ಟಲಾಶಿಸುವನು. ಅಗಣಿತ ಜನಧನಗ ಳನ್ನು ತನ್ನ ಸ್ವಾಮ್ಯದಲ್ಲಿರಿಸಿಕೊಳ್ಳಲು ಅಪೇಕ್ಷಿಸುವನು. ತನ್ನ ಮಟ್ಟಿಗೆ ತಾನು ಬದುಕುವುದಲ್ಲ—ಪರರ ಮೇಲೆ ತನ್ನ ಆಜ್ಞೆಯು ನಡೆಯ ಬೇಕೆಂದು ಇಚ್ಛಿಸುವನು. ಆತ್ಮೀಯರು ಮಾತ್ರವಲ್ಲ, ವಿವಿಧ, ಜಾತಿ ಮತಪಂಗಡಗಳಿಗೆ ಒಳಪಟ್ಟಿದ್ದರೂ ತನ್ನ ದೇಶದಲ್ಲಿರುವವರೆಲ್ಲರೂ ತನ್ನವರೇ ಎಂಬ ಒಂದು ಅಭಿಮಾನವು ಅವನಿಗಿರುವುದು. ಅವರ ಸುರಕ್ಷಣೆಗಾಗಿ, ತನ್ನ ತನುಮನಧನಗಳನ್ನು ವ್ಯಯಿಸಿ ಕಷ್ಟಪಡಲೂ ಅವನು ಹಿಂದೆಗೆಯನು. ಅವರಿಗೆ ಅಪಾಯವುಂಟಾಗುವಂತಹ ಸಂದರ್ಭ ಬಂದರೆ, ತನ್ನ ಪ್ರಾಣವನ್ನಾದರೂ ತೆತ್ತು, ಅವರನ್ನು ರಕ್ಷಣೆಮಾಡಬೇಕೆಂ ಬಷ್ಟು ಮನಸ್ಸಿನ ಆತುರತೆಯೂ ಔದಾರ್ಯವೂ ಈ ಸ್ಥಿತಿಯಲ್ಲಿರುವ ಮನುಷ್ಯನಿಗುಂಟು. ತಾನೂ ವಿಶೇಷವಾದ ಸುಖಸಂತೋಷಗಳನ್ನು ಅನುಭವಿಸಿ, ಇತರರಿಗೂ ಅಂತಹ ಸುಖಗಳನ್ನು ಉಂಟುಮಾಡಬೇಕೆಂ ಬುದೇ ಇವನ ಜೀವಿತ ಧ್ಯೇಯವಾಗಿರುವುದು. ಇವನು ಪರರಿಗೋಸ್ಕರ ತನ್ನ ದೇಹವನ್ನು ಒಂದುವೇಳೆ ಬಿಡಲು ಸಿದ್ಧನಾಗಬಲ್ಲನಲ್ಲದೆ, ಪಂಚೇಂ ದ್ರಿಯ ಸೌಖ್ಯವನ್ನು ಬಿಟ್ಟಿರಲು ಇವನ ಮನಸ್ಸು ಒಡಂಬಡಲಾರದು. ಇವನು ಉದಾರಿಯೇ, ಧೀರನೇ, ನಿಸ್ಪೃಹನೇ. ಆದರೆ ವಿಷಯಸುಖಗ ಳನ್ನು ಅನುಭವಿಸಬೇಕೆಂಬ ಆಕಾಂಕ್ಷೆಯು ಇವನಿಗೆ ಇನ್ನೂ ಅಳಿದಿರುವು ದಿಲ್ಲ. ಪ್ರಾಪಂಚಿಕ ಸುಖದ ಪರಮಾವಧಿ ಅನುಭವವು ಇವನ ಸ್ಥಿತಿ ಯಲ್ಲಿ ದೃಷ್ಟಿಗೋಚರವಾಗುವುದು.

ತರುವಾಯ ನಾಲ್ಕನೆಯ ಸ್ಥಿತಿಯು ಪ್ರಾಪ್ತವಾಗುವುದು. ಈ ಸ್ಥಿತಿ ಯಲ್ಲಿ ಮನುಷ್ಯನಿಗೆ ಅಷ್ಟುಮಟ್ಟಿನ ದೇಹಕಷ್ಟವು ಇಲ್ಲವೆಂಬುದುನಿಜ. ಅವನು ವ್ಯಾಪಾರಕ್ಕಾಗಿ ಧನ ಧಾನ್ಯಗಳನ್ನು ಸಂಗ್ರಹಿಸಬೇಕಾದುದಿಲ್ಲ; ಅಥವ ತನ್ನ ಮತ್ತು ಇತರರ ರಕ್ಷಣೆಗಾಗಿ ಕತ್ತಿಯನ್ನು ಹಿಡಿದು ಕಾದಾಡಿ ಶತ್ರುವನ್ನು ಕೊಂದು ಜಯಹೊಂದಬೇಕಾದುದಿಲ್ಲ. ಈ ಸ್ಥಿತಿಯಲ್ಲಿ ಅವನ ಕರ್ತವ್ಯವೇ ಬೇರೆ! ಅದು ಲೌಕಿಕವಾದುದಲ್ಲ; ಪಾರಲೌಕಿಕವಾದುದು. ಈ ಸ್ಥಿತಿಯಲ್ಲಿರುವವರಿಗೆ, ಹಣ ಹೊನ್ನುಗಳು, ದವಸಧಾನ್ಯಗಳು, ವಸ್ತ್ರಒಡ ವೆಗಳು, ಪಶುಕ್ಷೇತ್ರಗಳು ಬಂದು ಹೋಗುವುದರ ಗಮನವಿಲ್ಲ. ಅವರು

ಆತ್ಮಸಾಧನೆಯ ಮಾರ್ಗದಲ್ಲಿ ಮಗ್ನರಾಗಿರುವರು. ಹಿಂದಿನ ಮೂರು ಸ್ಥಿತಿಗಳಲ್ಲಿ ಲೌಕಿಕ ವಸ್ತು ಸಾಮಗ್ರಿಗಳಲ್ಲೂ, ಕಾರ್ಯಕಲಾಪಗಳಲ್ಲೂ ತೊಡಗಿದ್ದ ಮನಸ್ಸು-ಇಂದ್ರಿಯಗಳನ್ನು ಅವುಗಳಿಂದ ಒಳಕ್ಕೆ ಸೆಳೆದುಕೊಳ್ಳುವ ಪ್ರಯತ್ನವು ಈ ಸ್ಥಿತಿಯಲ್ಲಿ ನಡೆಯುವುದು. ಹಿಂದಿನ ಮೂರು ಸ್ಥಿತಿಗಳಲ್ಲಿ, ನನ್ನದು ನನಗೆ ಎಂದು ಸ್ವಾರ್ಥೋದ್ದೇಶದಿಂದ ಪ್ರಾಪಂಚಿಕ ವಿಷಯಗಳಲ್ಲಿ ಪ್ರವೇಶಿಸುತ್ತಿದ್ದ ಮನಸ್ಸನ್ನು, ಅವರು ಅವುಗಳಿಂದ ಹಿಂದಕ್ಕೆಳೆದು ಪರಹಿತಕ್ಕಾಗಿ ಉಪಯೋಗಿಸುವ ಉದ್ಯೋಗದಲ್ಲಿ ತೊಡಗುವರು. ಬಹಿರ್ಮುಖವಾಗಿದ್ದ ಇಂದ್ರಿಯಗಳನ್ನು ಅಂತರ್ಮುಖವಾಗಿ ಭಗವತ್ಪರವಾಗುವಂತೆ ಮಾಡುವ ವಿಷಯದಲ್ಲಿ ಪರಿಶ್ರಮವು ನಡೆಯಬೇಕಾದುದು ಈ ಸ್ಥಿತಿಯಲ್ಲೇ! ಈ ಸ್ಥಿತಿಯಲ್ಲಿ ಅವನ ದೃಷ್ಟಿಯು ಸ್ವಕೀಯರನ್ನು ಮಾತ್ರವಲ್ಲ, ಸ್ವಕುಲಸ್ಥರನ್ನು ಮಾತ್ರವಲ್ಲ, ಸ್ವದೇಶಸ್ಥರನ್ನು ಮಾತ್ರವಲ್ಲ, ಆದ್ಯಂತ ಮಾನವ ಕಾಲವನ್ನೇ, ವಿಶ್ವವನ್ನೇ ಬಂಧು ಭಾವನೆಯಿಂದ ಕಂಡು ಆದರಿಸುವಂತಹ ವೈಶಾಲ್ಯವನ್ನು ಪಡೆಯುವುದು. ಲೋಕದ ಹಿತ ಸಾಧನೆಗಾಗಿ, ಆತನು ಸ್ವಸುಖವನ್ನು ತ್ಯಾಗಮಾಡುವನೆಂಬುದು ನಿರ್ವಿವಾದವು. ಇನ್ನೊಂದು ವಿಷಯ-ಮೊದಲನೆಯ ಸ್ಥಿತಿಯಲ್ಲಿ ಮನುಷ್ಯನು ಪರಹಿತಕ್ಕಾಗಿ ದೇಹಶ್ರಮ ಪಡಬಲ್ಲನಲ್ಲದೆ, ತನ್ನ ಧನವನ್ನಾಗಲೀ, ಪ್ರಾಣವನ್ನಾಗಲೀ ಕೊಡಲೊಪ್ಪನು. ಎರಡನೆಯ ಸ್ಥಿತಿಯಲ್ಲಿ ಪರಹಿತಸಾಧನೆಯೆಂದರೆ, ದೇಹಶ್ರಮದೊಂದಿಗೆ ತನ್ನ ಸ್ವಾರ್ಜಿತದ ಧನದಲ್ಲಿ ಸ್ವಲ್ಪವನ್ನು ಕೊಡುವಷ್ಟುಮಟ್ಟಿನ ಔದಾರ್ಯವು ಪ್ರವೇಶಗೊಂಡಿರುವುದು. ಮೂರನೆಯ ಸ್ಥಿತಿಯಲ್ಲಿ, ಪರಮಾವಧಿ ಶ್ರಮವನ್ನು ಸಹಿಸಲೂ, ತನ್ನ ಸರ್ವಸ್ವವನ್ನೂ ಕೊನೆಗೆ ಪ್ರಾಣವನ್ನೂ ಪರಹಿತಕ್ಕಾಗಿ ಕೊಡುವಂತಹ ಔದಾರ್ಯವು ಅವನಲ್ಲಿ ಪ್ರವೇಶಗೊಳ್ಳುವುದು. ಆದರೆ ನಾಲ್ಕನೆಯ ಸ್ಥಿತಿಯಲ್ಲಿ ಈ ಎಲ್ಲವುಗಳನ್ನು ಮಾಡಲೂ ಅವನು ಸಿದ್ಧನಾಗಿರುವುದರೊಂದಿಗೆ, ಪರಹಿತಕ್ಕಾಗಿ ಸ್ವಸುಖವನ್ನು ತ್ಯಾಗಮಾಡಲು ಸಹ ಹಿಂದೆಗೆಯನು. ವಿಚಾರಪರರೂ ಅನುಭವಿಗಳೂ ಅಲ್ಲದವರಿಗೆ, ಸ್ವಸುಖ ತ್ಯಾಗಮಾಡುವುದು ಪ್ರಾಣಕೊಡುವುದಕ್ಕಿಂತಲೂ ಕಷ್ಟವೆ ಎಂದು ತೋರಬಹುದು. ಆದರೆ, ಪ್ರಾಣದೊಂದಿಗಿದ್ದು ಪಂಚೇಂದ್ರಿಯಗಳನ್ನು ವಿಶೇಷ

ಶಭಸದಿಂದ ಆಕರ್ಷಿಸುತ್ತಿರುವ ವಿಷಯಸುಖಗಳ ಉಲ್ಬಣತೆಗೆ ಒಳಗಾ
ಗದೆ, ಇಂದ್ರಿಯಗಳನ್ನು ಬಿಗಿಹಿಡಿದು, ಕಾಮಿನಿ ಕಾಂಚನ ಭೋಗಸಾ
ಮಗ್ರಿಗಳು ಇವುಗಳ ಮಧ್ಯದಲ್ಲಿದ್ದೂ ಅವುಗಳಿಂದ ಲಿಪ್ತನಾಗದೆ, ಆಯಾ
ಇಂದ್ರಿಯಗಳನ್ನು ಪರಹಿತಕಾರ್ಯಗಳಲ್ಲಿ ನಿರತವಾಗುವಂತೆ ತೊಡ
ಗಿಸುವ ಕೆಲಸವು ಸಾಮಾನ್ಯವಾದುದಲ್ಲ. ವಿಶ್ವಕುಟುಂಬಿಯಾದ ಇವನು
ದ್ವೇಷಾಸೂಯೆಗಳ ಸೋಂಕಿಲ್ಲದೆ, ಲಾಭನಷ್ಟ, ಶತ್ರುಮಿತ್ರ, ಜಯಾ
ಪಜಯಗಳೆಂಬ ದ್ವಂದ್ವಗಳನ್ನು ದಾಟಿರುವನು. ಅವನಿಗೆ ಪ್ರಾಪಂಚಿಕ
ವಾದ ಯಾವುದರಿಂದಲೂ ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ
ಅವನು ಕೇವಲ ಸಾಕ್ಷಿರೂಪನಾಗಿದ್ದು ಲೌಕಿಕ ಕಾರ್ಯಕಲಾಪಗಳನ್ನು
ಸಾಗಿಸುತ್ತಿರುವನು. ಇದಕ್ಕೂ ಹೆಚ್ಚಾಗಿ ಆತನ ಧ್ಯೇಯವಾದರೋ
ಜಗನ್ನಿಯಾಮಕನಾದ ಭಗವಂತನನ್ನು ಪ್ರಾಪ್ತಿಮಾಡಿಕೊಳ್ಳುವುದಾಗಿರು
ವುದಲ್ಲದೆ, ಅವನು ಮತ್ತಾವ ಲೌಕಿಕ ಪದವಿಗೌರವಗಳನ್ನೂ ಕೋರದೆ,
ನಿತ್ಯತೃಪ್ತನಾಗಿರುವನು. ಇದೇ ಬ್ರಾಹ್ಮಣನ ಸಹಜವಾದ ಸ್ಥಿತಿಯು.

ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂಬಿವು ಮೇಲ್ಕಂಡಂತೆ ಜೀ
ವನು ತನ್ನ ಸಂಸಾರ ಯಾತ್ರೆಯಲ್ಲಿ ಸಾಗಬೇಕಾಗಿರುವ ನಾಲ್ಕು ಜೀವಿತ
ಸ್ಥಿತಿಗಳಲ್ಲದೆ, ನಾನು ಹೆಚ್ಚು ನಾನು ಕಡಮೆಯೆಂದು ಬಡಿದಾಡಲು
ಏರ್ಪಟ್ಟ ನಾಲ್ಕು ಜಾತಿಗಳಲ್ಲವೆಂಬುದನ್ನು ವಿಚಾರಪರರಾದ ಸಕಲರೂ
ಗ್ರಹಿಸಬೇಕಾದುದು ಅತ್ಯವಶ್ಯಕ! ಈ ದೃಷ್ಟಿಯಿಂದ ವರ್ಣನಿರ್ಣಯವಾ
ಗತಕ್ಕುದೇ ಸ್ವಾಭಾವಿಕ ವಿಭಾಗವಾದುದರಿಂದ, ಆ ಸಂದರ್ಭದಲ್ಲಿ ರಕ್ತ
ಮಾಂಸಪೂರಿತವಾದ ಸ್ಥೂಲದೇಹಗಳು ಗಣನೀಯಗಳಾಗಲಾರವು. ಸ್ವ
ಭಾವಸಿದ್ಧವಾದ ಈ ಸ್ಥಿತಿಗಳು ಅಥವ ವರ್ಣಗಳು ಅವನವನ ಮಾನಸಿಕ
ಅಥವ ಆತ್ಮಿಕ ಬೆಳೆವಣಿಗೆಯಾದರಲ್ಲದೆ, ಬಡಿದಾಡಿದರೆ ವ್ಯತ್ಯಾಸವಾಗ
ತಕ್ಕುವಲ್ಲ. ಗುಣ ಕರ್ಮಾದಿಗಳಿಂದ ಮಾತ್ರವೇ ವ್ಯತ್ಯಾಸವಾಗಬೇ
ಕಾದ ಈ ಸ್ಥಿತಿಗಳನ್ನು ಧನಧಾನ್ಯಾದಿಗಳನ್ನೂ ಕುರಿಮೇಕೆಗಳನ್ನೂ ಸಂ
ಪಾದಿಸಿ ದೊಡ್ಡವನೆನ್ನಿಸಿಕೊಂಡು, ವಸ್ತ್ರಒಡವೆಗಳಿಂದ ದೇಹವನ್ನು
ಸಿಂಗರಿಸಿಕೊಂಡು, ವೃತ್ತಿವ್ಯವಹಾರಗಳಲ್ಲಿ ಕುಶಲನಾಗಿ ಸಂಪಾದಿಸಬೇ
ಕೆಂದರೆ ಅದು ಹೇಗೆ ಸಾಧ್ಯವಾದೀತು? ಮದ್ಯಪಾನ ಮಾಂಸಾಹಾರ

ವ್ಯಭಿಚಾರಾದಿ ದುರಾಚಾರಗಳಿಂದ ದೂಷಿತನಾಗಿರುವ ಒಬ್ಬನನ್ನು ಇಂದು ಸ್ನಾನಮಾಡಿಸಿ, ಶುಭವಸ್ತ್ರಗಳನ್ನು ಉಡಿಸಿ, ಅವನ ವೇಷ ಭೂಷಣಗಳನ್ನು ವ್ಯತ್ಯಾಸಪಡಿಸಲು ಸಾಧ್ಯವುಂಟು : ಆದರೆ ಅವನ ಗುಣಕರ್ಮಗಳೂ ಆಶಯವಾಸನೆಗಳೂ ವ್ಯತ್ಯಾಸವಾಗುವವರೆಗೆ ಅವನಲ್ಲಿ ಯಾವ ಅಭಿವೃದ್ಧಿಯೂ ಗೋಚರಿಸಲಾರದು. ಅವನಿಗೆ ಮಾಡುವ ಬಾಹ್ಯ ಅಲಂಕಾರಗಳೆಲ್ಲವೂ, ಹೆಂಡದಿಂದ ತುಂಬಿದ ಒಂದು ಗಡಿಗೆಯ ಹೊರಭಾಗವನ್ನು ಶುಭ್ರವಾಗಿ ತೊಳೆದು, ಅದಕ್ಕೆ ನಾಮಗಳನ್ನು ಬರೆದು ಹುವ್ವಿನ ಹಾರವನ್ನು ಹಾಕಿ, ಗಂಧ ಹಚ್ಚಿ ಪನ್ನೀರು ಚಿಮುಕಿಸಿ, ನೋಡಲು ಅಲಂಕಾರವಾಗಿರುವಂತೆ ಮಾಡಿದಂತಿರುವುದಲ್ಲದೆ ಅನ್ಯಥಾ ಇಲ್ಲ ! ಅಲ್ಲವೆ ?

ಸಧ್ಯದ ಪ್ರಪಂಚಸ್ಥಿತಿಯಲ್ಲಿ, ನಾಲ್ಕಲ್ಲ, ನಾಲ್ಕು ಸಾವಿರವಾಗಿರುವ ಈಗಿನ ಜಾತಿಕುಲಗಳ ಗಲಭೆಯಲ್ಲಿ ಯಾವನಿಗೂ ನಿಶ್ಚಯ ಧ್ಯೇಯವಿಲ್ಲವೆಂದರೆ ಅದು ಅಪರಾಧವಲ್ಲ. ಮೇಲ್ಕಂಡ ಸ್ವಾಭಾವಿಕ ಧ್ಯೇಯಗಳನ್ನನುಸರಿಸಿ, ಈಗ ಬ್ರಾಹ್ಮಣನಾರು, ಕ್ಷತ್ರಿಯನಾರು, ವೈಶ್ಯನಾರು, ಶೂದ್ರನಾರು ಎಂದು ಹೇಳುವಂತಿಲ್ಲ. ಜನ್ಮದಿಂದ ಪ್ರಾಪ್ತವಾದ ಜಾತಿಮತ ಭೇದಗಳು ಅರ್ಥಶೂನ್ಯವಾಗಿ, ಜನಾಂಗದಲ್ಲಿ ಪರಸ್ಪರ ಕಲಹಗಳನ್ನು ತಂದಿಡಲು ಕಾರಣವಾಗಿವೆಯಲ್ಲದೆ ಬೇರಲ್ಲ. ಮೇಲಿನ ಧ್ಯೇಯದಂತೆ ನಡೆಯುತ್ತಿದ್ದ ಸುವರ್ಣಯುಗದಲ್ಲಿ ಹಿಂದೂ ಸಮಾಜವು, ಸ್ವಯಂ ಪರಿಪುಷ್ಟವಾದ ಒಂದು ದೇಹದಂತಿದ್ದಿತು. ಪಾದಗಳು ಸರ್ವಾಧಾರವಾಗಿರಲು ಅವುಗಳ ಮೇಲೆ ತೊಡೆಸಡುವ್ರಗಳು ನಿಂತು ಮೇಲಿನ ದೇಹವನ್ನು ಧರಿಸುತ್ತಿದ್ದುವು. ಹೃದಯವೂ ಬಾಹುಗಳೂ ಅವುಗಳ ಸುರಕ್ಷಣೆಗೆ ಬೇಕಾದ ಸಾಮಗ್ರಿಗಳನ್ನು ಸಂಪಾದಿಸಿ, ಒದಗಿಸಿ ಪೋಷಿಸುತ್ತಿದ್ದುವು. ಶಿರವಾದರೋ ಆ ದೇಹಕ್ಕೆ ಸಾಧಕವಾವುದು ಬಾಧಕವಾವುದು, ಯಾವ ನಡೆವಳಿಕೆಯು ಉತ್ತಮವಾದುದು ಯಾವುದು ನೀಚವಾದುದು? ಮಾಡಬೇಕಾದ ಕಾರ್ಯವಾವುದು, ಮಾಡಕೂಡದುದಾವುದು ಎಂಬೀ ವಿವೇಚನೆಯಿಂದ ತನ್ನ ಕಣ್ಣು ಕಿವಿ ಬಾಯಿ ಮೂಗುಗಳನ್ನೂ, ಬಾಹುಹಸ್ತತೊಡೆ ಕಾಲುಗಳನ್ನೂ ಯುಕ್ತರೀತಿಯಿಂದ ನಡೆಯಿಸಿಕೊಂಡು ದೇಹಸೌಖ್ಯವನ್ನು ಕಾಪಾಡಿಕೊಂಡು ಪರಮಾರ್ಥವನ್ನು ಸಾಧಿಸುತ್ತಿದ್ದಿತು ಈಗಬಾದು

ರೋ ಹಾಗಿಲ್ಲ: ನಮ್ಮ ಹಿಂದೂಸಮಾಜದ ಒಂದೊಂದು ಅಂಗವೂ-ದೇಹ ವೆಂದರೆ ತಾನೇ ಎಂದು ಸ್ಥಾಪಿಸಲೆಳಸಿದೆ. ಪಾದಗಳಿಗೂ ಕಾಲುಗಳಿಗೂ ಸಂಬಂಧವಿಲ್ಲ. ಕಾಲುಗಳಿಗೂ ಹೃದಯಕ್ಕೂ ಸ್ನೇಹವಿಲ್ಲ. ಹೃದಯವು ಭುಜಗಳಿಗೂ ತಲೆಗೂ ದೇಹದ ಇತರ ಭಾಗಗಳಿಗೂ ರಕ್ತವನ್ನು ಒದಗಿಸಿ ಬೆಳೆವಣಿಗೆಯನ್ನುಂಟುಮಾಡಲು ಸಹಕರಿಸುವಂತಿಲ್ಲ. ತಲೆಯು ತನಗೆ ಇಷ್ಟಬಂದುದನ್ನು ತಿಂದು ಕುಡಿದು ಬುದ್ಧಿಕೆಟ್ಟುದರಿಂದ-ಈಗ ತಲೆಯು ಮಾತ್ರವಲ್ಲ-ದೇಹವೇ ಮನಬಂದಂತೆ ಕುಣಿಯತೊಡಗಿದೆ. ಇಂತಹ ಪರಿಸ್ಥಿತಿಯಲ್ಲಿ ಯುಕ್ತಮಾರ್ಗವು ಗೋಚರಿಸುವುದಾದರೂ ಹೇಗೆ? ಒಂದು ವೇಳೆ ಮಾರ್ಗವು ಗೋಚರಿಸಿದರೂ ದೇಹದ ಅಂಗಾಂಗಗಳಲ್ಲೇ ಐಕಮತ್ಯವಿಲ್ಲದಿರುವಾಗ, ಆ ಮಾರ್ಗವನ್ನು ಅನುಸರಿಸಿ ನಡೆವುದಾದರೂ ಹೇಗೆ?

ಹಿಂದಿನ ಆಸ್ಥಿತಿಯು ಪುನಃ ಪ್ರಾಪ್ತವಾಗಬೇಕೆಂಬ ಶುಭೋತ್ತರವೊಂದು ನಮ್ಮಲ್ಲಿದ್ದರೆ,ಅದಕ್ಕಾಗಿ ಇಂದು ಹೊರಗಿನಿಂದ ಸಹಾಯವನ್ನು ಅಪೇಕ್ಷಿಸುವುದು ವ್ಯರ್ಥವು! ಮೊದಲು ತಲೆಯು ಸುಸ್ಥಿತಿಯಲ್ಲಿ ನಿಂತು, ಯುಕ್ತಾಹಾರಪಾನೀಯಗಳಿಂದ ದೇಹಕ್ಕೆ ಬಲವನ್ನು ಕೊಟ್ಟು, ಯುಕ್ತಾಯುಕ್ತವಿವೇಚನೆಯಿಂದ ನಡೆಯಲು ಸಿದ್ಧವಾಗಬೇಕು. ಅಂಗಾಂಗಗಳೂ ಅದರೊಂದಿಗೆ ಸಹಕರಿಸಬೇಕು. ಹಾಗಲ್ಲದೆ, ತಲೆಯಮಾರ್ಗವೊಂದು ಕಾಲಿನಮಾರ್ಗವೊಂದು ಆದರೆ ಅಂತಹ ದೇಹವು ಏನುಗತಿಯಾದೀತು?ಸಂಸಾರದಲ್ಲಿ ಗಂಡನಧ್ಯೇಯವೊಂದು ಹೆಂಡತಿಯ ಧ್ಯೇಯವೊಂದು ಆದರೆ ಆ ಸಂಸಾರದ ಸ್ಥಿತಿಯು ಹೇಗಿದ್ದೀತು! ಈ ಸಂಗತಿಯನ್ನು ವಿಮರ್ಶಾಪೂರ್ವಕ ತಿಳಿಸುವುದೇ ಪ್ರಕೃತಗ್ರಂಥೋದ್ದೇಶವಾಗಿದೆ. ಇದನ್ನು ಕರ್ಣಾಟಕ ಭಾಷಾಭಿಮಾನಿಗಳು ತಮಗೆ ಸಹಜವಾದ ಆದರಭಾವದಿಂದ ಪರಿಗ್ರಹಿಸಬೇಕೆಂದು ಕೋರುತ್ತೇವೆ.

ಇಂದು ನಿನ್ನೆಯ ಮಾತಲ್ಲ: * ಇಪ್ಪತ್ನಾಲ್ಕನೆಯ ಚತುರ್ಯುಗ

---

* ಈಗ ನಡೆಯುತ್ತಿರುವುದು ಇಪ್ಪತ್ತೆಂಟನೆಯ ಚತುರ್ಯುಗದಲ್ಲಿ ಕಲಿಯುಗ. ಒಂದು ಚತುರ್ಯುಗಕ್ಕೆ ನಾಲ್ವತ್ತುಮೂರುಲಕ್ಷ ಇಪ್ಪತ್ತು ಸಹಸ್ರವರ್ಷಗಳು. ರಾಮಾವತಾರಕಾಲ ಇಪ್ಪತ್ನಾಲ್ಕನೆಯ ತ್ರೇತಾಯುಗ.

ದಲ್ಲಿ ತ್ರೇತಾಯುಗ ಪ್ರಾರಂಭಕಾಲ. ಗಂಗಾಪ್ರಾಂತದಲ್ಲೊಂದು ಆಶ್ರಮ. ಅದರಲ್ಲಿ ಋಷಿವರ್ಯನೊಬ್ಬನು ತನ್ನ ಶಿಷ್ಯರೊಂದಿಗೆ ತಪೋನಿರತನಾಗಿ ವಾಸಿಸುತ್ತಿದ್ದನು. ಆತನಿಗೆ ಗೌತಮನೆಂದು ಹೆಸರು.

ಗೌತಮಋಷಿಯು ಬಾಲ್ಯದಿಂದ ಗುರು ಶುಶ್ರೂಷೆ ಮಾಡಿ ಸಕಲ ವೇದಶಾಸ್ತ್ರಗಳಲ್ಲೂ ಶಿಕ್ಷಿತನಾದನು. ಸ್ನಾನಸಂಧ್ಯಾದಿಗಳನ್ನು ಯುಕ್ತಕಾಲಗಳಲ್ಲಿ ನೆರವೇರಿಸುತ್ತಾ ಸದಾ ಧ್ಯಾನ ಜಪತಪಗಳಲ್ಲಿ ನಿರತನಾಗಿರುವನು. ಆತನ ಗುರುಭಕ್ತಿಯೂ ಸಾಧು ಸ್ವಭಾವವೂ ಅಪಾರವಾದುವು. ಆತನು ಮಿತಭಾಷಿಯು. ಮಹಾ ಪ್ರಾಜ್ಞನಾಗಿದ್ದರೂ ನಿಗರ್ವಿಶಿರೋಮಣಿಯು. ಕಾಮಕ್ರೋಧಾದಿ ಷಡ್ವೈರಿಗಳು ಆತನ ಬಳಿ ಸುಳಿದುದಿಲ್ಲ. ಆತನು ಸಕಲೇಂದ್ರಿಯಗಳನ್ನೂ ಜಯಿಸಿ, ದೇಹಗ್ರಾಮವನ್ನು ಸ್ವಾಧೀನಗೊಂಡು ತೃಪ್ತಿ ಶಾಂತತೆಗಳನ್ನು ಗಳಿಸಿರುವನು. ತನಗಾಗಿ ಪಡೆಯಬೇಕಾದುದು ಲೋಕದಲ್ಲಿ ಏನೂ ಇಲ್ಲದಿರಲು, ಆತನು ಆಶಾತರುಣಿಯನ್ನು ದಾಸಿಯನ್ನಾಗಿಸಿಕೊಂಡು ಸದಾ ತೃಪ್ತನಾಗಿರುವನು.

ಗೌತಮನ ದೇಹಮನೋಬುದ್ಧಿಗಳು ಅಭಿವೃದ್ಧಿಗೊಂಡು ಪರಿಪೂರ್ಣಸ್ಥಿತಿಯನ್ನು ಹೊಂದಿದುವು. ಮುಂದೆ ಪ್ರಾಪಂಚಿಕವಾಗಿ ಸಾಧಿಸಬೇಕಾದ ಪ್ರಯೋಜನವಾವುದೂ ಇಲ್ಲದಿರಲು, ಗೌತಮ ಋಷಿಯು ಆತ್ಮಸಿದ್ಧಿಗಾಗಿ ತಪೋನಿರತನಾದನು. ಬ್ರಹ್ಮಚರ್ಯ ವ್ರತಸಿದ್ಧನೂ ಊರ್ಧ್ವರೇತಸ್ಕನೂ ಆದ ಆತನಿಗೆ ಅಸಾಧ್ಯವಾದುದಾವುದು? ಯೋಗಮಹಿಮೆಯಿಂದ * ಅಣಿಮ ಮಹಿಮ ಗರಿಮ ಲಘಿಮ ಪ್ರಾಪ್ತಿಃ ಪ್ರಾಕಾಮ್ಯ,

---

* ಈ ಎಂಟೂ ಯೋಗಸಿದ್ಧಿಗಳು. ಇವುಗಳಲ್ಲೊಂದೊಂದೂ ಒಂದೊಂದು ಬಗೆಯ ಮಹತ್ವದ ಶಕ್ತಿ ಸಾಮರ್ಥ್ಯಗಳನ್ನು ಒದಗಿಸಿಕೊಡುವುದು. ಇವುಗಳನ್ನು ಗಳಿಸಿದ್ದ ಸಿದ್ಧನು, ಅಣಿಮ ಎಂಬ ಸಿದ್ಧಿಯಿಂದ ತಾನು ಕಣ್ಣಿಗೂ ಕಾಣಿಸದಂತಹ ಅಣುಸ್ವರೂಪವನ್ನು ಹೊಂದಲೂ, ಇತರ ಎಂತಹ ಮಹತ್ತಾದ ವಸ್ತುವನ್ನಾಗಲೀ ಅಣುಸ್ವರೂಪವನ್ನಾಗಿಸಲೂ ಶಕ್ತನಾಗುವನು. ಮಹಿಮ ಎಂಬ ಸಿದ್ಧಿಯಿಂದ ಪರ್ವತದಂತೆ ಅಗಾಧವಾದ ರೂಪನ್ನು ಧರಿಸಬಲ್ಲವನಾಗುವನು. ಗರಿಮ ಎಂಬ ಶಕ್ತಿಯಿಂದ

ಈಶತ್ವ ವಶತ್ವ ಎಂಬ ಅಷ್ಟಸಿದ್ಧಿಗಳು ಆತನ ದಾಸ್ಯಕ್ಕೆ ಸಿದ್ಧವಾದುವು. ಋಷಿಯು ಅಷ್ಟಸಿದ್ಧಿಗಳಿಗೆ ಸ್ವಾಮಿಯಾಗಿ, ಅಗಾಧ ಶಕ್ತಿಸಾಮರ್ಥ್ಯಗಳನ್ನು ಗಳಿಸಿದ್ದರೂ, ಯಾವ ವಿಧವಾದ ವಿಕಾರಕ್ಕೂ ಒಳಗಾಗದೆ, ಎಂದಿನಂತೆ ತಪೋನಿರತನಾಗಿ ಶಿಷ್ಯರಿಗೆ ಪಾಠಪ್ರವಚನಾದಿಗಳನ್ನು ಹೇಳಿಕೊಂಡು ಆತ್ಮಸಿದ್ಧಿಗಾಗಿ, ನಿಯಮನಿಷ್ಠೆಗಳಿಂದ ತಪಸ್ಸನ್ನು ಆಚರಿಸುತ್ತಾ, ಕಾಲಯಾಪನೆ ಮಾಡುತ್ತಿದ್ದನು.

ಯೋಗಿಗಳನ್ನು ಕಂಡರೆ ನಮಗೆ ಆಶ್ಚರ್ಯವಾಗುವುದಕ್ಕೆ ಅವರು ನಮಗೆ ಅಸಾಧ್ಯವೆಂದು ತೋರುವ ಹಲವು ಬಗೆಯ ಅದ್ಭುತಕಾರ್ಯಗಳನ್ನು ಮಾಡಿ ತೋರಿಸುವುದೇ ಕಾರಣವಲ್ಲವೆ? ಆದರೂ ಆ ಬಗೆಯ ಅದ್ಭುತಕಾರ್ಯಗಳನ್ನು ಮಾಡುವುದು ಅವರಿಗೆ ಶ್ರೇಯಸ್ಸಾಧಕವಲ್ಲ. ಏಕೆಂದರೆ, ಜಗತ್ತಿಗೆ ವಿಲಕ್ಷಣವೆಂದೂ ಅಮಾನುಷವೆಂದೂ ತೋರುವ ಅಂತಹ ಒಂದೊಂದು ಅದ್ಭುತಕಾರ್ಯವನ್ನು ಮಾಡಿದಾಗಲೂ, ಅವರ ಯೋಗಸಾಮರ್ಥ್ಯವು ಅಷ್ಟು ಮಾತ್ರ ವೆಚ್ಚವಾಗುವುದು. ಯೋಗಿಯೊಬ್ಬನು ಒಂದೆರಡುವೇಳೆ ಅಂತಹ ಅಮಾನುಷಕಾರ್ಯಗಳನ್ನು ಮಾಡಿ

---

ಪರ್ವತದಂತೆ ಅಗಾಧಭಾರವಾದ ದೇಹವುಳ್ಳವನಾಗಬಲ್ಲನು. ಲಘಿಮ ಶಕ್ತಿಯಿಂದ ಅರಳೆಯಂತೆ ಅತ್ಯಂತ ಹಗುರವಾದ ದೇಹವುಳ್ಳವನಾಗಬಲ್ಲನು ಮತ್ತು ಇತರ ಯಾವವಸ್ತುವನ್ನೂ ಹಾಗೆಯೇ ಗುರುತ್ವ ಲಘುತ್ವವುಳ್ಳವನ್ನಾಗಿಸಬಲ್ಲನು. ಪ್ರಾಪ್ತಿಸಿದ್ಧಿಯಿಂದ ತಾನು ಅಪೇಕ್ಷಿಸಿದವಸ್ತುವು ಪ್ರಪಂಚದಲ್ಲಿಎಲ್ಲಿದ್ದರೂ ಕ್ಷಣಮಾತ್ರದಲ್ಲಿ ಪಡೆವ ಸಾಮರ್ಥ್ಯವನ್ನು ಗಳಿಸುವನು. ಪ್ರಾಕಾಮ್ಯಸಿದ್ಧಿಯಿಂದ ಇಷ್ಟಪಟ್ಟುದನ್ನು ತತ್ಕ್ಷಣದಲ್ಲೇ ಸೃಷ್ಟಿಸುವ ಶಕ್ತಿಯನ್ನು ಹೊಂದುವನು. ಈಶತ್ವಸಿದ್ಧಿಯಿಂದ ಸೃಷ್ಟಿಯಲ್ಲಿನ ಸ್ಥಾವರಜಂಗಮಾತ್ಮಕವಾದ ಸಮಸ್ತವಸ್ತುಗಳಮೇಲೂ, ತನ್ನ ಆಜ್ಞೆಯನ್ನು ಅವ್ಯಾಹತವಾಗಿ ನಡೆಯಿಸುವಂತಹ ಶಕ್ತಿಯನ್ನು ಹೊಂದುವನು. ವಶತ್ವಸಿದ್ಧಿಯಿಂದ ಆತನು ಸೃಷ್ಟಿಯಲ್ಲಿನ ನವನಿಧಿಗಳು, ಸಾರ್ವಭೌಮತ್ವಾದಿ ಅಧಿಕಾರ ಪದವಿಗಳು, ವಾಯುವೇಗ ಮನೋವೇಗಾದಿ ಸಾಮರ್ಥ್ಯಗಳು ಮುಂತಾದ ಯಾವುದನ್ನಾದರೂ ವಶಪಡಿಸಿಕೊಂಡು ತನ್ನ ಇಷ್ಟಬಂದಂತೆ ನಡೆಸುವ ಶಕ್ತಿಸಾಮರ್ಥ್ಯಗಳನ್ನು ಗಳಿಸುವನು.

ಜನಮೆಚ್ಚುಗೆಯನ್ನು ಪಡೆದನೆಂದರೆ, ಮುಂದೆ ಅವನ ಚಪಲಮನಸ್ಸು ಪುನಃ ಪುನಃ ಹಾಗೆಯೇ ಮಾಡಿ ಗೌರವಪ್ರತಿಷ್ಠೆಗಳನ್ನು ಪಡೆಯಬೇಕೆಂಬ ಆಕಾಂಕ್ಷೆಯನ್ನು ಅವನಲ್ಲಿ ಹುಟ್ಟಿಸುವುದು. ಒಡನೆ ಇಂದ್ರಜಾಲಕನಂತೆ ಅದೇ ಒಂದು ವೃತ್ತಿಯೋ ಎಂಬಂತೆ ಆ ಕಾರ್ಯಕ್ಕೆ ತೊಡಗಿ ಕೊನೆಗೆ ಶಕ್ತಿಹೀನನಾಗುವನು. ಆದುದರಿಂದ ಬಹುಕಷ್ಟಸಾಧ್ಯವಾದ ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿಗಳೆಂಬ ಅಷ್ಟಾಂಗಗಳಿಂದ ಯೋಗಸಾಧನೆಮಾಡಿ ಸಿದ್ಧಿಯನ್ನು ಗಳಿಸುವ ಮನುಷ್ಯನಿಗೆ ಆಸೆಯಾಗಲಿ ಮೋಹವಾಗಲಿ ಕೀರ್ತಿಪ್ರತಿಷ್ಠೆಗಳನ್ನು ಗಳಿಸಬೇಕೆಂಬ ಆಕಾಂಕ್ಷೆಯಾಗಲಿ ಲೇಶಮಾತ್ರವಿದ್ದರೂ, ಅಣುಮಾತ್ರವಿದ್ದರೂ ಅದು ಅವನನ್ನು ಅಧಃಪಾತಾಳಕ್ಕೆ ತಳ್ಳಲು ಕಾರಣವಾಗದಿರದು. ವಿಶ್ವಾಮಿತ್ರಮಹರ್ಷಿಯು ತಪಸ್ಸಿದ್ಧನಾದನು. ಈ ಅಷ್ಟಸಿದ್ಧಿಗಳನ್ನೂ ಗಳಿಸಿದನು. ಆದರೆ ಆತನ ಧ್ಯೇಯವು ಭಗವತ್ಪ್ರಾಪ್ತಿಯನ್ನು ಕುರಿತುದಾಗಿರಲಿಲ್ಲ. ಕೇವಲ ವಸಿಷ್ಠರ ಮೇಲಿನ ಹಗೆತನವನ್ನು ತೀರಿಸಿಕೊಳ್ಳಬೇಕೆಂಬುದೂ ಬ್ರಹ್ಮರ್ಷಿಪದವಿಯನ್ನು ಪಡೆಯಬೇಕೆಂಬುದೂ ಆತನ ಧ್ಯೇಯಗಳಾಗಿದ್ದುವು. ಹೀಗೆ ಕಾಮಕ್ರೋಧ ಮೋಹಗಳು ಬೀಜ ಸ್ವರೂಪದಿಂದ ಆತನ ಮನೋಮಾಯ ಕ್ಷೇತ್ರದಲ್ಲಿ ತಂಗಿದ್ದು, ಯೋಗಸಿದ್ಧಿಯಿಂದ ಶಕ್ತಿಸಾಮರ್ಥ್ಯಗಳನ್ನು ಗಳಿಸಿಕೊಂಡೊಡನೆಯೇ ಅವು ಪ್ರಬಲವಾಗಿ ಬೆಳೆದುವು. ಆತನು ಅವುಗಳ ಶಕ್ತಿಯಿಂದಲೇ ಬ್ರಹ್ಮಸೃಷ್ಟಿಗೆ ಪ್ರತಿಯಾಗಿ ಪುನಸ್ಸೃಷ್ಟಿಯನ್ನು ಮಾಡಿದನು. ಆದರೇನು ? ಅದು ಬ್ರಹ್ಮಸೃಷ್ಟಿಯಂತೆ ಸಾತ್ವಿಕಸೃಷ್ಟಿಯಾಗಿ ಪರಿಣಮಿಸಲಿಲ್ಲ. ರಾಜಸ ತಾಮಸ ಮನೋಭಾವದಿಂದ ಉಂಟಾದ ಸೃಷ್ಟಿಯದು. ಅದರಿಂದ ಆತನಿಗೆ ವಿಶೇಷ ತಪೋಹರಣವೂ ಮನೋವ್ಯಥೆಯೂ ಉಂಟಾದುವು.

ಮೇಲೆ ಹೇಳಿದ ಯಮನಿಯಮಾದಿ ಅಷ್ಟಾಂಗಗಳಿಂದ ಯೋಗಸಾಧನೆ ಮಾಡುವ ಅಭ್ಯಾಸಿಗೆ ಸಮಾಧಿಯು ಸಿದ್ಧಿಸಿತೆಂದರೆ ಮೇಲ್ಕಂಡಂತೆ ಅಣಿಮಾದಿ ಸಿದ್ಧಿಗಳೂ ಪ್ರಾಪ್ತಿಸುತ್ತವೆ. ಮನಸ್ಸಿನ ಸ್ಥಿತಿಬದಲಾವಣೆಗಾಗಿ ಅದೊಂದು ಸಂಧಿಕಾಲದಂತಿರುವುದು. ಆ ಸಂದರ್ಭದಲ್ಲಿ ಅವನ ಅಂತರಾಶಯವು ಉನ್ನತ ಧ್ಯೇಯವುಳ್ಳುದಾಗಿ ಭಗವತ್ಪರವಾಗಿದ್ದರೆ ಅಂಜ.

ನೇಯನಂತೆ ಆತನಿಂದ ಲೋಕಕ್ಕೆ ಅಗಾಧ ಪ್ರಯೋಜನವುಂಟಾಗುವು ವುದು. ಪ್ರಜೋಪಕಾರಕವಾದ ಮಹತ್ಕಾರ್ಯಸಾಧನೆಯಾಗುವುದು. ಹಾಗಲ್ಲದೆ ಅಂತರಾಶಯವು ಸ್ವಾರ್ಥಸಾಧಕವಾದುದಾದರೆ,ಅದು ಮೇಲೆ ಹೇಳಿದ ವಿಶ್ವಾಮಿತ್ರನ ಚರಿತ್ರೆಯಲ್ಲಿ ಕಂಡಂತೆ ಅಪವ್ಯಯವಾಗುವುದು. ಆದುದರಿಂದಲೇ ಯೋಗಸಿದ್ಧರು ತಮ್ಮಲ್ಲಿ ಅಡಗಿರುವ ಈ ಅಗಾಧಶಕ್ತಿಯನ್ನು ಲೇಶಮಾತ್ರವೂ ವ್ಯಯಗೊಳಿಸಲಿಷ್ಟಪಡದೆ, ಕೋಪಶಾಪಗಳಿಗೆ ವಶರಾಗದೆ ಅತ್ಯಂತ ಲೋಭದಿಂದ ಅದನ್ನು ರಕ್ಷಿಸಿಕೊಂಡಿರುವರು. ಈ ಅಷ್ಟಸಿದ್ಧಿಗಳೂ ಭಗವತ್ಪ್ರಾಪ್ತಿಗಾಗಿ ತಪೋನಿರತರಾಗಿರುವ ಯೋಗಿಗಳ ಬಳಿ ಕೈಜೋಡಿಸಿ, ಕಾದುನಿಂತು ಬೇಡಿಕೊಳ್ಳುತ್ತಿದ್ದರೂ ಸಾತ್ವಿಕ ಮನೋಭಾವವುಳ್ಳ ಆ ಮಹಾನುಭಾವರು ಅವುಗಳನ್ನು ಕಣ್ಣೆತ್ತಿಯೂ ನೋಡರು. ಅವುಗಳು ಸಮರ್ಪಿಸುವ ನವನಿಧಿಗಳನ್ನೂ ಮಹಾಚಲುವೆಯರಾದ ಅಪ್ಸರಸ್ತ್ರೀಯರನ್ನೂ ಇತರ ಹಲವು ಮನೋಮೋಹಕ ಭೋಗಗಳನ್ನೂ ಉಚ್ಚಿಷ್ಟದಂತೆ ಕಾಣುವರು. ವಮನವೋ ಎಂಬಂತೆ ಅಸಹ್ಯಭಾವದಿಂದ ನೋಡುವರು. ಆದರೆ ಅಲ್ಪಮತಿಗಳು ಇವುಗಳಿಂದ ಪ್ರಾಪ್ತವಾಗುವ ಅಲ್ಪಕೀರ್ತಿ-ಪ್ರತಿಷ್ಠೆಗಳಿಗಾಸೆಪಟ್ಟು ಮಹತ್ಪ್ರಯೋಜನವನ್ನು ಕಳೆದುಕೊಂಡು ಅಧೋಗತಿಗೆ ಇಳಿಯುವರು.

ಗೌತಮಮಹರ್ಷಿಯು ಮಾಡುತ್ತಿದ್ದ ತಪಸ್ಸಿಗೆ ಆತನಿಗೆ ಯಾವ ಪ್ರತಿಫಲಾಪೇಕ್ಷೆಯೂ ಇರಲಿಲ್ಲ. ಆತನು ನವನಿಧಿಗಳ ಸ್ವಾಮ್ಯವನ್ನಾಗಲೀ, ಭೂಸಾಮ್ರಾಜ್ಯದ ಒಡೆತನವನ್ನಾಗಲೀ ಬೇಡಲಿಲ್ಲ. ಆತನಿಗೆ ಕಥೆಗಳಲ್ಲಿ ಹೇಳುವಂತೆ ಇಂದ್ರಪದವಿ ಬ್ರಹ್ಮಪದವಿಗಳನ್ನು ಅಪಹರಿಸಬೇಕೆಂಬ ಆಕಾಂಕ್ಷೆಯಾದರೂ ಇರಲಿಲ್ಲ. ಹೀಗೆ ನಿಷ್ಕಾಮಿಯಾಗಿ ಮಾಡುವ ತಪಸ್ಸಿಗೆ ಯಾವ ಪದಾರ್ಥವೂ ಲಕ್ಷ್ಯವಾಗಿಲ್ಲದಿದ್ದಾಗ, ಅದಕ್ಕೆ ಸ್ವಾಭಾವಿಕವಾಗಿ ಪರಮಾತ್ಮನೇ ಲಕ್ಷ್ಯವಾಗಿರುವನು. ಆತ್ಮಸಿದ್ಧಿಯೇ ಅಂತಹ ನಿಷ್ಕಾಮತಪಸ್ಸಿನ ಸ್ವಾಭಾವಿಕ ಧ್ಯೇಯವಾಗಿ ನಿಲ್ಲುವುದು. ಆ ಧ್ಯೇಯವನ್ನು ಕುರಿತು ಸಾಧಕನು ಮನಸಾ ಇಚ್ಛಿಸಲಿ-ಇಚ್ಛಿಸದಿರಲಿ, ಅದರ ಸ್ವಾಭಾವಿಕಪ್ರಾಪ್ತಿಯೇನೋ ಆತ್ಮಸಿದ್ಧಿಯೇ! ಈ ಆತ್ಮಸಿದ್ಧಿಯಾಗುವ ಸ್ಥಿತಿಗೂ ಅಣಿಮಾದಿ ಯೋಗಸಿದ್ಧಿಗಳು ಲಭ್ಯವಾಗುವ ಸ್ಥಿತಿಗೂ ಮ

ಹದಂತರವುಂಟು. ಪ್ರಾಪಂಚಿಕರಾದ ನಾವು ಯೋಗಸಿದ್ಧರನ್ನೇ ಆತ್ಮಸಿದ್ಧರೆಂದು ಭ್ರಾಂತಿಗೊಳ್ಳುವುದುಂಟು. ಅಣಿಮಾದಿಸಿದ್ಧಿಗಳಿಗೆ ವಶರಾಗದೆ ಮೋಹಿತರಾಗದೆ ಮುಂದರಿಸಿ ಬಹುದೂರ ಸಾಗಿದರಲ್ಲದೆ ಆತ್ಮಸಿದ್ಧಿಯಾಗದು ! ಈ ಮಧ್ಯಮಾರ್ಗದಲ್ಲೇ ಸಾಧಕನಿಗೆ ಹಲವು ವಿಧ ಪರೀಕ್ಷೆಗಳಾಗುವುವು. ದೇಹದ ಒಂದೊಂದು ಇಂದ್ರಿಯಕ್ಕೂ ಒಬ್ಬೊಬ್ಬ ಅಭಿಮಾನಿದೇವತೆ ಇರುವನಲ್ಲವೆ ! ದೇಹಾಭಿಮಾನವನ್ನು ವಿಾರಿ ಮುಂದೆ ಹೋಗಲಾಸಿಸುವ ಸಾಧಕನ ಚೇತನ ಪಾರಿಶುದ್ಧ್ಯತೆಯನ್ನು ಕಂಡುಹಿಡಿಯುವುದಕ್ಕಾಗಿ, ಪಂಚೇಂದ್ರಿಯಗಳ ಅಭಿಮಾನಿದೇವತೆಗಳೂ, ಅವನನ್ನು ಬಹುತೀಕ್ಷ್ಣವಾದ ಅಗಾಧಪರೀಕ್ಷೆಗಳಿಗೆ ಒಳಪಡಿಸಿದಲ್ಲದೆ ಮುಂದಕ್ಕೆ ಬಿಡರು. ಅಂತಹ ಪರೀಕ್ಷೆಗಳಲ್ಲಿ ತೇರ್ಗಡೆಯಾಗುವದು ಸುಲಭವಲ್ಲ, ಕಷ್ಟ–ಬಹುಕಷ್ಟ ! ಈಗ ಅಣಿಮಾದಿ ಸಿದ್ಧಿಗಳಿಂದ ಮೋಹಿತನಾಗದೆ, ಆತ್ಮತತ್ವಾನ್ವೇಷಣೆಗಾಗಿ ಮುಂದರಿಸಿದ ಗೌತಮಮಹರ್ಷಿಯ ದಾರ್ಢ್ಯವನ್ನೂ ಬ್ರಹ್ಮೇಂದ್ರಾದಿ ದೇವತೆಗಳು ಹಾಗೆಯೇ ಪರೀಕ್ಷಿಸತೊಡಗಿದರು. ಅಸೂಯೆಯಿಂದಲಲ್ಲ. ಮಹಾತೇಜಸ್ವಿಗಳೂ ಮಹಿಮಾನ್ವಿತರೂ, ಲೋಕಪಾಲಕರೂ ಆದ ದೇವತೆಗಳಿಗೂ ಅಸೂಯೆ ದಂಭ ಮೋಹಾದಿ ಕಶ್ಮಲಗಳುಂಟೆ ? ಅಲ್ಲ. ಉನ್ನತಪದವಿಯನ್ನು ಹೊಂದಲಾಸಿಸುವ-ಅಂತಹ ಮಹೋನ್ನತಸ್ಥಾನಕ್ಕೆ ಏರಲಪೇಕ್ಷಿಸುವ ಆ ಜೀವನಿಗೆ ತಕ್ಕ ಯೋಗ್ಯತೆಯಿದೆಯೇ ? ಆ ಸ್ಥಾನವನ್ನು ದಕ್ಕಿಸಿಕೊಳ್ಳಬಲ್ಲಸಾಮರ್ಥ್ಯವಿದೆಯೇ ? ಲೋಪದೋಷಗಳೇನೂ ಇಲ್ಲದೆ ಅವನು ಶುದ್ಧನಾಗಿರುವನೇ ಎಂದು ಮುಂತಾಗಿ ದೃಢಪಡಿಸಿಕೊಳ್ಳುವುದಕ್ಕಾಗಿ ಮಾತ್ರ ಈ ಪರೀಕ್ಷೆಗಳು ನಡೆಯುವುವು. ಇದು ಅನಿವಾರ್ಯವು !

ಗೌತಮಋಷಿಯನ್ನು ವಿಷಯಪಾಶಕ್ಕೆ ಒಳಪಡಿಸಿ, ಆತನು ಅನುಸರಿಸುತ್ತಿರುವ ಮಾರ್ಗದಿಂದ ಹಿಂದಿರುಗುವಂತೆ ಮಾಡಲು ಉಪಾಯವುಂಟೇ ? ಹಾಗಿದ್ದರೆ ಆ ಮಾರ್ಗವಾವುದು ಎಂಬುದನ್ನು ಯೋಚಿಸಲು ಇಂದ್ರಿಯಾಭಿಮಾನಿಗಳಾದ ದೇವತೆಗಳೆಲ್ಲರೂ ಒಂದೆಡೆ ಕಲೆತರು. ಆತನ ದರ್ಶನೇಂದ್ರಿಯ, ಶ್ರೋತ್ರೇಂದ್ರಿಯ, ಘ್ರಾಣೇಂದ್ರಿಯ, ರಸನೇಂದ್ರಿಯ ಸ್ಪರ್ಶೇಂದ್ರಿಯಗಳೆಂಬ ಈ ಪಂಚೇಂದ್ರಿಯಗಳನ್ನೂ ಆಕರ್ಷಿಸುವಂತಹ

ವಿಷಯಸಾಮಗ್ರಿಗಳನ್ನು ಒದಗಿಸಿ, ಆತನನ್ನು ಭೋಗತತ್ಪರನನ್ನಾಗಿ ಮಾಡಬಹುದೆಂದು ಒಂದು ಸಲಹೆಬಂತು. ಆತನಿಗೆ ವಿಶೇಷ ಧನಕನಕಾದಿ ಭೋಗಸಾಧನಗಳನ್ನೊದಗಿಸಿ ಆಶಾಮೋಹಿತನಾಗುವಂತೆ ಮಾಡಬೇಕೆಂದು ಕೆಲವರು ಹೇಳಿದರು. ಆದರೆ ಅಂತಹ ಜಿತೇಂದ್ರಿಯನನ್ನು ಪುನಃ ವಿಷಯಪಾಶಗಳಿಂದ ಬಂಧಿಸಲು ಆ ಕ್ಷುದ್ರ ವಸ್ತುಗಳು ಶಕ್ತವಾಗಲಾರವೆಂದು ನಿರಾಕರಿಸಲ್ಪಟ್ಟುವು. ಕೊನೆಗೆ, ಲೋಕದಲ್ಲಿ ಮಾನವ ಪ್ರಾಣಿಯನ್ನು ಸಕಲ ವಿಧ ತಾಪತ್ರಯಗಳಿಗೂ ಗುರಿಪಡಿಸಿ, ಪ್ರಪಂಚಕ್ಕೆ ಕಟ್ಟುಬಿದ್ದಿರುವಂತೆ ಮಾಡುವುದರಲ್ಲಿ ಹೆಣ್ಣುಹೊನ್ನುಮಣ್ಣುಗಳು ಮುಖ್ಯವಾದುವು. ಅವುಗಳಲ್ಲೂ ಹೆಣ್ಣನ್ನು ಹೊನ್ನುಮಣ್ಣುಗಳೆರಡೂ ಆಶ್ರಯಿಸಿರುವುವು. ಒಬ್ಬನು, ಹೆಣ್ಣಿನ ವಿಷಯದಲ್ಲಿ ಮೋಹಿತನಾಗಿ ಮರುಳನಾದನೆಂದರೆ, ಮುಂದೆ ಅವನು ಹೊನ್ನು, ಮಣ್ಣು (ಭೂಮಿ-ಸ್ವಾಸ್ಥ್ಯ) ಗಳನ್ನು ಪ್ರತ್ಯೇಕವಾಗಿ ಅಪೇಕ್ಷಿಸಬೇಕಾದುದಿಲ್ಲ. ಅಲ್ಲದೆ ಸ್ತ್ರೀವಿಷಯಕ ಮೋಹವು ಅವೆರಡಕ್ಕಿಂತಲೂ ಹೆಚ್ಚು ಆಕರ್ಷಕವಾದುದು. ಬರಬರುತ್ತಾ ಬಹುಬಲವತ್ತರವಾದ ಬಂಧನವಾಗಿ ಪರಿಣಮಿಸುವುದು. ವಿಶ್ವಾಮಿತ್ರನ ವಿಷಯದಲ್ಲಿ ಇದು ಸಾಧ್ಯವಾಗಿದೆ. ಆದುದರಿಂದ ಅವಿವಾಹಿತನಾದ ಆತನನ್ನು ಪರೀಕ್ಷೆಗಿಟ್ಟು ನೋಡಬಹುದಲ್ಲವೆ ?'' ಎಂದು ಕೆಲವರು ಸಲಹೆಯಿತ್ತರು. ಅದು ಸಕಲರಿಗೂ ಯುಕ್ತವಾದುದೆಂದು ತೋರಿತು. ಆ ವಿಷಯದಲ್ಲಿ ತಮಗೆ ಸಹಾಯಮಾಡಬೇಕೆಂದು ಬ್ರಹ್ಮದೇವನನ್ನು ಪ್ರಾರ್ಥಿಸಲಿಕ್ಕಾಗಿ ಇಂದ್ರಾದಿಗಳೆಲ್ಲರೂ ಬ್ರಹ್ಮಲೋಕಕ್ಕೆ ನಡೆದು ಪಿತಾಮಹನನ್ನು ಕಂಡರು.

ಇಂದ್ರನು–' ಪಿತಾಮಹ, ಭೂಲೋಕದಲ್ಲಿ ಗೌತಮ ಋಷಿಯು ಹಿಂದೆ ವಿಶ್ವಾಮಿತ್ರನು ಸಾಧಿಸಿದಂತೆ ಅಣಿಮಾದಿ ಅಷ್ಟಸಿದ್ಧಿಗಳನ್ನೂ ಸಾಧಿಸಿ, ಇನ್ನೂ ತಪಸ್ಸನ್ನು ಬಿಡದೆ ಮುಂದರಿಸುತ್ತಿರುವನು. ಆತನ ಧ್ಯೇಯವು ಇನ್ನೂ ಅಗಾಧವಾದುದೂ ಉನ್ನತವಾದುದೂ ಇರಬಹುದು. ಸೃಷ್ಟ್ಯಾದಿಯಲ್ಲಿ ಮಾನುಷ ಶಕ್ತಿಗಳಿಂಥವು, ದೈವೀಶಕ್ತಿಗಳಿಂಥವು ಎಂದು ನಿನ್ನಿಂದಲೇ ನಿಶ್ಚಯಿಸಲ್ಪಟ್ಟಿದೆಯಲ್ಲವೆ ? ಈಗ ಮನುಷ್ಯನೊಬ್ಬನು ತನ್ನ ತಪಸ್ಸಾಮರ್ಥ್ಯದಿಂದಲೂ, ಬ್ರಹ್ಮಚರ್ಯಬಲದಿಂದಲೂ ಮಾನುಷ ಶಕ್ತಿ

ಗಳನ್ನೆಲ್ಲಾ ಗಳಿಸಿ ಇನ್ನೂ ಮುಂದರಿದನೆಂದರೆ ಮುಂದೆ ನಮ್ಮ ಶಕ್ತಿ
ಗಳಲ್ಲಿ ಪಲ್ಲಟವುಂಟಾಗದಿರದು. ನಮ್ಮನ್ನು ಲೋಕಪಾಲನೆಗೆಂದು ನಿಯ
ಮಿಸಿದ ಭವದೀಯ ಉದ್ದೇಶಕ್ಕೂ ವಿಘ್ನಬಾರದಂತಾಗುವುದು. ನಮ್ಮ
ಶಕ್ತಿಗೂ—ಪ್ರಾಪಂಚಿಕವಾದ ಸ್ವಾಭಾವಿಕ ಕಾರ್ಯಕಲಾಪಗಳಿಗೂ ಒಂ
ದು ಸ್ಥಳದಲ್ಲಿ ಕುಂದಕವುಂಟಾಯಿತೆಂದರೆ ಮುಂದೆ ಅದರಿಂದ ಲೋಕ
ಕ್ಷೇಮಕ್ಕೇ ಅಪಾಯ ಸಂಭವಿಸೀತು. ಆದುದರಿಂದ ಲೋಕ ಹಿತದೃಷ್ಟಿ
ಯಿಂದ ಒಬ್ಬ ಮಾನುಷ ವ್ಯಕ್ತಿಯಲ್ಲಿ ಅಲೌಕಿಕ ಶಕ್ತಿ ಸಾಮರ್ಥ್ಯಗಳು
ಸೇರುವುದು ಯೋಗ್ಯವಲ್ಲ. ಈ ವಿಷಯವು ಚಿತ್ತಕ್ಕೆ ವೇದ್ಯವಿರಬೇಕು.'
ಎಂದು ವಿನೀತನಾಗಿ ಬಿನ್ನವಿಸಿದನು. ಆ ಯೋಚನೆಯು ಸೂಕ್ತವಾದು
ದೆಂದು ಬ್ರಹ್ಮದೇವನಿಗೂ ತೋರಿತು. ಆಗಲಾ ಪಿತಾಮಹನು-'ದೇವ
ರಾಜ, ನಿನ್ನ ಯೋಚನೆಯು ಸಾಧುವಾದುದು. ಅದರ ಸಾಧನೆಗಾಗಿ
ನೀವು ಯೋಚಿಸಿರುವ ಸಾಮಗ್ರಿಯೂ ಯುಕ್ತವಾದುದೇ ! ಆಗಲಿ ಈ
ವಿಷಯವನ್ನು ಕುರಿತು ಗಮನಿಸುತ್ತೇನೆ. ನೀವು ನಿಶ್ಚಿಂತರಾಗಿರಿ'
ಎಂದು ಅವರನ್ನು ಸ್ವಸ್ಥಾನಗಳಿಗೆ ಕಳುಹಿಸಿದನು.

ತರುವಾಯ ಬ್ರಹ್ಮದೇವನು, ರಂಭೆ ಊರ್ವಶಿ ಮೇನಕೆ ತಿಲೋ
ತ್ತಮೆ ಮುಂತಾದ ಅಪ್ಸರ ಸ್ತ್ರೀಯರನ್ನು ರೂಪಲಾವಣ್ಯಾದಿಗಳಲ್ಲಿ ಹೀ
ಯಾಳಿಸುವಂತಹ ಒಬ್ಬ ದಿವ್ಯ ಸುಂದರ ಸ್ತ್ರೀ ರತ್ನವನ್ನು ಸೃಷ್ಟಿಸಿದನು.
ಪೃಥ್ವಿಯಲ್ಲಿ ಆವರೆಗೆ ಸೃಷ್ಟಿಸಿದ ಸುಂದರ ಪದಾರ್ಥಗಳೆಂಬುವು ಎಷ್ಟಿ
ದ್ದುವೋ ಅವೆಲ್ಲವುಗಳ ಅಂಶವನ್ನೂ ತೆಗೆದುಕೊಂಡು ಆಕೆಯ ಅಂಗಾಂಗ
ಗಳನ್ನು ರೂಪಿಸಿದನು. ಪುಷ್ಪಗಳಲ್ಲಿ ಕಮಲ ಚಂಪಕಾದಿಗಳು, ವೃಕ್ಷಗ
ಳಲ್ಲಿ ಕದಳೀ, ಲತೆಗಳಲ್ಲಿ ಜಾಜಿಮಲ್ಲಿಗೆಗಳು, ಪಕ್ಷಿಗಳಲ್ಲಿ ನವಿಲು ಕೋಗಿ
ಲೆಹಂಸೆಗಳು, ಮೃಗಗಳಲ್ಲಿ ಜಿಂಕೆ ಆನೆ ಸಿಂಹಗಳು, ಲೋಹಗಳಲ್ಲಿ
ಸುವರ್ಣ, ಅಲ್ಲದೆ ಮುತ್ತು ಹವಳ ಶಂಖ ಮುಂತಾದ ಇತರ ಅನೇಕ
ಸುಂದರ ವಸ್ತುಗಳು ಇವೆಲ್ಲವುಗಳ ಸೌಂದರ್ಯ ಭಾಗವಾವುದೋ ಅದ
ನ್ನೆಲ್ಲಾ ಏಕತ್ರ ಸಂಗ್ರಹಿಸಿ ಆಕೆಯ ಶರೀರದ ಸೌಂದರ್ಯ ಸಂಪೂರ್ಣ
ತೆಗಾಗಿ ವಿನಿಯೋಗಿಸಿದನು. ಒಟ್ಟಿನ ಮೇಲೆ ಆ ಸ್ತ್ರೀಪ್ರತಿಮೆಗೆ
ಸಾಟಿಯಾಗುವ ಮತ್ತೊಬ್ಬ ಸ್ತ್ರೀಯನ್ನು ಆವರೆಗೆ ತಾನು ಸೃಷ್ಟಿಸಿರ

ಲಿಲ್ಲವೆಂದು ಬ್ರಹ್ಮದೇವನಿಗೇ ಅತಿಶಯ ತೃಪ್ತಿಯುಂಟಾಯಿತು. ಆಕೆಯ ದೇಹದ ಸರ್ವಾಂಗಗಳೂ ಪರಿಪುಷ್ಟವಾಗಿ ಮನೋಹರವಾಗಿದ್ದವು ಆಕೆಯ ಅಮಾನುಷ ರೂಪಸಂಪತ್ತಿಯನ್ನು ಕಂಡು ಸಂತುಷ್ಟನಾದ, ಬ್ರಹ್ಮದೇವನು ಆಕೆಯನ್ನು ಅಹಲ್ಯಾ* ಎಂದು ಸಂಬೋಧಿಸಿದನು. ಅದು ಆಕೆಗೆ ಅಂಕಿತನಾಮ ಮಾತ್ರವಲ್ಲ. ಅನ್ವರ್ಥನಾಮವಾಗಿಯೂ ಒಪ್ಪಿತು.

---

ಅಧ್ಯಾಯ ೨. "ಭೂಪ್ರದಕ್ಷಿಣೆ"

ಬ್ರಹ್ಮದೇವನು ಅಹಲ್ಯೆಯನ್ನು ಸೃಷ್ಟಿಸಿದುದು ಗೌತಮರನ್ನು ಉದ್ದೇಶಿಸಿ ಅಲ್ಲವೆ? ಆದರೆ ಆಕೆಯನ್ನು ಗೌತಮರಲ್ಲಿಗೆ ಸೇರಿಸುವುದು ಹೇಗೆ? ಜಗತ್ತಿನ ಸೌಂದರ್ಯಸಾರವೋ ಎಂಬಂತೆ ಬಹುಪ್ರಯತ್ನಪೂರ್ವಕ ಸೃಷ್ಟಿಸಿದ ತನ್ನ ಆ ಪ್ರೇಮಪುತ್ರಿಯನ್ನು ವಿಧ್ಯುಕ್ತರೀತಿಯ ವಿವಾಹದಿಂದ ಅಲ್ಲದೆ, ಮೇನಕೆ ರಂಭೆ ಮುಂತಾದ ಅಪ್ಸರೆಯರು ವಿಶ್ವಾಮಿತ್ರನ ತಪೋವಿಘ್ನಕಾರಿಗಳಾಗಿ ಕಳುಹಿಸಲ್ಪಟ್ಟಂತೆ—ಈಗ ಆಕೆಯನ್ನು ಗೌತಮರಲ್ಲಿಗೆ ಕಳುಹಿಸಲು, ಬ್ರಹ್ಮದೇವನಿಗೆ ಇಷ್ಟಬರಲಿಲ್ಲ. ಆದರೆ ಉಗ್ರತಪೋನಿರತರಾದ ಗೌತಮರಲ್ಲಿಗೆ ಆಕೆಯನ್ನು ವಿವಾಹರೂಪದಿಂದ ಸೇರಿಸುವುದೆಂತು ?

ಬ್ರಹ್ಮದೇವನು ಕ್ಷಣಕಾಲಯೋಚಿಸಿ, ಕಶ್ಯಪಾದಿ ಮಹರ್ಷಿಗಳ ಮೂಲಕ ಈ ಕಾರ್ಯವನ್ನು ಸಾಧಿಸಬೇಕೆಂದು ನಿಶ್ಚಯಿಸಿದನು. ಉತ್ತರಕ್ಷಣದಲ್ಲೇ ಕಶ್ಯಪ, ಅತ್ರಿ, ಭಾರಧ್ವಾಜ, ವಸಿಷ್ಠ, ಜಮದಗ್ನಿ ಮುಂತಾದವರು ಅಂತರ್ಯಪ್ರೇರಿತರಾಗಿ ಬ್ರಹ್ಮದೇವನಲ್ಲಿಗೆ ಬಂದು, ಸರ್ವಲೋಕಪಿತಾಮಹನಾದ ಆತನಿಗೆ ವಂದಿಸಿ ಕುಳಿತರು. ಆಗಲಾತನು ಅವರೆಲ್ಲರನ್ನೂ ಉಚಿತರೀತಿಯಿಂದ ಆದರಿಸಿ, ಗೌತಮಋಷಿಯ ತಪಸ್ಸಾಮರ್ಥ್ಯವನ್ನೂ ಅದನ್ನು ಕುರಿತು, ಲೋಕಕ್ಷೇಮಾಕಾಂಕ್ಷಿಯಾದ ಇಂದ್ರನಿಗುಂಟಾದ ಭಯವನ್ನೂ ಆತನ ಪ್ರಾರ್ಥನೆಯಮೇರೆಗೆ ತಾನು ಗೌತಮ

---

* ಹಲ ನೇಗಿಲು, ಹಲ್ಯಾ = ದೊಂಕಾದುದು, ಅಹಲ್ಯಾ = ದೊಂಕಿಲ್ಲದುದು.

ತನ್ನೇ ಉದ್ದೇಶಿಸಿ ಸೃಷ್ಟಿಸಿರುವ ಅಹಲ್ಯಾಕುಮಾರಿಯ ವಿಚಾರವನ್ನೂ ಹೇಳಿದನು. ಮತ್ತು—'ಮಹರ್ಷಿಗಳೇ ತಪೋಮಗ್ನನಾಗಿರುವ ಆತನಿಗೆ ಗೃಹಸ್ಥಧರ್ಮದ ಪರಿಚಯವಿಲ್ಲ. ಈಗ ನೀವು ನಿಮ್ಮ ಪತ್ನಿಯರೊಂದಿಗೆ ಆತನ ಆಶ್ರಮಕ್ಕೆ ಹೋಗಿ ಗೃಹಸ್ಥಧರ್ಮದ ಶ್ರೇಷ್ಠತೆಯನ್ನೂ ಆವಶ್ಯಕತೆಯನ್ನೂ ಬೋಧಿಸಿ ಆತನನ್ನು ವಿವಾಹಕ್ಕೆ ಒಪ್ಪಿಸಿರಿ' ಎಂದನು. ಕಶ್ಯಪಾದಿಗಳು ಪಿತಾಮಹನ ಆಜ್ಞೆಯನ್ನು ಶಿರಸಾವಹಿಸಿ, ಅಲ್ಲಿಂದ ತಮ್ಮ ತಮ್ಮ ಪತ್ನೀಸಮೇತರಾಗಿ ಗೌತಮರ ಆಶ್ರಮಕ್ಕೆ ಬಂದರು.

ಏಕಕಾಲದಲ್ಲಿ ತಮ್ಮ ಆಶ್ರಮಕ್ಕೆ ಕುಟುಂಬ ಸಮೇತರಾಗಿ ಅಷ್ಟು ಮಂದಿ ಪುಣ್ಯಶ್ಲೋಕರಾದ ಮಹರ್ಷಿಗಳು ದಯಮಾಡಿಸಿದುದಕ್ಕಾಗಿ ಗೌತಮರಿಗೆ ಪರಮಾಶ್ಚರ್ಯದೊಂದಿಗೆ ಆನಂದವೂ ಆಯಿತು. ಮಹರ್ಷಿಗಳೆಲ್ಲರನ್ನೂ ಉಚಿತರೀತಿಯಿಂದ ಎದುರುಗೊಂಡು ಮೃದುವಾಕ್ಯಗಳಿಂದ ಅರ್ಘ್ಯಪಾದ್ಯಾದಿಗಳನ್ನಿತ್ತು ಆದರಿಸಿ ಉಪಚರಿಸಿದರು. ಆದರೆ ನೈಷ್ಠಿಕ ಬ್ರಹ್ಮಚರ್ಯ ವ್ರತದಲ್ಲಿರುವ ತಾವು ಸಾಧ್ವಿಯರಾದ ಆ ಋಷಿಪತ್ನಿಯರನ್ನು ಆದರಿಸುವ ಪರಿಯೆಂತು ? ಮನಸ್ಸಿಗೆ ಬಹು ಸಂಕೋಚವೆನ್ನಿಸಿತು. ಆದರೂ ಅದನ್ನು ಮೇಲೆ ತೋರ್ಪಡಿಸಿಕೊಳ್ಳದೆ ಮಾತೃಸ್ವರೂಪಿಣಿಯರಾದ ಅವರನ್ನೂ ಯಥಾಸಾಧ್ಯವಾಗಿ ಪೂಜಿಸಿ ಎಲ್ಲರಿಗೂ ಕಂದಮೂಲಫಲಾದಿಗಳನ್ನಿತ್ತು ಆದರಿಸಿದರು. ಅವರ ಆತಿಥ್ಯದಿಂದ ಸಂತುಷ್ಟರಾದ ಆ ಮಹರ್ಷಿಗಳು ಗೌತಮರ ಸೌಜನ್ಯಕ್ಕಾಗಿ ಅವರನ್ನು ಶ್ಲಾಘಿಸಿ—'ಋಷಿವರ್ಯ, ನಿಮ್ಮ ತಪಸ್ಸು ಅಮೋಘವಾದುದು. ತಪೋಧನಸಂಪಾದನೆಗಾಗಿ ಈವರೆಗೆ ಬಹುಕಷ್ಟಪಟ್ಟಿರುವಿರಿ. ಬ್ರಹ್ಮಚರ್ಯವ್ರತಧಾರಿಗಳಾಗಿ ಗುರುಕುಲವಾಸಮಾಡಿ ಸಾಂಗವಾಗಿ ವೇದಾಧ್ಯಯನಮಾಡಿದ ನೀವು ಇನ್ನು ಗೃಹಸ್ಥಾಶ್ರಮ ಸ್ವೀಕಾರಮಾಡಿ ಅತಿಥಿ ಅಭ್ಯಾಗತರ ಶುಶ್ರೂಷೆಮಾಡತಕ್ಕುದು ಯುಕ್ತವು. ಅಷ್ಟುಮಾತ್ರವಲ್ಲ. ಯಜ್ಞಹೋಮಾದಿಗಳಿಂದ ದೇವಋಣವನ್ನೂ ಅಧ್ಯಯನ ಅಧ್ಯಾಪನಾದಿಗಳಿಂದ ಋಷಿಋಣವನ್ನೂ ವಂಶೋದ್ಧಾರಕ ಸಂತಾನದಿಂದ ಪಿತೃಋಣವನ್ನೂ ತೀರಿಸತಕ್ಕುದು ಕರ್ತವ್ಯವು. ಋಷಿವರಾ,ದ್ವಿಜನಾಗಿದ್ದೂ ಪಂಚಮಹಾಯಜ್ಞಗಳಿಂದ ಭೂತತೃಪ್ತಿಯನ್ನುಂಟುಮಾಡದಿದ್ದರೆ ವೇದಾಧ್ಯ

ಯನಾದಿಗಳಿಂದಲಾದರೂ ಸಾರ್ಥಕವೇನಾಯಿತು ! ಇದೇನು ನಿಮಗೆ ಗೋಚರವಿಲ್ಲವೆ ! ನಾವು ಹೀಗೆ ಹೇಳಿದೆವೆಂದು ಮನಸ್ಸಿಗೆ ಬೇಸರಪಟ್ಟು ಕೊಳ್ಳದಿರಿ ' ಎಂದರು.

ಆ ಮಾತನ್ನು ಕೇಳಿದ ಗೌತಮರು–'ಮಹರ್ಷಿವರ್ಯರೆ, ತಮ್ಮ ಸಲಹೆಯು ಸಾಧುವಾದುದು. ಆದರೆ, ಆತ್ಮಸಿದ್ಧಿಗಾಗಿ ಮಾಡುತ್ತಿರುವ ನನ್ನ ತಪಸ್ಸಿಗೆ ಪತ್ನೀಪುತ್ರಾದಿಗಳ ಸಂಡಣೆಯು ವಿಘ್ನಕಾರಿಯಾಗಿ ಪರಿಣಮಿಸಬಹುದೆಂದು ಶಂಕಿಸುತ್ತೇನೆ' ಎಂದು ಪ್ರತ್ಯುತ್ತರವಿತ್ತರು. ಅದನ್ನು ಕೇಳಿ ಕಶ್ಯಪರು–' ಗೌತಮರೇ, ಹಾಗೆ ಶಂಕಿಸತಕ್ಕುದು ಸಮನಲ್ಲ. ಅದು ನೀವು ಅನನುಭವದಿಂದ ಹೇಳುವ ಮಾತಾಗಿದೆ. ಈಗ ನೋಡಿ, ನನಗೆ ಪತ್ನೀಪುತ್ರಾದಿಗಳಿಲ್ಲವೆ ? ಇಲ್ಲಿರುವ ಅತ್ರಿ ಮಹರ್ಷಿಗಳಿಗಿಲ್ಲವೆ? ವಸಿಷ್ಠರಿಗಿಲ್ಲವೇ?ಭರದ್ವಾಜರು ಏಕಾಂಗಿಗಳೇ!ಜಮದಗ್ನಿ ಮಹರ್ಷಿಗಳೇನು–ಸಪತ್ನೀಕರಲ್ಲವೆ?ನಾವೆಲ್ಲರೂ ಗೃಹಸ್ಥ ಧರ್ಮದಲ್ಲೇನಿರತರಾಗಿದ್ದೇವಲ್ಲವೆ ? ವಿಧ್ಯುಕ್ತಗಳಾದ ಆಶ್ರಮ ಧರ್ಮಪಾಲನೆಯಿಂದ ಯಾವ ದೋಷವೂ ಸಂಭವಿಸದು. ವಿವಾಹದಿಂದ ನಿಮ್ಮ ತಪಸ್ಸಿಗೆ ವಿಘ್ನವುಂಟಾಗುವುದೆಂದೂ ರೂ ಶಂಕಿಸಬೇಡಿ. ಸುಶೀಲೆಯಾದ ಭಾರ್ಯಾರತ್ನದಿಂದ ಅಲಂಕೃತನಾದ ಪುರುಷನ ಭಾಗ್ಯಕ್ಕೆಣೆಯುಂಟೆ? ಋಷಿವರ್ಯ ನಿಮಗೊಂದು ರಹಸ್ಯವನ್ನು ಹೇಳುವೆನು ಕೇಳಿ! ನಾವು ಈಗಲೇ ಬ್ರಹ್ಮಲೋಕದಿಂದ ಬರುತ್ತಿದ್ದೇವೆ. ಬ್ರಹ್ಮದೇವನು ನೂತನವಾಗಿ ಒಂದು ಕನ್ಯಾರತ್ನವನ್ನು ಸೃಷ್ಟಿಸಿದ್ದಾನೆ. ಆಕನ್ಯೆಯು ನಿಮಗೆ ಅನುರೂಪಳಾಗಿದ್ದಾಳೆ. ಪಿತಾಮಹನು, ಆಕೆಯ ಪಾಣಿಗ್ರಹಣ ಮಾಡಬಲ್ಲ ವರಶ್ರೇಷ್ಠರ ಅನ್ವೇಷಣೆಗಾಗಿ ಒಂದು ಪಂಥವನ್ನು ವಿಪಡಿಸಿದ್ದಾನೆ. ಅದು ಯುಕ್ತಿ ಶಕ್ತಿಗಳ ನಿರ್ಣಯಮಾಡತಕ್ಕುದಾಗಿದೆ. ಎಂತೂ ನೀವು ಗೃಹಸ್ಥಾಶ್ರಮ ಸ್ವೀಕಾರಮಾಡತಕ್ಕುದು ಅವಶ್ಯಕವಷ್ಟೆ! ಅಹಲ್ಯಾ ಕುಮಾರಿಯನ್ನು ಬಿಟ್ಟು ಅನ್ಯತ್ರ ಕನ್ಯಾಗ್ರಹಣಕ್ಕೆ ಮನಸ್ಸು ಮಾಡಬೇಡಿರಿ. ಅಹಲ್ಯೆಯೇ ನಿಮಗೆ ಅನುರೂಪ ಭಾರ್ಯೆಯಾಗಲರ್ಹಳು. ಆಕೆಯನ್ನು ಸಾಧಿಸಲು, ನಿಮ್ಮ ಯುಕ್ತಿ ಚಾತುರ್ಯಗಳನ್ನು ತೋರಿಸಲು ಇದು ತಕ್ಕವೇಳೆಯು. ಖಂಡಿತವಾಗಿಯೂ

ಪ್ರಯತ್ನಿಸದಿರಬೇಡಿರಿ. " ಎಂದು ನುಡಿದು ಅವರ ಅನುಜ್ಞೆ ಪಡೆದು, ತಮ್ಮ ಆಶ್ರಮಗಳಿಗೆ ಹೊರಟುಹೋದರು.

ಮೇರು ಪರ್ವತದ ಬಳಿಯ ಸಿದ್ಧಾಶ್ರಮವು ಬ್ರಹ್ಮಪುತ್ರಿ ಅಹಲ್ಯೆಯ ವಿವಾಹಕ್ಕೆ ತಕ್ಕ ಸ್ಥಳವೆಂದು ಏರ್ಪಟ್ಟಿತು. ವಿವಾಹಮಹೋತ್ಸವಕ್ಕಾಗಿ ಇಂದ್ರಾದಿ ಸಕಲ ಲೋಕಪಾಲಕರೂ, ಇತರ ಅನೇಕಾನೇಕ ಮಂದಿ ದೇವತೆಗಳೂ, ದೇವರ್ಷಿಗಳೂ ಬ್ರಹ್ಮರ್ಷಿಗಳೂ ದೇವಲೋಕ ಬ್ರಹ್ಮಲೋಕ ನಿವಾಸಿಗಳಾದ ಇತರ ಅನೇಕ ಮಂದಿ ಪುಣ್ಯಜೀವಿಗಳೂ ನೆರೆದರು. ಮಹರ್ಷಿಗಳ ಸಲಹೆಯನ್ನನುಸರಿಸಿ ಆಗಂತಾಗಲೆಂದು, ಗೌತಮ ಋಷಿಗಳೂ ಅಲ್ಲಿಗೆ ಬಂದು ಸೇರಿದರು. ಆದರೆ, ವರನಾರೆಂಬುದೂ, ಆಕೆಯನ್ನು ಯಾರಿಗೆ ಕೊಟ್ಟು ಲಗ್ನಮಾಡುವರೆಂಬ ದೂ ಯಾರಿಗೂ ತಿಳಿಯದು. ಆಗ ಬ್ರಹ್ಮದೇವನು ಮಹಾತಪಸ್ಸಂಪನ್ನರಾದ ಗೌತಮರ ಪ್ರಜ್ಞಾಮಹಿಮೆಯನ್ನೂ, ಚಾತುರ್ಯವನ್ನೂ ನೆರೆದ ಸಕಲರಿಗೂ ತಿಳಿಯುವಂತೆ ಮಾಡಬೇಕೆಂದು–' ಒಂದು ಗಳಿಗೆ ಮಾತ್ರದ ಕಾಲದೊಳಗಾಗಿ ಭೂಪ್ರದಕ್ಷಿಣೆಯನ್ನು ಮಾಡಿಕೊಂಡು ಬರುವ ಶಕ್ತಿ ಸಾಹಸ ಸಂಪನ್ನನಾರೋ ಆತನನ್ನು ಅಹಲ್ಯೆಯು ವರಿಸತಕ್ಕವಳು ' ಎಂದು ಪ್ರಕಟಿಸಿದನು.

ಆ ಅಪೂರ್ವ ವಿಚಾರವನ್ನು ಕೇಳಿ ಎಲ್ಲರೂ ಭ್ರಾಂತರಾದರು. ಒಂದೇ ಒಂದು ಗಳಿಗೆಯೊಳಗಾಗಿ ಆದ್ಯಂತ ಪೃಥ್ವಿಯನ್ನು ಪ್ರದಕ್ಷಿಣೆ ಮಾಡುವುದು ಹೇಗೆ; ಏನು, ಆ ವಿಚಾರವನ್ನು ಊಹಿಸಲಿಕ್ಕಾದರೂ ಸಾಧ್ಯವುಂಟೆ ! ದೇವರ್ಷಿಗಳೂ ಬ್ರಹ್ಮರ್ಷಿಗಳೂ, ಆ ವಿಚಾರವು ತಮಗೇಕೆಂದು ನಿಶ್ಚಿಂತರಾಗಿ ಏನು ವಿಚಿತ್ರ ನಡೆಯಲಿರುವುದೋ ನೋಡೋಣವೆಂದು ಕೇವಲ ಪ್ರೇಕ್ಷಕರಾಗಿ ನಿಂತರು. ಇತರ ಸಾಮಾನ್ಯ ದೇವತೆಗಳು ಆ ಬ್ರಹ್ಮಪುತ್ರಿಯ ಹಸ್ತಗ್ರಹಣಕ್ಕಾಗಿ ಪ್ರಯತ್ನಿಸಲು ಶಕ್ಯವೇ ಎಲ್ಲರೂ ಸುಮ್ಮನಿದ್ದರು. ಲೋಕಪಾಲಕರು, ತಮ್ಮಲ್ಲಿ ಹಿರಿಯನಾದ ದೇವೇಂದ್ರನಿರುವಾಗ, ಮತ್ತಾರೂ ಮುಂದೆಬರಲಾರದೆ ಹಿಂಜರಿದರು. ಮಾತ್ರವಲ್ಲ–ಆ ಕಾರ್ಯವನ್ನು ಕ್ಷಣಮಾತ್ರದಲ್ಲಿ ನಿರ್ವಹಿಸಿ ಆ ಸುಂದರೀಮಣಿಯನ್ನು ವರಿಸಲು ದೇವರಾಜನಾದ ಆತನೇ ಯೋಗ್ಯನು ಎಂಬದಾಗಿ ಪ್ರೋತ್ಸಾಹಿಸಿದರು. ಆ ಕನ್ಯೆಯು, ತನ್ನ ಪ್ರಾರ್ಥನೆಯ ಮೇರೆಗೆ

ಗೌತಮಋಷಿಗಾಗಿ ಬ್ರಹ್ಮನಿಂದ ನಿರ್ಮಿತಳಾದವಳು ಎಂಬ ಸಂಗತಿಯು ಇಂದ್ರನಿಗೆ ತಿಳಿಯದು. ಆದುದರಿಂದ, ನಾನೂ ಏಕೆ ಈ ಪಂಥದಲ್ಲಿ ಪ್ರಯತ್ನಿಸಕೂಡದು ಎಂದು ಆತನಿಗೆನ್ನಿಸಿತು. ತನಗೆ ಪ್ರತಿಪಕ್ಷಿಗಳಾಗಿ ಮತ್ತಾರೂ ಬಾರದಿರಲು, ಅಹಲ್ಯೆಯು ತನ್ನ ಪಾಲಿಗೆ ಬರತಕ್ಕವಳೇ ಎಂದು ಆತನಿಗೆ ದೃಢವಾಯಿತು. ಒಡನೆ ಉತ್ಸಾಹವೂ ಹೆಚ್ಚಲು, ತತ್‌ಕ್ಷಣವೇ ಆ ದೇವರಾಜನು ಐರಾವತವನ್ನೇರಿ ಭೂಪ್ರದಕ್ಷಿಣೆಗಾಗಿ ಹೊರಟನು.

ಇಂದ್ರನು ಅತ್ತ ಹೊರಟುಹೋದಕೂಡಲೇ, ಕಶ್ಯಪಾದಿ ಮಹರ್ಷಿಗಳು, ಆವರೆಗೆ ಪ್ರಯತ್ನ ಶೂನ್ಯರಾಗಿ ಕುಳಿತಿದ್ದ ಗೌತಮರ ಕಡೆನೋಡಿದರು. ಆದರೆ ಬ್ರಹ್ಮವಾಕ್ಯವನ್ನು ಕೇಳಿದ ಅವರು ಸುಮ್ಮನೆ ಕುಳಿತಿರಲಿಲ್ಲ. ಅದನ್ನು ಹಾಗೆಯೇ ತಮ್ಮ ಮನಸ್ಸಿನಲ್ಲಿ ಪರಿಭಾವಿಸಿಕೊಂಡರು. ಬ್ರಹ್ಮದೇವನು 'ಒಂದು ಗಳಿಗೆಯ ಕಾಲದಲ್ಲಿ ಭೂಪ್ರದಕ್ಷಿಣೆ ಮಾಡಬೇಕು' ಎಂದು ಹೇಳಿದ್ದಾನಲ್ಲದೆ, 'ಚರಾಚರಾತ್ಮಕವಾದ ಈ ಪೃಥ್ವೀಮಂಡಲವನ್ನು' ಎಂದು ಹೇಳಿಲ್ಲ. ಆದುದರಿಂದ ಈ ಪಂಥವನ್ನು ಸಾಧಿಸುವುದಕ್ಕಾಗಿ, ಕಚ್ಚೆಯನ್ನು ಕಟ್ಟಿಕೊಂಡು ಓಡಬೇಕಾದ ಕಾರಣವೇನಿದೆ? ಕಾಮಧೇನುವು ಭೂದೇವತಾ ಸ್ವರೂಪಳೆಂಬುದೂ; ಗೋಮಾತೆಯಲ್ಲಿ ಚರಾಚರಾತ್ಮಕವಾದ ಸಕಲ ಸೃಷ್ಟಿಯೂ ಅಂಶರೂಪದಿಂದ ವ್ಯಾಪ್ತವಾಗಿದೆಯೆಂಬುದೂ, ತ್ರಿಮೂರ್ತಿಗಳು, ಸಕಲ ದೇವತೆಗಳು, ದೇವರ್ಷಿ ಬ್ರಹ್ಮರ್ಷಿಗಳು. ಸಕಲ ಪುಣ್ಯತೀರ್ಥಗಳು ಇವುಗಳೆಲ್ಲವೂ ಗೋಮಾತೆಯ ಪವಿತ್ರ ದೇಹದಲ್ಲಿ ಅಡಗಿವೆ ಎಂಬ ಮಾತೂ ಶಾಸ್ತ್ರ ಸಮ್ಮತವಾಗಿರುವಲ್ಲಿ ಭೂಪ್ರದಕ್ಷಣೆಗೆಂದು ಏಳುತ್ತ ಬೀಳುತ್ತ–ಸಿಟ್ಟುಸಿರುಬಿಡುತ್ತ ಓಡಲೇಕೆ?" ಎಂದು ಯೋಚಿಸಿದರು. ಕ್ಷಣಮಾತ್ರ ಏಕಾಗ್ರಚಿತ್ತರಾಗಿ ಚಿಂತಿಸಿ, ಧರ್ಮ ಸೂಕ್ಷ್ಮದ ಆ ಶಾಸ್ತ್ರಾಧಾರವಿಚಾರವು ಸತ್ಯವಾದುದೆಂದು ಮನಗಂಡರು. ಒಡನೆ ತಾವು ಸಮಯಮಾಡದೆ ಎದ್ದು, ಪೂರ್ವದಿಕ್ಕಿಗೆ ಮುಖವಾಗಿ ಶುದ್ಧಾಚಮನ ಮಾಡಿ, ವತ್ಸಳಾದ ನಂದಿನೀ ಸಮೇತಳಾಗಿ ಅಲ್ಲೇ ನಿಂತಿದ್ದ ಕಾಮಧೇನುವಿನ ಸಮೀಪಕ್ಕೆ ಬಂದು, ವಿಧ್ಯುಕ್ತವಿಧಾನದಿಂದ ಆ ಗೋಮಾತೆಯಲ್ಲಿ ಭೂಮಾತೆಯನ್ನು ಅನುಸಂಧಾನಮಾಡಿ ಪೂಜಿಸಿ, ಭಕ್ತಿಭಾವದಿಂದ ಕೈಮುಗಿದುಕೊಂಡು ಪ್ರದಕ್ಷಿಣೆಯಾಗಿ

ಬಂದು ನಮಸ್ಕರಿಸಿದರು. ಅಲ್ಲಿಂದ ಬ್ರಹ್ಮದೇವನಲ್ಲಿಗೆ ನಡೆದು ಬಂದು ಅಂಜಲಿಬದ್ಧರಾಗಿ, ಶಾಸ್ತ್ರಸಮ್ಮತಿಯಿಂದ ಭೂಪ್ರದಕ್ಷಿಣೆ ಮಾಡಿದ ತಮಗೆ ಸೇರಬೇಕಾದ ಅಹಲ್ಯೆಯನ್ನು ಕೊಡಿಸಬೇಕೆಂದು ಕೈನೀಡಿದರು. ಅವರ ಯುಕ್ತಿ ಸಾಮರ್ಥ್ಯಕ್ಕಾಗಿಯೂ ಸ್ಫೂರ್ತಿಗಾಗಿಯೂ ದೇವರ್ಷಿಗಳೂ ಬ್ರಹ್ಮರ್ಷಿಗಳೂ ಪರಮಾಶ್ಚರ್ಯಪಟ್ಟು ಮೆಚ್ಚಿಕೊಂಡರು. ಬ್ರಹ್ಮದೇವನು ಹಾಗಾಗುವುದೆಂದು ಮೊದಲೇ ನಿರ್ಧರಿಸಿದ್ದನಾದುದರಿಂದ, ನಗೆಮೊಗದಿಂದ ದೇವರ್ಷಿಗಳನ್ನು ನೋಡಿ, ಗೌತಮರನ್ನು ಪ್ರೇಮಪೂರ್ವಕ ಮುಂದಕ್ಕೆ ಬರಮಾಡಿಕೊಂಡು, ಯುಕ್ತವಚನಗಳಿಂದ ಆದರಿಸಿದನು. ಮತ್ತು ದಿವ್ಯವಸ್ತ್ರಾಭರಣಭೂಷಿತಳಾಗಿ, ತಾನು ಇದ್ದ ಎಡೆಯನ್ನು ಬೆಳಗುತ್ತ—ಅಲ್ಲೇ ನಿಂತಿದ್ದ ಕುಮಾರೀ ಅಹಲ್ಯೆಯನ್ನು ಮುಂದಕ್ಕೆ ಕರೆದು, ಅವರ ಕೈಯಲ್ಲಿ ಆಕೆಯ ಕೈಯನ್ನಿರಿಸಿ, ತಾನೂ ಮತ್ತು ನೆರೆದ ಸಕಲ ದೇವರ್ಷಿ ಬ್ರಹ್ಮರ್ಷಿಗಳೂ ಸ್ವಸ್ತಿವಾಚನಗಳನ್ನು ನುಡಿದರು. ಮನಃಪೂರ್ವಕ ಆಶೀರ್ವಾದಮಾಡಿದರು. ಅಹಲ್ಯಾ ಗೌತಮರೂ ಪಿತಾಮಹನೇ ಮುಂತಾದ ನೆರೆದ ಸಕಲರಿಗೂ ನಮಸ್ಕಾರ ಮಾಡಿ ಆಶೀರ್ವಾದಗಳನ್ನು ಪಡೆದರು. ಇಂತು ಗೌತಮಋಷಿಗಳ ವಿವಾಹ ಮಂಗಳ ಕಾರ್ಯವು ಬ್ರಹ್ಮಸಾನ್ನಿಧ್ಯದಲ್ಲಿ ನಡೆದುಹೋಯಿತು. ಅಹಲ್ಯೆಯು ಗೌತಮ ಮಹರ್ಷಿಗಳ ಸಹಧರ್ಮಿಣಿಯಾದಳು. ಸಕಲರೂ ಪರಮಾನಂದಪಟ್ಟರು.

ಆವೇಳೆಗೆ ಅತ್ತ ಭೂಪ್ರದಕ್ಷಿಣೆಗೆಂದು ಸಾಗಿದ್ದ ದೇವೇಂದ್ರನು ಓಡಿಯೋಡಿಕೊಂಡು ಬಹುವೇಗದಿಂದ ಆ ಸ್ಥಳಕ್ಕೆ ಬಂದನಾದರೂ ಕಾಲವು ಗಳಿಗೆಯ ಅವಧಿಯನ್ನು ಮೀರಿಹೋಗಿತ್ತು. ಅಲ್ಲದೆ ಆ ಮೊದಲೇ ಗೌತಮಋಷಿಯು ಅಹಲ್ಯೆಯನ್ನು ಗೆದ್ದುಕೊಂಡ ವಿಧಾನವೂ ತಿಳಿಯಿತು. ಬ್ರಹ್ಮಸಾನ್ನಿಧ್ಯದಲ್ಲಿ ಶಾಸ್ತ್ರಸಮ್ಮತವಾಗಿ ಸತ್ಯವಾದುದೆಂದು ಸಿದ್ಧವಾದ ಆ ವಿಚಾರದಲ್ಲಿ ಮುಂದೆ ಚರ್ಚೆಗೆ ಆಸ್ಪದವೆಲ್ಲಿ? ಸೂಕ್ಷ್ಮಮತಿಯೂ ವಿಚಾರಶೀಲರೂ ಆದ ಗೌತಮಋಷಿಗಳ ಪ್ರತಿಭೆಗಾಗಿ ಆಶ್ಚರ್ಯಪಡುತ್ತ ತನ್ನ ಆಶಯವು ಒಂದು ಬಗೆಯಿಂದ ಅಲ್ಲದಿದ್ದರೆ ಮತ್ತೊಂದು ಬಗೆಯಿಂದಲಾದರೂ ನೆರವೇರಿತಲ್ಲಾ ಎಂದು ಸಂತಸಗೊಂಡು ಅಲ್ಲಿಂ

ದ ಹೊರಟು ತನ್ನವರೊಂದಿಗೆ ಅಮರಾವತಿಗಾಗಿ ಪ್ರಯಾಣಮಾಡಿದನು. ಸಕಲರೂ ಸ್ವಸ್ಥಾನಗಳನ್ನು ಕುರಿತು ನಡೆದರು. ಗೌತಮರು ಪತ್ನೀಸಮೇತರಾಗಿ ಬ್ರಹ್ಮದೇವನಿಗೂ ಇತರ ಬ್ರಹ್ಮರ್ಷಿಗಳಿಗೂ ಪುನಃ ನಮಸ್ಕರಿಸಿ ಅಪ್ಪಣೆ ಪಡೆದು ತಮ್ಮ ಆಶ್ರಮಾಭಿಮುಖವಾಗಿ ಪ್ರಯಾಣ ಮಾಡಿದರು.

---

## ಅಧ್ಯಾಯ ೩. "ವೀರಕ್ಷ್ಮಾಮು"

ಬ್ರಹ್ಮಚರ್ಯ ಗೃಹಸ್ಥ ವಾನಪ್ರಸ್ಥ ಸನ್ಯಾಸ ಎಂಬಿವು ನಾಲ್ಕು ಆಶ್ರಮಗಳು; ಎಂದರೆ ನಾಲ್ಕು ಜೀವನಸ್ಥಿತಿಗಳು. ಇವುಗಳಲ್ಲಿ ಒಂದೊಂದಕ್ಕೂ ಪ್ರತ್ಯೇಕ ಕೆಲಸಗಳುಂಟು. ಅಜ್ಞಾನಿಯಾಗಿ ಜನಿಸಿದ ಮಾನವ ಶಿಶುವು ಬೆಳೆದು ಪೂರ್ಣಜ್ಞಾನಿಯಾಗಿ ಜೀವನ್ಮುಕ್ತಾವಸ್ಥೆಯನ್ನು ಅನುಭವ ಮಾಡಲೂ, ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಸಂಪಾದನೆಮಾಡಿ, ಜೀವನಸಾರ್ಥಕ್ಯವನ್ನುಂಟುಮಾಡಿಕೊಳ್ಳಲೂ ಪ್ರತಿಯೊಬ್ಬನೂ ತನ್ನ ಜೀವನಯಾತ್ರೆಯಲ್ಲಿ ಈ ಆಶ್ರಮ ಧರ್ಮಗಳನ್ನು ಪಾಲನೆಮಾಡುತ್ತಾ ಸಾಗಿದರಲ್ಲದೆ, ಅನ್ಯಥಾ ಮಾರ್ಗವಿಲ್ಲ. ಮೊದಲನೆಯ ಸ್ಥಿತಿಯಲ್ಲಿ ಬ್ರಹ್ಮಚರ್ಯವ್ರತವನ್ನು ಕೈಕೊಂಡು, ಬಲವೀರ್ಯಗಳನ್ನು ದಕ್ಕಿಸಿಕೊಂಡು, ಗುರುವಿನ ಬಳಿ ವಿದ್ಯಾಭ್ಯಾಸಮಾಡಿ, ದೇಹಮನೋಬುದ್ಧಿಗಳ ಸಕಲವಿಧ ಬೆಳೆವಣಿಗೆಯನ್ನೂ ಹೊಂದಬೇಕು. ಈ ಮೊದಲನೆಯ ಆಶ್ರಮವೇ ಮುಂದೆಬರುವ ಇತರ ಆಶ್ರಮಗಳಿಗೆ ಅಸ್ತಿಭಾರದಂತಿರುವುದು. ಈ ಬ್ರಹ್ಮಚರ್ಯಾಶ್ರಮದಲ್ಲಿ ಮಾನವನ ನಡೆವಳಿಕೆಯಲ್ಲಿ ಕಂಡುಬರುವ ಶ್ರದ್ಧಾಶ್ರದ್ಧತೆಗಳ ಫಲವನ್ನೇ ಅವನು ಮುಂದಿನ ತನ್ನ ಜೀವಮಾನದಲ್ಲೆಲ್ಲಾ ಅನುಭವಿಸಬೇಕಾಗುವುದು. ಈ ಆಶ್ರಮದಲ್ಲಿ ಯುಕ್ತಾಹಾರವಿಹಾರಗಳಿಂದ ವೀರ್ಯರಕ್ಷಣೆಮಾಡಿಕೊಂಡು ದೇಹಪುಷ್ಟಿಯನ್ನು ಗಳಿಸಿದನೆಂದರೆ, ಮುಂದೆ ಜೀವಿತಕಾಲನೆಲ್ಲಾ ದಿವ್ಯ ಆರೋಗ್ಯಭಾಗ್ಯವನ್ನೂ ತನ್ಮೂಲಕ ಮನಶ್ಶಾಂತಿಯನ್ನೂ ಅನುಭವಿಸಿ, ಸುಖ ಸಂಪದಗಳಿಗೆ ಸ್ವಾಮಿಯಾಗುವನು. ಈ ಆಶ್ರಮದಲ್ಲಿ ಶ್ರದ್ಧಾವಂತನಾಗಿ, ಭಕ್ತಿಯಿಂದ ಗುರುಹಿರಿಯರ ಸೇವೆಮಾಡಿ ಭಗವಂತನ ಪಾದಾರವಿಂದಗಳಲ್ಲಿ ಭಕ್ತಿ ಭಾಗ್ಯವನ್ನು

ಗಳಿಸಿದ್ದನೆಂದರೆ,ಮುಂದೆ ತನ್ನ ಜೀವಿತಕಾಲದಲ್ಲೆಲ್ಲ ಶ್ರದ್ಧಾ ಭಕ್ತಿ ಆಸ್ತಿಕತೆಗಳು ನೆಲೆಗೊಂಡು ಧಾರ್ಮಿಕಾಚರಣೆಯಲ್ಲೇ ಇದ್ದು ಜನ್ಮಸಾರ್ಥಕಮಾಡಿಕೊಳ್ಳುವನು. ಈ ಆಶ್ರಮದಲ್ಲಿ ಆಲಸ್ಯಭಾವವನ್ನು ಕಳೆದು ಚಟುವಟಿಕೆಯಿಂದ ಗುರುವಿನ ಪಾದವನ್ನು ಆಶ್ರಯಿಸಿ ವಿದ್ಯಾಭ್ಯಾಸಮಾಡಿ ಬುದ್ಧಿವಂತನಾದರೆ, ಮುಂದಿನ ತನ್ನ ಲೌಕಿಕ ಜೀವಮಾನದಲ್ಲಿ ಧರ್ಮಸಂಗ್ರಹಣಮಾಡಿ, ಅರ್ಥ ಸಂಪಾದನೆಮಾಡಿ, ಕಾಮಸಂತೃಪ್ತಿಯನ್ನು ಹೊಂದಿ, ಮೋಕ್ಷಸಾಧನೆ ಮಾಡಿಕೊಳ್ಳಲೂ ಮಾರ್ಗವಾಗುವುದು. ಹಾಗಲ್ಲದೆ,ಮಾನವಜೀವಿತಸಾಧನಕ್ಕೇ ಅಸ್ತಿಭಾರಸ್ವರೂಪವಾದ ಈ ಆಶ್ರಮಧರ್ಮಪಾಲನೆಯಲ್ಲಿ ಅವಿವೇಕ ನಡೆಯಿತೆಂದರೆ, ಮುಂದಿನ ಸಂಪೂರ್ಣಜೀವಿತವೂ ಕೆಟ್ಟಿತೆಂದೇ ತಿಳಿಯಬೇಕು. ಮರಳಿನ ರಾಸಿಯಮೇಲೆ ಕಟ್ಟಲ್ಪಟ್ಟ ಕಟ್ಟಡದಂತೆ ಆ ಸೌಧವು ಕುಸಿದುಬೀಳದೆ ನಿಲ್ಲಲಾರದು. ಇಹ ಜೀವಿತದಲ್ಲಿ ವಿವಿಧ ರೋಗಗಳ ಪಾಲಾಗಿ ನರಳುತ್ತಾ, ಪ್ರತ್ಯಕ್ಷ ನರಕಾನುಭವವನ್ನು ಮಾಡುವುದಕ್ಕಾಗಲೀ ಅಥವ ಕ್ಷುದ್ರ ದರಿದ್ರನಾಗಿ, ಭಿಕ್ಷುಕನಾಗಿ ಅಧಮ ಜೀವಿಯಾಗಿ, ಕಂಡವರ ಬಾಗಿಲಲ್ಲಿ ನಿಂತು ತುತ್ತು ಕೂಳಿಗೆ ಹಲ್ಗಿರಿವ ನಾಯಿಯಂತೆ, ಆಜನ್ಮವೂ ದುಃಖಾನುಭವಮಾಡುವುದಕ್ಕಾಗಲೀ, ಅಥವ, ಭಗವಂತನು ಅನುಗ್ರಹಿಸಿ ಕೊಟ್ಟಿರುವ ಕರಚರಣಾದಿ ಅಮೌಲ್ಯ ಅವಯವಗಳನ್ನು ನಿರರ್ಥಕಗಳನ್ನಾಗಿಸಿ, ವ್ಯರ್ಥಕಾಲಕ್ಷೇಪಮಾಡಿ. ಯಾವಕೆಲಸಕ್ಕೂ ಪ್ರಯೋಜನವಿಲ್ಲದೆ, ಅಲಭ್ಯ ಮಾನವ ಜನ್ಮವನ್ನು ಅಸಾರ್ಥಕಪಡಿಸಿಕೊಳ್ಳುವುದಕ್ಕಾಗಲೀ ಬೀಜಾವಾಪನೆಯು ಈ ಆಶ್ರಮದಲ್ಲಿಯೇ ಆಗತಕ್ಕದು. ಈ ಆಶ್ರಮದಲ್ಲಿ ಹಾಕಲ್ಪಟ್ಟ ಜೀವನ ಸೌಧದ ದೃಢವಾದ ಅಸ್ತಿಭಾರದ ಮೇಲೆಯೇ ಗೃಹಸ್ಥಾಶ್ರಮದಲ್ಲಿ ಬಲವಾದ ಕಲ್ಲಿನಗೋಡೆಗಳೂ ಮೇಲಂತಸ್ತುಗಳೂ ಕಟ್ಟಲ್ಪಡುವುವು. ಪ್ರಾಕಾರಾದಿ ಇತರ ಅನುಕೂಲತೆಗಳೆಲ್ಲವೂ ಪೂರ್ತಿಗೊಳಿಸಲ್ಪಟ್ಟು ಸನ್ಯಾಸಾಶ್ರಮದಲ್ಲಿ ಆಸೌಧವು, ತನ್ನ ಬಳಿಗೆ ಒರುವ ಸಕಲರಿಗೂ ತಂಪಾದ ನೆರಳನ್ನು ಕೊಟ್ಟು ವಿಶ್ರಮಿಸಿಕೊಳ್ಳಲು, ಯೋಗ್ಯಸ್ಥಳವಾಗಿ ಆಯಾಸವನ್ನು ಪರಿಹರಿಸಿ ತೃಪ್ತಿ ಶಾಂತತೆಗಳನ್ನುಂಟುಮಾಡಲು ಯೋಗ್ಯವಾಗುವುದು.

ಬ್ರಹ್ಮಚಾರ್ಯಾಶ್ರಮದಲ್ಲಿ ನಿಯಮಬದ್ಧ ಜೀವಿತವನ್ನು ಸಾಗಿಸಿ, ಯುಕ್ತ ಕಾಲದಲ್ಲಿ ಮಹರ್ಷಿಗಳ ಸಲಹೆಯಂತೆ ಗೃಹಸ್ಥಾಶ್ರಮ ಸ್ವೀಕಾರ

ಮಾಡಿ, ಗೌತಮರು ಪತ್ನಿಯಾದ ಅಹಲ್ಯಾದೇವಿಯೊಂದಿಗೆ ತಮ್ಮ ಆಶ್ರಮವನ್ನು ಸೇರಿದರು. ಎಂದಿನಂತೆ ಸ್ನಾನಸಂಧ್ಯಾದಿ ನಿತ್ಯಕರ್ಮಗಳೂ ಜಪತಪಹೋಮಾದಿಗಳೂ ಕ್ರಮತಪ್ಪದೆ ನಡೆಯತೊಡಗಿದವು. ಪತ್ನಿಯೊಡಗೂಡಿದ ಗೌತಮರು ಬ್ರಹ್ಮಯಜ್ಞ, ವೈಶ್ವದೇವ, ಬಲಿಹರಣ, ಪಿತೃತರ್ಪಣ, ಅತಿಥಿಸತ್ಕಾರಗಳೆಂಬ ಕ್ರಿಯೆಗಳಿಗೆ ಎಂದಿಗೂ ಲೋಪತಾರದೆ ಸದಾ ಜಾಗರೂಕರಾಗಿದ್ದರು. ಶಿಷ್ಯರಿಗೆ ವೇದಪಾಠ ಪ್ರವಚನಾದಿಗಳೂ, ಯೋಗಸಾಧನೆಯೂ ಎಂದಿನಂತೆಯೇ ನಡೆಯುತ್ತಲಿದ್ದುವು

ಅಹಲ್ಯಾದೇವಿಯು ಪತಿಗೃಹದಲ್ಲಿ ಹೇಗೆ ವಾಸಿಸಿದಳು, ಹೇಗೆ ಕಾಲಯಾಪನೆ ಮಾಡಿದಳು ಎಂಬುದನ್ನು ತಿಳಿಯಲು, ಮಾನಸಿಕವಾಗಿಯಾದರೂ ಒಂದುಸಾರಿ ಅವರ ಆ ಪುಣ್ಯಾಶ್ರಮವನ್ನು ಸಂದರ್ಶಿಸಬೇಕು. ಆ ಶ್ರದ್ಧಾವಂತಳು ಲೇಶವೂ ಆಲಸ್ಯಭಾವವೆಂಬುದಿಲ್ಲದೆ, ಬ್ರಾಹ್ಮೀಮುಹೂರ್ತಕ್ಕೆಸರಿಯಾಗಿ ನಿದ್ರೆಯಿಂದೆಚ್ಚತ್ತು, ಪತಿಪಾದಸ್ಮರಣ ಪೂರ್ವಕ ಹಾಸಿಗೆಯನ್ನು ಬಿಟ್ಟೇಳುವಳು. ನಂತರ ಮುಖಪ್ರಕ್ಷಾಳನಾದಿಗಳಿಂದ ದೇಹವನ್ನು ಶುದ್ಧಿಗೊಳಿಸಿಕೊಂಡು ತುಲಸಿಯನ್ನೂ ಗೋಮಾತೆಯನ್ನೂ ಸಂದರ್ಶಿಸಿ ಅವುಗಳಿಗೆ ಅರಿಸಿನಕುಂಕುಮಾದಿಗಳನ್ನಿಟ್ಟು ನಮಸ್ಕರಿಸುವಳು. ತರುವಾಯ ಆಶ್ರಮದ ಒಳಹೊರಭಾಗಗಳನ್ನೆಲ್ಲ ಬಳಿದು ಶುದ್ಧಿಗೊಳಿಸಿ, ಪಾಕಪಾತ್ರೆ ಪಾನಪಾತ್ರೆಗಳನ್ನು ತೊಳೆದು ಶುದ್ಧಪಡಿಸುವಳು. ಆಮೇಲೆ ನದಿಯ ಶುದ್ಧಜಲದಲ್ಲಿ ವಸ್ತ್ರಾದಿಗಳನ್ನು ಒಗೆದುಕೊಂಡು ಸ್ನಾನಮಾಡಿ ಶುಭ್ರವಸ್ತ್ರಗಳನ್ನು ಧರಿಸಿ ಮುತ್ತೈದೆರಿಗೆ ಮಂಗಳಪ್ರದಗಳಾದ ಹರಿದ್ರಾಕುಂಕುಮಾದಿಗಳಿಂದ ಮುಖವನ್ನು ಸಿಂಗರಿಸಿಕೊಳ್ಳುವಳು. ಪತಿಯ ಜಪತಪ ಅರ್ಚನೆ ಪ್ರಾರ್ಥನಾದಿಗಳಿಗೆ ಬೇಕಾದ ಸಕಲವಿಧ ಅನುಕೂಲತೆಗಳನ್ನೂ ಒದಗಿಸಿಕೊಡುವಳು. ತರುವಾಯ ತಾನು ವೃಂದಾವನಸ್ಥ ತುಲಸಾದೇವಿಯನ್ನು ಭಕ್ತಿಭಾವದಿಂದ ಅರ್ಚಿಸಿ,-ನಂತರ ಪಾಕಸಿದ್ಧತೆಯಲ್ಲಿ ತೊಡಗಿ ಕಂದಮೂಲಗಳು-ಫಲಕ್ಷೀರಾದಿಗಳು ಮುಂತಾದುವುಗಳಿಂದ ದಿವ್ಯಪಾಕವನ್ನು ಮಾಡಿಡುವಳು. ಅತಿಥಿ ಅಭ್ಯಾಗತರಿಗೂ ಆಶ್ರಮವಾಸಿ ವಿದ್ಯಾರ್ಥಿಗಳಿಗೂ ಪತಿಗೂ ಶ್ರದ್ಧಾಭಕ್ತಿಗಳಿಂದ ಉಣಲಿಟ್ಟು, ತಾನೂ ಆಹಾರಸ್ವೀಕಾರ ಮಾಡುವಳು. ಆಶ್ರಮದಲ್ಲಿ ನಡೆವ ಪುರಾಣ ಪುಣ್ಯ ಕಥಾದಿ

ಶ್ರವಣದಿಂದಲೂ ಇತರ ಹಲವು ಗೃಹಕಾರ್ಯಗಳಿಂದಲೂ ಮಧ್ಯಾಹ್ನಕಾಲವು ಕಳೆವುದು.

ಅನುಕೂಲಳೂ ವಿನಯಶೀಲಳೂ ಆದ ಅಹಲ್ಯಾದೇವಿಯ ಪಾಣಿಗ್ರಹಣದಿಂದ ಗೌತಮರಿಗೆ ಗೃಹಸ್ಥಾಶ್ರಮವು ಭಾರವೆನಿಸುವಂತಾಗಲಿಲ್ಲ. ಅಹಲ್ಯಾ ದೇವಿಯು ಗೃಹಲಕ್ಷ್ಮಿಯೋ ಎಂಬಂತೆ ಆಶ್ರಮಕ್ಕೆ ಮಂಗಳದಾಯಕಳಾಗಿದ್ದು, ಆಶ್ರಮದಲ್ಲಿ ದಾನಧರ್ಮ ಪರೋಪಕಾರಾದಿಗಳು ನಡೆಯಲು ಸರ್ವದಾ ಪ್ರಯತ್ನಿಸುತ್ತಿರುವಳು. ಆರ್ತರಾಗಿ ಬಂದ ದೀನರಿಗೂ ಅನಾಥರಿಗೂ ಮಾತ್ರವಲ್ಲ.—'ನಿನ್ನ ಗತಿಯೇನು' ಎಂದು ಕರೆದು ಮಾತನ್ನು ಆಡಿಸುವವರು ಸಹ ದಿಕ್ಕಿಲ್ಲದಂತಹ ಕ್ಷುದ್ರುದರಿದ್ರರು ರೋಗಿಗಳು ಮುಂತಾದವರಿಗೂ ಅಹಲ್ಯಾದೇವಿಯ ಆ ಆಶ್ರಮವು ಹುಟ್ಟಿದ ಮನೆಯೋ ಎಂಬಂತೆ ತೃಪ್ತಿ ಶಾಂತತೆಗಳನ್ನಿತ್ತು ಆಶ್ರಯಸ್ಥಾನವಾಗಿರುವುದು. ಆ ಮಹಾತ್ಮಳ ಮುಖದಲ್ಲಿ ಪ್ರಕಾಶಿಸುತ್ತಿದ್ದ ದಯೆಯೂ ಮಮತೆಯೂ ಆರ್ತರಾದವರ ಹೃದಯಸ್ಥವಾದ ಮಹದ್ವ್ಯಸನವನ್ನು ಕಳೆದು ಒಡನೆ ಅವರಮನಸ್ಸಿನಲ್ಲಿ ಆನಂದದತೆರೆಗಳನ್ನು ಎಬ್ಬಿಸುವುದು. ಆಕೆಯ ದೃಷ್ಟಿಗೆ ಪಾತ್ರರಾದವರು ಒಡನೆ ತಮ್ಮ ಚಿಂತೆಯನ್ನೆಲ್ಲ ಕಳೆದುಕೊಂಡು ಸಂತೋಷಗೊಳ್ಳುವರು. ಗೌತಮರ ಸೌಜನ್ಯ ಶಿಷ್ಯವಾತ್ಸಲ್ಯ, ವಿದ್ಯಾದಾನಾಕಾಂಕ್ಷೆ ಮುಂತಾದುವುಗಳು ಹತ್ತಿರದ ದೂರದ ಅನೇಕಾನೇಕ ವಿದ್ಯಾರ್ಥಿಗಳನ್ನು ಆಕರ್ಷಿಸಲು, ಬಾಲಕರು ನೂರಾರು ಸಂಖ್ಯೆಯಿಂದ ಬಂದು ಆಶ್ರಮದಲ್ಲಿ ನೆರೆಯತೊಡಗಿದರು. ಹಾಗೆ ಬಂದವರೆಲ್ಲರನ್ನೂ ಹಸನ್ಮುಖದಿಂದಲೂ ಉಚಿತವಚನಗಳಿಂದಲೂ ಆದರಿಸಿ, ಪುತ್ರಪ್ರೇಮದಿಂದ ಉಣಲಿತ್ತು ಅಹಲ್ಯಾ ದೇವಿಯು ಪೋಷಿಸುವಳು. ಗೌತಮರು ಸಕಲ ವಿದ್ಯಾರ್ಥಿಗಳಿಗೂ ಅವರವರ ಯೋಗ್ಯತಾನುಸಾರ ಕಾವ್ಯ ನಾಟಕಾದಿಗಳು, ವೈದ್ಯ ಜ್ಯೋತಿಷ, ತರ್ಕವೇದಾಂತ, ಶಾಸ್ತ್ರಭಾಗಗಳು, ವೇದ ಉಪನಿಷದಾದಿಗಳು ಮುಂತಾಗಿ ವಿದ್ಯಾಭ್ಯಾಸ ಮಾಡಿಸಲು ತಕ್ಕ ಅನುಕೂಲತೆಗಳನ್ನೆಲ್ಲ ಏರ್ಪಡಿಸಿದರು. ಅವರ ಆ ಆಶ್ರಮವು ಒಂದು ವಿಶ್ವವಿದ್ಯಾಲಯವೋ ಎಂಬಂತೆ ಸರಸ್ವತೀ ನಿಕೇತನವೆನ್ನಿಸಿ ಆ ಕಾಲದಲ್ಲಿ ಪ್ರಸಿದ್ಧಿಗೊಂಡಿತು.

ಪ್ರಕಟಿಸಿದರು. ಆ ಮೂಲಕ ತಮ್ಮ ಪಿತೃ ಋಣವು ತೀರಲು ಅವಕಾಶವಾಯಿತೆಂದು ಸಂತೋಷಿಸಿದ ಗೌತಮರು, ಆ ಶಿಶುವಿಗೆ ಜಾತಕರ್ಮನಾಮಕರಣಾದಿ ವಿಧ್ಯುಕ್ತ ಕರ್ಮಗಳನ್ನು ನೆರವೇರಿಸಿ, ಶತಾನಂದ ಎಂದು ಹೆಸರಿಟ್ಟು ಕರೆದರು. ಬಾಲಕನೂ ದಿನದಿನಕ್ಕೆ ಅಭಿವೃದ್ಧಿಯಾಗಿ ಅಹಲ್ಯಾದೇವಿಯ ಮತ್ತು ಗೌತಮರ ಕಣ್ಮನಗಳಿಗೆ ಆನಂದದಾಯಕನಾಗಿ, ಶತಾನಂದ ಎಂಬ ತನ್ನ ಹೆಸರನ್ನು ಸಾರ್ಥಕಗೊಳಿಸಿದನು.

ಮಹರ್ಷಿಗಳ ಆಶಯವನ್ನು ಅನುಸರಿಸಿ ಗೃಹಸ್ಥಾಶ್ರಮ ಸ್ವೀಕಾರ ಮಾಡಿದ ಗೌತಮರು ಬ್ರಹ್ಮಯಜ್ಞ-ಅತಿಥಿಸತ್ಕಾರಾದಿ ಆಶ್ರಮಧರ್ಮಗಳನ್ನು ಪಾಲನೆಮಾಡುತ್ತ ಬಂದರಷ್ಟೆ! ಯಜ್ಞ ಹೋಮ ಜಪತಪಾದಿಗಳಿಂದ ದೇವಋಣವನ್ನೂ, ವೇದಾಧ್ಯಯನ ಅಧ್ಯಾಪನ ಗ್ರಂಥರಚನಾದಿ ಕಾರ್ಯಗಳಿಂದ ಋಷಿಋಣವನ್ನೂ ತೀರಿಸಿಕೊಂಡರು. ಅವರಿಂದ ರಚಿತವಾದ ನ್ಯಾಯ ಅಥವ ತರ್ಕಶಾಸ್ತ್ರವು ಷಡ್ದರ್ಶನಗಳಲ್ಲೊಂದೆಂಬ ಪ್ರಸಿದ್ಧಿಯನ್ನು ಹೊಂದಿ ಸರ್ವಗ್ರಾಹ್ಯವಾಯಿತು. ಮೇಲ್ಕಂಡಂತೆ ಪುತ್ರೋದಯವಾಗಿ ಪಿತೃಋಣವು ತೀರಿತೆಂಬ ತೃಪ್ತಿಯೂ ಅವರಿಗುಂಟಾಯಿತು. ಮುಂದೆ ಅನುಗಾಲವೂ ಗೃಹಸ್ಥಾಶ್ರಮದಲ್ಲೇ ಇದ್ದು-ತಮ್ಮ ಪೂರ್ವದ ಧ್ಯೇಯಸಾಧನೆಗೆ ವೃಥಾ ಸಾವಕಾಶವನ್ನುಂಟುಮಾಡಬೇಕಾದ ಆವಶ್ಯಕವು ತೋರಲಿಲ್ಲ. ಆದುದರಿಂದ ಆಶ್ರಮದ ವಿದ್ಯಾದಾನಾದಿ ಕಾರ್ಯಭಾರಗಳನ್ನು ಪ್ರಬುದ್ಧರಾದ ಶಿಷ್ಯರ ಪಾಲಿಗೆ ವಹಿಸಿ, ತಾವು ಪುನಃ ತಪೋನಿರತರಾಗಲು ಸಂಕಲ್ಪಿಸಿದರು.

ಸ್ತ್ರೀ ಸಂಬಂಧದಿಂದ ಅವರನ್ನು ಪ್ರಪಂಚಕ್ಕೆ ಬಂಧಿಸಿ, ಅವರ ಉನ್ನತ ಧ್ಯೇಯಕ್ಕೆ ಒಂದು ತಡೆಯನ್ನುಂಟುಮಾಡುವುದರ ಮೂಲಕ, ಅವರ ದಾರ್ಢ್ಯವನ್ನು ಪರೀಕ್ಷಿಸಬೇಕೆಂದು ಎಣಿಸಿದ್ದ ಇಂದ್ರನ ಉದ್ದೇಶವು ಸಾರ್ಥಕವಾಗಲಿಲ್ಲ. ಪತ್ನೀಸ್ವೀಕಾರಮಾಡಿದ ಮಾತ್ರದಿಂದಲೇ ವಿಷಯಾಂಧರಾಗುವರೇ ಗೌತಮರಂತಹ ಮಹಾತ್ಮರು? ಕೇವಲ ಆಶ್ರಮಧರ್ಮಪಾಲನೆ ಮಾಡುವುದರಮೂಲಕ ಲೋಕಸಂಗ್ರಹಕಾರ್ಯಮಾಡಿ ತರುವಾಯ ಪುನಃ ಹಿಂದೆ ನಿಲ್ಲಿಸಿದ್ದ ಸ್ಥಳದಿಂದ ತಮ್ಮ ಧ್ಯೇಯಸಾಧನೆಯಲ್ಲಿ ನಡೆಯತೊಡಗಿದ ಗೌತಮರನ್ನು ಕಂಡು ಇಂದ್ರನು

ಪುನಃ ವಿಚಾರಮಗ್ನನಾದನು. ಅವರನ್ನು ಆಗ ಕರ್ತವ್ಯ ವಿಮುಖರ ನ್ನಾಗಿ ಮಾಡುವ ಮತ್ತಾವ ಉಪಾಯವೂ ತೋರಲಿಲ್ಲ. ಅವರಿಗೆ ಕಾರ್ಯಾಂತರವನ್ನು ಒದಗಿಸುವುದೊಂದೇ ತಕ್ಕ ಪ್ರತಿ ಕ್ರಿಯೆಯೆಂದು ತೋರಿತು. ಒಡನೆ ಕಾರ್ಯ-ಪರಿಣಾಮಗಳನ್ನು ಯೋಚಿಸಿ ಆರ್ಯಾವರ್ತದಲ್ಲಿ ಕಾಲಕಾಲಕ್ಕೆ ಸುರಿಯುತ್ತಿದ್ದ ವೃಷ್ಟಿಯನ್ನು ಪ್ರತಿಬಂಧಿಸಿದನು. ಮುಂದೆ ಕೇಳುವುದೇನು! ಲೋಕದಲ್ಲಿ ಜೀವನಾಧಾರವಾದ ನೀರು ಮಳೆಯ ಮೂಲಕ ಸುರಿಯದಿದ್ದರೆ ಮುಂದೆ ಮಾರ್ಗವೇನಿದೆ? ಕೆರೆ ತೊರೆಗಳು ಬತ್ತಿದುವು. ಪೈರುಪಚ್ಚೆಗಳೆಲ್ಲ ಒಣಗಿದುವು. ಕುಡಿಯಲು ನೀರಿಲ್ಲದೆ, ತಿನ್ನಲು ಆಹಾರವಿಲ್ಲದೆ ದನಕರುಗಳು ತಪಿಸತೊಡಗಿದುವು. ಜನರ ಹಾಹಾಕಾರವು ವಿಶೇಷವಾಯಿತು. ಸುತ್ತುಮುತ್ತಿನ ಎಲ್ಲಾ ಪ್ರದೇಶಗಳಲ್ಲೂ ಹಾಗಿದ್ದರೂ ಗೌತಮಾಶ್ರಮ ಪ್ರಾಂತದಲ್ಲಿ ಮಾತ್ರ, ಅಹಲ್ಯಾದೇವಿಯ ಪಾತಿವ್ರತ್ಯ ಪ್ರಭಾವದಿಂದಲೋ ಎಂಬಂತೆ ವರ್ಷದ ಸಕಲ ಋತುಗಳಲ್ಲೂ ತೃಣಜಲ ಸಮೃದ್ಧಿಯು ಲೇಶಮಾತ್ರವೂ ಕುಂದದೆ ಗೋಸಮೂಹಗಳು ನಿರಾಂತಕವಾಗಿ ಮೇಯ್ದುಕೊಂಡು ಪುಷ್ಕಲ ಕ್ಷೀರವನ್ನು ವರ್ಷಿಸುತ್ತ ಸಮಸ್ತರಿಗೂ ಪುಷ್ಟಿ ತುಷ್ಟಿಗಳನ್ನೊದಗಿಸಿ ಕಾಪಾಡುತ್ತಿದ್ದುವು. ಅಲ್ಲಿ ಪೈರುಪಚ್ಚೆಗಳು ಯಾವ ಈತಿಭಾಧೆಯೂ ಇಲ್ಲದೆ ಹೊರವಾಗಿ ಬೆಳೆದು ವಿಶೇಷ ದವಸಧಾನ್ಯಗಳು ಲಭಿಸುತ್ತಿದ್ದುವು. ದೇಶದೇಶಗಳಲ್ಲೂ ವ್ಯಾಪಿಸಿದ್ದ ಕ್ಷಾಮಬಾಧೆಯು ಎಷ್ಟುಮಾತ್ರವೂ ಇಲ್ಲದೆ ಗೌತಮಾಶ್ರಮವು ಸುರಕ್ಷಿತವಾಗಿದ್ದಿತು.

ಮಹರ್ಷಿಗಳ ತಪೋಮಹಿಮೆಯಿಂದ ಕ್ಷಾಮಬಾಧೆಯನ್ನರಿಯದೆ ಶಾಂತಿಸಮಾಧಾನಗಳ ತೌರುಮನೆಯಂತಿದ್ದ ಗೌತಮಾಶ್ರಮಕ್ಕೆ ಹಲವು ಪ್ರಾಂತಗಳಿಂದ ಜನರು ಬಂದು ಸೇರೆಯಲಾರಂಭಿಸಿದರು. ಗ್ರಾಮನಗರವಾಸಿಗಳಾದ ಸಂಸಾರಿಗಳು ಮಾತ್ರವಲ್ಲ: ಹಲವು ಮಂದಿ ಸಾಧುಸಂತರೂ ವಿರಕ್ತರೂ ಸನ್ಯಾಸಿಗಳೂ ಋಷಿಮುನಿಗಳೂ ಸಹ ಅವರ ಆಶ್ರಮದ ಶಾಂತಮಯವಾತಾವರಣದಲ್ಲಿ ವಾಸಿಸಲು ಬಂದರು. ಅಪ್ರಾರ್ಥಿತರಾಗಿ ಬಂದು ಸೇರಿದ ಅಷ್ಟುಮಂದಿ ಸಜ್ಜನರನ್ನು ಆದರಿಸುವುದಕ್ಕಿಂತಲೂ ಹೆಚ್ಚಿನ ತಪಸ್ಸೇನು, ಅವರಿಗೆ ಬೇಕಾದ ಅನುಕೂಲತೆಗಳನ್ನು

ಒದಗಿಸಿ ತುಷ್ಟಿಪಡಿಸುವುದಕ್ಕಿಂತಲೂ ಹೆಚ್ಚಿನ ಯಜ್ಞವಾವುದು ಎಂದು ಭಾವಿಸಿ ಆ ಮಹನೀಯರು ತಮ್ಮ ತಪಸ್ಸಂಕಲ್ಪವನ್ನು ಕೆಲದಿನಗಳ ಮಟ್ಟಿಗೆ ಹಿಂದಿಟ್ಟು, ಆ ಅತಿಥಿ ಅಭ್ಯಾಗತರ ಆದರಣೆಯಲ್ಲಿ ತೊಡಗಿದರು. ಅಪ್ರಾರ್ಥಿತರಾಗಿ ಬಂದ ಅಷ್ಟುಮಂದಿ ಸಾಧುಸಜ್ಜನರ ಸಹವಾಸವು ಮತ್ತೊಂದು ದೊರೆತೀತೆಂದೂ, ಅದು, ದೊರೆತಿರುವ ಈ ಸುಸಂಧಿಯಲ್ಲೇ ನಡೆದು ಹೋಗಲೆಂದೂ ಎಣಿಸಿ ಸತ್ರಯಾಗವೆಂಬ ಹನ್ನೆರಡುವರ್ಷಕಾಲ ನಡೆವ ಮಹಾ ಯಾಗವೊಂದಕ್ಕೆ ಸಂಕಲ್ಪ ಮಾಡಿದರು. ಪ್ರತಿದಿನವೂ ಹವನಹೋಮಾದಿಗಳೂ, ಪೂಜಾ ಪಾರಾಯಣಾದಿಗಳೂ, ಪುರಾಣ ಪುಣ್ಯ ಕಥಾಪ್ರವಚನಗಳೂ ಬ್ರಾಹ್ಮಣ ಭೋಜನಾದಿಗಳೂ ವಿಶೇಷ ಸಂಭ್ರಮದಿಂದ ನಡೆಯತೊಡಗಿದುವು. ಸಕಲರೂ ಸಕಲವಿಧಗಳಿಂದಲೂ ಸಂತುಷ್ಟರಾಗಿ ಅವರ ಮಹಿಮೆಯನ್ನೂ, ಅಹಲ್ಯಾದೇವಿಯ ಪಾತಿವ್ರತ್ಯ ಪ್ರಭಾವವನ್ನೂ, ಸಹಸ್ರ ಮುಖಗಳಿಂದ ಹೊಗಳ ತೊಡಗಿದರು. ಹೀಗೆ ಅತಿ ದಾರುಣವಾದ ದ್ವಾದಶವರ್ಷ ವೀರಕ್ಷಾಮಕಾಲದಲ್ಲೂ ಯಾವ ಚಿಂತೆಯೂ ಕಳವಳವೂ ಇಲ್ಲದಂತೆ ಅಷ್ಟುಮಂದಿಯನ್ನೂ ಸಂರಕ್ಷಣೆ ಮಾಡಿದ ಮಹರ್ಷಿಗಳ ಮಹಿಮೆಯನ್ನು ಕುರಿತು ಇಂದ್ರನಿಗೆ ಪರಮಾಶ್ಚರ್ಯವಾಯಿತು.

---

## ಅಧ್ಯಾಯ ೪ "ಭೀಕರ ಶಾಪ"

ಅವರ ಸತ್ವ ಪರೀಕ್ಷೆಗೆಂದು ತಾನುಮಾಡಿದ ಕಾರ್ಯದಿಂದ ಅವರ ಅದ್ಭುತ ಸಾಮರ್ಥ್ಯವು ಪ್ರಕಟವಾಗುವುದರೊಂದಿಗೆ ಅವರ ಧವಳಕೀರ್ತಿಯೂ ಸರ್ವತ್ರವ್ಯಾಪಿಸಲು ಹೇಗೆ ಕಾರಣವಾಯಿತೆಂಬುದನ್ನು ಕಂಡು ಇಂದ್ರನು ಇನ್ನು ಹೆಚ್ಚಾಗಿ ಲೋಕವನ್ನು ದಣಿಸುವುದು ಯೋಗ್ಯವಲ್ಲವೆಂದು ಭಾವಿಸಿ ಸರ್ವತ್ರ ಸುವೃಷ್ಟಿಯಾಗುವಂತೆ ಆಜ್ಞಾಪಿಸಿದನು. ಒಡನೆ ಎಲ್ಲಾ ಕಡೆಯಲ್ಲೂ ವಿಶೇಷ ಮಳೆ ಸುರಿದು, ಕೆರೆಕಟ್ಟೆಗಳೆಲ್ಲ ತುಂಬಿದುವು; ಗಿಡಮರಗಳಲ್ಲಿ ಫಲ ಪುಷ್ಪಗಳೂ ವಿಶೇಷವಾಗಿ ಬೆಳೆದುವು;

ಪಶುಪಕ್ಷಿಗಳಿಗೆ ಸಮೃದ್ಧಿಯಾಗಿ ಆಹಾರ ಪಾನೀಯಗಳು ದೊರೆತುವು; ಲೋಕದ ಕ್ಷುದ್ಬಾಧೆಯಡಗಿ ಸರ್ವತ್ರ ಶಾಂತತೆ ತಲೆದೋರಿತು.

ಸರ್ವತ್ರ ಸುವೃಷ್ಟಿಯಾಗಿ ತೃಣಜಲಗಳು ಸಮೃದ್ಧಿಗೊಂಡ ವೃತ್ತಾಂತವು ಗೌತಮಾಶ್ರಮದಲ್ಲಿ ವಾಸಿಸಿದ್ದ ದೇಶವಿದೇಶಗಳವರಿಗೆ ತಿಳಿಯಿತು. ಒಡನೆ ಅವರಿಗೆ ಸ್ವಗ್ರಾಮಸ್ವಸ್ಥಳಗಳಮೇಲೆ ಮನಸ್ಸು ತಿರುಗಿತು. ತಮ್ಮ ಹೊಲಮನೆಗಳನ್ನು ರೂಢಿಸಿಕೊಳ್ಳಬೇಕೆಂಬ ಆಸೆಯುಂಟಾಯಿತು. ಎಲ್ಲರೂ ಗೌತಮ-ಅಹಲ್ಯಾದೇವಿಯರ ಬಳಿಗೆ ನಡೆದು, ಅವರ ಸೌಜನ್ಯವನ್ನೂ ಅವರಿಂದ ತಮಗಾದ ಎಣೆಯಿಲ್ಲದ ಮಹೋಪಕಾರವನ್ನೂ ಬಾಯಾರೆ ಹೊಗಳಿ, ಇನ್ನು ತಮ್ಮ ತಮ್ಮ ಸ್ಥಳಗಳಿಗೆ ಹೋಗಲು ಅಪ್ಪಣೆ ಕೊಡಿಸಬೇಕೆಂದು ಬೇಡಿಕೊಂಡರು. ಗೌತಮರಾದರೋ, ಅಷ್ಟುದಿನಗಳವರೆಗೆ ಒಂದು ಪದ್ಧತಿಯನ್ನು ಅನುಸರಿಸಿ ನಡೆಯುತ್ತ ಬಂದ ಸಾಧುಸೇವೆಯೂ ಋಷಿಮುನಿಗಳ ಸಹವಾಸವೂ ತಪ್ಪಿ, ಆಶ್ರಮವು ಪುನಃ ನಿರ್ಜನವಾಗುವುದಲ್ಲಾ ಎಂಬೊಂದು ಚಿಂತೆಯು ಬಾಧಿಸತೊಡಗಲು,—'ಇನ್ನೂ ಕೆಲವು ದಿನಗಳು ಇದ್ದುಹೋಗಿ; ಅಥವ ಇಲ್ಲೇ ಇದ್ದು ಬಿಡಿ, ಏಕೆ, ಇಲ್ಲಿ ನಿಮ್ಮ ಸ್ವಸ್ಥಳಕ್ಕಿಂತಲೂ ಯಾವ ಭಾಗದಲ್ಲಿ ಅನಾನುಕೂಲವಿದೆ? ತೊಂದರೆಯಿದೆ?' ಎಂದು ಮುಂತಾಗಿ ಉಪಚರಿಸಿ, ಹೊರಡಲು ಅನುಮತಿ ಕೊಡಲಿಲ್ಲ. ಅಷ್ಟುದಿನಗಳವರೆಗೆ ಕೇವಲ ಪುತ್ರವತ್ ಪರಿಪಾಲನೆಮಾಡಿದ ಆ ಮಹರ್ಷಿ ದಂಪತಿಗಳ ಇಷ್ಟಕ್ಕೆ ವಿರೋಧವಾಗಿ ನಡೆಯಲು, ಯಾರಿಗೂ ಮನಸ್ಸು ಬಾರದೆ, ಇಷ್ಟವಿಲ್ಲದಿದ್ದರೂ ಪುನಃ ಕೆಲವುದಿನಗಳು ಅಲ್ಲೇ ವಾಸಿಸಿದರು. ದಿನದಿನಕ್ಕೆ ಅವರಿಗೆ ಸ್ವದೇಶಸ್ವಸ್ಥಳಗಳಮೇಲಿನ ಅಪೇಕ್ಷೆಯು ಬಲವಾಗತೊಡಗಿತು. ಹೋಗಿ ಪ್ರಾರ್ಥಿಸಿದಾಗಲೆಲ್ಲ,—"ಇನ್ನೂ ನಾಲ್ಕುದಿನವಿದ್ದು ದಯಮಾಡಿಸಿ; ಆತುರವೇಕೆ?" ಎಂದು, ಆ ದಂಪತಿಗಳು ಉಪಚರಿಸುತ್ತಾ ಪ್ರೇಮಪೂರ್ವಕ ಪ್ರಾರ್ಥಿಸುತ್ತ ಪ್ರಯಾಣಕ್ಕೆ ಅನುಮತಿಕೊಡದೆ ಸಾವಕಾಶಮಾಡುತ್ತಲೇ ಬಂದರು. ಕೊನೆಗೆ ಒಂದುದಿನ—'ಈ ಗೌತಮರೂ ಅವರ ಪತ್ನಿ ಅಹಲ್ಯೆಯೂ ನಮ್ಮನ್ನು ಕ್ಷಾಮಕಾಲದಲ್ಲಿ ಅನ್ನವಿತ್ತು ಪೋಷಿಸಿದರು ನಿಶ್ಚಯ. ಆದರೆ ಸರ್ವತ್ರ ಸುಭಿಕ್ಷವಾಗಿರುವ

ಈ ಕಾಲದಲ್ಲಿ ನಾವು ನಮ್ಮ ನಮ್ಮ ಸ್ವಸ್ಥಾನಗಳಿಗೆ ಹೋಗದಂತೆ ಪ್ರತಿ
ಬಂಧಿಸುವುದು ಯಾವನ್ಯಾಯ ? ಇದಕ್ಕೇನು ಮಾಡೋಣ ? ” ಎಂದು
ಎಲ್ಲರೂ ಒಂದೆಡೆಕಲೆತು ಯೋಚಿಸಿದರು. ಅದೇನು ದುಷ್ಕಾಲಮಹಿ
ಮೆಯೋ ! ಆಗ ಅವರಿಗೊಂದು ದುರಾಲೋಚನೆಯು ತೋರಿತು. ಇವರ
ಮೇಲೆ ಯಾವುದಾದರೊಂದು ಬಗೆಯ ಅಪವಾದವನ್ನು ಹೊರಿಸಿ, ನಾವು
ಇಲ್ಲಿಂದ ಪಾರಾಗಿ ಹೋಗಬೇಕೆಂದೆನಿಸಿತು. ಪರಮ ಸಾಧುಗಳೂ
ಮಹೋಪಕಾರಿಗಳೂ ಆದ ಆ ಸಾಧ್ವಿ ಅಹಲ್ಯಾ ದೇವಿಯ ಮೇಲೂ,
ಗೌತಮರ ಮೇಲೂ ಎಂತಹ ಅಪವಾದವನ್ನು ಹೊರಿಸಲು ಸಾಧ್ಯ?
ಎಲ್ಲರೂ ಯೋಚನಾ ಮಗ್ನರಾದರು, ಅವರಲ್ಲಿ ವಿಧಿ ಪ್ರೇರಿತನಾದ
ಯಾವನೋ ಒಬ್ಬನು—‘ಗೌತಮರಿಗೆ ಗೋವಿನ ವಿಷಯದಲ್ಲಿ ಬಹು
ಭಕ್ತಿ ಶ್ರದ್ಧೆಗಳುಂಟು. ಒಂದು ಗೋವು ಅವರಿಂದ ಹತವಾಗುವಂತೆ
ಏರ್ಪಡಿಸಿ ತನ್ಮೂಲಕ ಗೋಹತ್ಯೆಮಾಡಿದ ಮಹಾಪಾಪಿಗಳಾದ ಅವರ
ಆಶ್ರಮದಲ್ಲಿ ನಾವು ವಾಸಿಸಲಾರೆವೆಂದು ಹೊರಟುಹೋಗಬೇಕು.’
ಎಂದು ಸೂಚಿಸಿದನು.

ಆ ಮಾತನ್ನು ಕೇಳಿದೊಡನೆಯೇ ಎಲ್ಲರಿಗೂ ಅತ್ಯಂತ ವಿಷಾದವೆನ್ನಿ
ಸಿತು. ದುರ್ಭಿಕ್ಷಕಾಲದಲ್ಲಿ ಅನ್ನದಾನ ಮಾಡಿ ಕಾಪಾಡಿದ ಆ ಮಹಾ
ನುಭಾವರ ಮೇಲೆ ಅಂತಹ ದುರಂತ ಘೋರಪಾಪವನ್ನು ಹೊರಿಸ
ಬಹುದೇ ! ಎಂದು ಸ್ವಲ್ಪಕಾಲ ಮಹಾಚಿಂತೆಯಾಯಿತು. ಆದರೆ ಅದೆಂ
ತಹ ಕಾಲಗತಿಯೋ! ಉತ್ತರಕ್ಷಣದಲ್ಲೇ ಅದೇ ವಿಹಿತವೆಂದು ತೋರಿತು.
ಒಡನೆ, ಮುಂದೊಂದುದಿನ ಬಹಿಶ್ಶಂಕೆಗೆಂದು ನಿರ್ಜನಸ್ಥಳದಲ್ಲಿ ಕುಳಿತಿದ್ದ
ಗೌತಮರ ಬಳಿಗೆ, ಮಾಯಾನಿರ್ಮಿತವಾದ ಒಂದು ಗೋವು ಹೋಗು
ವಂತೆ ಅವರು ಉಪಾಯಮಾಡಿದರು. ಆ ಗೋವು ಅವಶರಾಗಿ ಕುಳಿ
ತಿದ್ದ ಅವರಮೇಲೇರಿ ಹೋಗುವಂತೆ ನಟಿಸಿತು. ತಕ್ಷಣ ಏಳಲೂ ಮಾರ್ಗ
ವಿಲ್ಲದೆ, ಅದನ್ನು ಬೆದರಿಸಿ ಅತ್ತ ಸಾಗುವಂತೆ ಮಾಡೋಣವೆಂದು ಒಂದು
ಬಾರಿ ‘ಹೇ’ ಎಂದು ಗರ್ಜಿಸಿದರು. ಅಷ್ಟೆ! ಅಷ್ಟುಮಾತ್ರ ಶಬ್ದಕ್ಕೇ
ಆ ಮಾಯಾಗೋವು ಗಾಬರಿಗೊಂಡು, ಅತ್ತ ಸರಿದು ಓಡಿ ಮುಗ್ಗರಿಸಿ
ಬಿದ್ದು ಒಡನೆ ಮೃತವಾಯಿತು. ಆ ಪರಿಸ್ಥಿತಿಯನ್ನು ಕಂಡು ಬಹು

ಗಾಬರಿಗೊಂಡ ಗೌತಮರು ಒಡನೆ ಪ್ರಕ್ಷಾಳನ ಮಾಡಿಕೊಂಡೆದ್ದು ಅದರ ಬಳಿಗೆ ಹೋಗಿ ನೋಡಲು ಅದಕ್ಕೆ ಪ್ರಾಣವಿದ್ದ ಚಿಹ್ನೆಗಳೇ ತೋರಲಿಲ್ಲ. ಅಕಸ್ಮಾತ್ತಾಗಿ ಪ್ರಾಪ್ತವಾದ ಆ ಮಹತ್ಪಾಪ ಸಂಘಟನೆಯು, ಅವರನ್ನು ಸಿಡಿಲು ಬಡಿದಂತೆ ನಡುಗಿಸಿಬಿಟ್ಟಿತು. ಒಡನೆ ಮನಸ್ಸು ಭ್ರಾಂತಿಗೊಂಡಂತಾಗಿ ಏನೂ ತೋರದೆ, ಅಲ್ಲಿ ನಿಂತಿರಲಾರದೆ, ಆಶ್ರಮಕ್ಕೆ ಬಂದು ನಡೆದ ದುರಂತ ಸಂಗತಿಯನ್ನು ಪತ್ನಿಯೊಂದಿಗೆ ತಿಳಿಸಿದರು. ಆ ಸಂಗತಿಯು ಒಡನೆ ಕಾಡುಕಿಚ್ಚಿನಂತೆ ಆಶ್ರಮವಾಸಿಗಳೆಲ್ಲರ ಕಿವಿಗೂ ವ್ಯಾಪಿಸಿಬಿಟ್ಟಿತು. ಅಷ್ಟುದಿನ ತಮಗೆ ಅವರು ಮಾಡಿದ ಮಹೋಪಕಾರವನ್ನೂ ಕ್ಷಣಕಾಲದಲ್ಲಿ ಮರೆತು, ಆ ಜನರೆಲ್ಲರೂ ಗೌತಮರನ್ನು—ಗೋವಧೆ ಮಾಡಿದ ಮಹಾಪಾಪಿಯೆಂದು ನಿಂದಿಸಿ, ಅಂತಹ ಪಾಪಮಯ ಕ್ಷೇತ್ರದಲ್ಲಿ ಕ್ಷಣಕಾಲವೂ ನಿಲ್ಲಲಾರೆವೆಂದು ಎಲ್ಲರೂ ಹೇಳದಂತೆಯೇ ಹೊರಟು ನಡೆದರು. ಆಶ್ರಮವು ಕ್ಷಣಮಾತ್ರದಲ್ಲಿ ಶುದ್ಧ ನಿರ್ಜನ ಪ್ರದೇಶವಾಯಿತು. ಅಕಸ್ಮಾತ್ತಾಗಿ ಪ್ರಾಪ್ತವಾದ ಆ ಸ್ಥಿತಿಯನ್ನು ಕುರಿತು ಗೌತಮರು ಮಹಾ ಆತಂಕ ಸಂಕ್ರಾಂತರಾದರು. ಅವರ ಮನಸ್ಸು ಕಲಕಿಹೋದಂತಾಗಿ ಯಾವ ವಿಚಾರವನ್ನೂ ಯೋಚಿಸಿ ನಿರ್ಧರಿಸಲಾರದುದಾಯಿತು.

ತರುವಾಯ ಗೌತಮರು ಕೆಲವು ದಿನ ಆಸ್ಥಳವನ್ನು ಬಿಟ್ಟಿರುವುದು ಯುಕ್ತವೆಂದು ಭಾವಿಸಿ, ಅಲ್ಲಿಂದ ಹೊರಟು, ಮತ್ತೊಂದೆಡೆಗೆ ನಡೆದರು, ಮಾರ್ಗದಲ್ಲಿದ್ದ ಒಂದು ತೊರೆಯಲ್ಲಿ ಸ್ನಾನಮಾಡಿ, ಸಂಧ್ಯಾವಂದನಾದಿ ನಿತ್ಯ ಕ್ರಿಯೆಗಳನ್ನು ಮುಗಿಸಿಕೊಂಡು, ಮಹಾ ಕಠಿಣ ವ್ರತನಿಷ್ಠೆಗಳಿಂದ ತಪಸ್ಸುಮಾಡಿ, ಆ ಗೋಹತ್ಯಾ ಪಾಪವನ್ನು ನಿವಾರಿಸಿಕೊಳ್ಳಲು ಸಂಕಲ್ಪ ಮಾಡಿದರು. ಅವರು ಹಾಗೆ ವ್ರತನಿಷ್ಠರಾಗಿ ಒಂದು ವರ್ಷಕಾಲ ಆಚರಿಸಿದ ತಪಸ್ಸಿಗೆ ಮೆಚ್ಚಿ ಬ್ರಹ್ಮದೇವನು ಪ್ರತ್ಯಕ್ಷನಾಗಿ—'ಮಹರ್ಷಿವರ, ಬಹುಕಷ್ಟಪಟ್ಟೆ! ಚಿಂತಿಸದಿರು. ನಿನ್ನೀ ತಪಃಪ್ರಭಾವದಿಂದ ಶ್ರೀವಿಷ್ಣು ಪಾದೋದ್ಭವೆಯಾದ ಗಂಗಾದೇವಿಯೇ ಈ ನದಿಯಲ್ಲಿ ಸನ್ನಿಹಿತಳಾಗಿ ಬಂದು, ನಿನಗೆ ಪ್ರಾಪ್ತವಾಗಿರುವ ಈ ಅಸಹ್ಯ ಮನೋವ್ಯಥೆಯನ್ನೂ, ದುರಂತ ಪಾಪವನ್ನೂ ನಿವಾರಿಸುವಳು.' ಎಂದು ನುಡಿದು ಅಂತರ್ಧಾನ

ವಾದನು. ತರುವಾಯ ಗೌತಮರು ಸ್ನಾನಮಾಡಿ ಶುಚಿರ್ಭೂತರಾಗಿ, ಗಂಗಾಮಾತೆಯ ಸಂದರ್ಶನಕ್ಕಾಗಿ ಕಾದಿರಲು, ಆವರೆಗೆ ಕೇವಲ ಸಾಮಾನ್ಯ ತೊರೆಯಂತಿದ್ದ ಆ ಹೊಳೆಯು ಏಕಾ ಏಕಿ ಹಾಲ್ತೊರೆಯಂತಹ ದಿವ್ಯ ಜಲದಿಂದ ತುಂಬಿ ಪ್ರವಹಿಸತೊಡಗಿತು. ಮತ್ತು ಅಲ್ಲೀ ಮಾರ್ಗದ ಆಶ್ರಮ ಪ್ರಾಂತದಲ್ಲಿ ಬಿದ್ದಿದ್ದ ಆ ಗೋವಿನ ಅಸ್ಥಿಪಂಜರದ ಮೇಲೂ ಆ ಪವಿತ್ರೋದಕವು ಪ್ರವಾಹ ಭರದಿಂದ ನುಗ್ಗಲು, ಒಡನೆ ಕೇಳುವುದೇನು- ಆಶ್ಚರ್ಯವಾಶ್ಚರ್ಯವು ! ಒಂದು ವರ್ಷದ ಹಿಂದೆ ಮೃತವಾಗಿ ಬಿದ್ದಿದ್ದ ಆ ಗೋವು ಸ್ವಸ್ವರೂಪಧಾರಣಮಾಡಿ ಎದ್ದುನಿಂತಿತು! ಅವರ ಪುಣ್ಯದ ಮೂರ್ತಿಸ್ವರೂಪವೋ ಎಂಬಂತೆ ಎದ್ದುನಿಂತ ಆ ಗೋವನ್ನು ಕಂಡೊಡ ನೆಯೇ ಗೌತಮರು, ಸಾರೋದ್ಧಾರವಾಗಿ ಆನಂದ ಬಾಷ್ಪಗಳನ್ನು ಸುರಿ ಸುತ್ತಾ ಆ ಗೋವಿನೆಡೆಗೆ ನಡೆದು, ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ–ಪಾಪಮುಕ್ತನಾಗಿ ಧನ್ಯನಾದೆನೆಂದುಕೊಂಡರು. ಇಂತು ಮೃತ ಗೋವನ್ನು ಬದುಕಿಸಿ ಗೌತಮರ ಗೋಹತ್ಯಾ ಪಾಪವನ್ನು ನಿವಾರಣೆ ಮಾಡಿದಂದಿನಿಂದ ಆ ನದಿಗೆ 'ಗೋದಾವರಿ' ಎಂಬ ಪವಿತ್ರನಾಮವು ಪ್ರಾಪ್ತವಾಯಿತೆಂಬ ಆರ್ಯೋಕ್ತಿಯುಂಟು.

ತರುವಾಯ ಗೌತಮರು ತಾವು ದ್ವಾದಶವರ್ಷ ಕ್ಷಾಮಕ್ಕೆ ಹಿಂದೆ ಸಂಕಲ್ಪಿಸಿ, ಪೂರ್ಣವಾಗದೆ ನಿಂತಿದ್ದ ತಪಃಕ್ರಿಯೆಯನ್ನು ಪುನಃ ಮುಂದ ರಿಸಲು ಮನಸ್ಸುಮಾಡಿದರು. ಅಷ್ಟು ಬಗೆಯಿಂದ ಮೇಲೆ ಮೇಲೆ ವಿಘ್ನವನ್ನು ಉಂಟುಮಾಡುತ್ತಿದ್ದರೂ, ತಮ್ಮ ಧ್ಯೇಯ ಸಾಧನೆಯಲ್ಲಿ ಮುಂದರಿಸುತ್ತಿದ್ದ ಆ ತಪಸ್ವಿಶ್ರೇಷ್ಠರನ್ನು ಕಂಡು ಇಂದ್ರನು, ಈ ಬಾರಿ ಅವರನ್ನು ಬೇರೊಂದು ಬಗೆಯ ಕಠಿಣ ಪರೀಕ್ಷೆಗೆ ಒಳಪಡಿಸಬೇ ಕೆಂದು ಯೋಚಿಸಿದನು. ಹಲವು ಬಗೆಯ ವಿಘ್ನಗಳಿಗೂ ನಿರುತ್ಸಾಹಿತ ರಾಗದೆ ತಮ್ಮ ಕಾರ್ಯಪಥದಿಂದ ವಿಚಲಿತರಾಗದಿದ್ದ ಅವರನ್ನು ಈಗ ಬೇರೆಯೊಂದು ಬಗೆಯಿಂದ ಪರಾಭವಗೊಳಿಸಲು ನಿಶ್ಚಯಿಸಿದನು.

ಗೌತಮರು ಮಹಾತಪಸ್ವಿಗಳು. ಅವರ ಮನಸ್ಸು ಯಮನಿಯ ಮಾದಿ ನಿಬಂಧನೆಗಳಿಗೊಳಪಟ್ಟು, ಧ್ಯಾನಧಾರಣಾದಿ ನಿರಂತರಾಭ್ಯಾಸಬಲ ದಿಂದ ಪರಿಪಕ್ವವಾಗಿದ್ದಿತು. ಅವರು ಸ್ಥಿತಪ್ರಜ್ಞರು. ಕಾಮಕ್ರೋಧ

ಲೋಭ ಮೋಹ ಮದಮಾತ್ಸರ್ಯಗಳೆಂಬ ಕಳೆಗಳು ಅವರ ಮನೋಮಯ ಕ್ಷೇತ್ರದಲ್ಲಿ ನಿರ್ಬೀಜವಾಗಿದ್ದುವು. ಪಡೆಯಬೇಕಾದ ಯಾವ ಫಲ ಪ್ರಯೋಜನವೂ ಇಲ್ಲದಿರಲು ಅವರು ಆತ್ಮತೃಪ್ತರಾಗಿದ್ದರು. ಅವರ ಮನಸ್ಸು ಸುಖವು ಪ್ರಾಪ್ತವಾಯಿತೆಂದು ಸಂತೋಷದಿಂದ ಉಬ್ಬದೆ, ದುಃಖಬಂದಿತೆಂದು ಕಳವಳಗೊಳ್ಳದೆ ಸರ್ವದಾ ಸಮುದ್ರಮಧ್ಯದ ಜಲರಾಶಿಯಂತೆ ಶಾಂತವಾಗಿರುವುದು. ಭಯಕೋಪ ದಂಭಅಭಿಮಾನಅಹಂಕಾರಾದಿ ಅಸಹ್ಯ ವಸ್ತುಗಳು ಅವರನ್ನು ಸಮೀಪಿಸಲಾರದಾಗಿದ್ದುವು. ಅವರಿಗೆ ಯಾರಲ್ಲೂ ಅತಿಶಯ ಸ್ನೇಹವಾಗಲೀ ದ್ವೇಷವಾಗಲಿ ಉಂಟಾಗದು. ಬುದ್ಧಿಶಾಲಿಯಾದ ಸಾರಥಿಯೊಬ್ಬನು, ಮಾರ್ಗತಪ್ಪಿ ಓಡುವ ಕುದುರೆಗಳನ್ನು ಕಡಿವಾಣಗಳಿಂದ ಬಿಗಿಹಿಡಿದು ತನ್ನ ಸ್ವಾಧೀನದಲ್ಲಿಟ್ಟುಕೊಂಡು, ತನ್ನ ಮನ ಬಂದಂತೆ ನಡೆಯಿಸುವಹಾಗೆ ಅವರು ತಮ್ಮ ಸಮಸ್ತ ವಿಷಯೇಂದ್ರಿಯಗಳನ್ನೂ ಮನಸ್ಸನ್ನೂ ಜಯಿಸಿ, ತಮ್ಮ ಅಧೀನಕ್ಕೆ ಒಳಪಡಿಸಿಕೊಂಡು, ಅವುಗಳನ್ನು ಆಳಲು ಸಮರ್ಥರಾಗಿದ್ದರು. ಮಾತ್ರವಲ್ಲ—ಹಾಗೆ ತಮಗೆ ಸ್ವಾಧೀನವಾದ ಮನಸ್ಸನ್ನು ಪರಮಾತ್ಮಚಿಂತನೆಯಲ್ಲಿ ತೊಡಗಿಸಿ, ಸರ್ವದಾ ಬ್ರಹ್ಮಮಗ್ನರಾಗಿರುವರು. ಅವರ ಬುದ್ಧಿಯು ವ್ಯವಸಾಯಾತ್ಮಕವಾದುದಾಗಿ ಪರಿಪಕ್ವ ಸ್ಥಿತಿಯನ್ನೈದಿ ಬ್ರಹ್ಮಚಿಂತನಕ್ಕೆ ಯೋಗ್ಯವಾಗಿದ್ದಿತು. ಆದರೆ ಅವರ ಸಹಧರ್ಮಿಣಿಯಾದ *ಅಹಲ್ಯಾ ದೇವಿಯ ಬುದ್ಧಿಯು ಹಾಗೆ ಪರಿಪಕ್ವವಾದುದಾಗಿರಲಿಲ್ಲ. ಅದು ಜಪತಪಧ್ಯಾನಧಾರಣೆಗಳೆಂಬ ಕಠಿಣವ್ಯವಸಾಯಕ್ಕೆ ಎಂದೂ ಒಳಪಟ್ಟಿರಲಿಲ್ಲ. ಅಲ್ಲದೆ ಅಹಲ್ಯಾದೇವಿಯು ವಯಸ್ಸುಗಳಿತವಾದ ವೃದ್ಧೆಯಲ್ಲ. ಆಕೆಯ ದೇಹವಾದರೂ ದುರ್ಬಲವಾದುದಾಗಿರಲಿಲ್ಲ. ಸಮಸ್ತ ಕರಣೇಂದ್ರಿಯಗಳೂ ಪೂರ್ಣಬೆಳೆವಣಿಗೆಯನ್ನು ಹೊಂದಿ ಬಲಗೊಂಡು ಅತ್ಯಂತ ಪಟುವಾಗಿದ್ದುವು. ಆ ಸ್ಥಿತಿಯಲ್ಲಿದ್ದ ಆಕೆಯು ತನ್ನ ಪತಿ, ತನ್ನ ಪುತ್ರ ತನ್ನ ದೇಹಾಭಿಮಾನ, ಸುಖಾಭಿಲಾಷೆ ಇವುಗಳಲ್ಲಿ ಲೋಭ

---

* ಹಲ ಎಂಬ ಪದಕ್ಕೆ ನೇಗಿಲು ಎಂದರ್ಥ. ಹಲ್ಯ ಎಂಬ ಪದಕ್ಕೆ ಉಳಲ್ಪಟ್ಟದು ಎಂಬರ್ಥವೂ ಉಂಟು ಅ-ಹಲ್ಯ ಎಂದರೆ ಉಳಲ್ಪಟ್ಟುದಲ್ಲ ಎಂದರ್ಥವಾಗುವುದು.

ವನ್ನು ಬಿಡಲು ಒಮ್ಮೆಗೇ ಹೇಗೆ ಸಾಧ್ಯವಾದೀತು? ಶೀತೋಷ್ಣ ಸುಖ-
ದುಃಖಾದಿ ದ್ವಂದ್ವಗಳಲ್ಲಿ ಸಮಭಾವವನ್ನು ವಹಿಸಿರಲು ಅದು ಹೇಗೆ ಶಕ್ಯ
ವಾದೀತು! ಗೌತಮರ ನಿರಂತರ ಸಹವಾಸದಲ್ಲೂ, ಆಶ್ರಮದ ಶಾಂತ
ವಾತಾವರಣದಲ್ಲೂ ಕಾಮ ಕ್ರೋಧ ಲೋಭಾದಿಗಳ ಬೆಳೆವಣಿಗೆ ಉಲ್ಬಣಾ
ದಿಗಳಿಗೆ ಲೇಶಮಾತ್ರವೂ ಅವಕಾಶವಿರಲಿಲ್ಲವಾದರೂ, ಸ್ವಾಭಾವಿಕವಾಗಿ
ಮನೋಮಯ ಕ್ಷೇತ್ರವನ್ನು ಆಶ್ರಯಿಸಿರುವ ಆ ಕಳೆಯ ಬೀಜಗಳು
ಯೋಗ್ಯ ವ್ಯವಸಾಯವಿಲ್ಲದೆ, ಅಲ್ಲಿಂದ ಹೊರಹೊರಡಲಾರವಾದುದ
ರಿಂದ, ಅವು ತಳದಲ್ಲಡಗಿ ತಂಗಿ ಕುಳಿತಿದ್ದುವು.

ಅಹಲ್ಯಾದೇವಿಯು ಈವರೆಗೆ ಕೇವಲ ಶ್ರದ್ಧಾ ಭಕ್ತಿಯುತಳಾಗಿ
ಪತಿಪಾದಸೇವೆ ಗೃಹಕಾರ್ಯಗಳು ಗೋಮಾತಾಸೇವೆ, ತುಲಸಾರ್ಚನೆ
ಮುಂತಾದ ಪೂಜೆ ಪುರಸ್ಕಾರ ಪುಣ್ಯಕಥಾಶ್ರವಣಾದಿಗಳಲ್ಲಿ ಕಾಲ
ಕಳೆಯುತ್ತಿದ್ದಳಲ್ಲದೆ, ಜಪತಪಾದಿಗಳ ಗೊಡವೆಗೂ ಧ್ಯಾನ ಧಾರಣಾದಿ
ವಿಚಾರಗಳಿಗೂ ಹೋದವಳಲ್ಲ. ಮೇಲ್ಕಂಡಂತೆ ವ್ಯವಸಾಯಾತ್ಮಕ
ವಾಗದ ಬುದ್ಧಿಯು ಪರಿಪಕ್ವಸ್ಥಿತಿಗೆ ಬಾರದು. ಅರ್ಧದೇಹವೆನಿಸಿದ
ಸತಿಯ ಬುದ್ಧಿಯು ಪರಿಪಕ್ವವಾಗದೆ—ಕಳೆಗಳಿಂದ ವಿರಹಿತವಾಗದೆ ಬಂ
ಜರು ಭೂಮಿಯಂತೆ ಇದ್ದರೆ ಮಹಾತಪಸ್ಸಂಪನ್ನರೇ ಆದರೂ ಗೌತ
ಮರಿಗೆ ಮಹರ್ಷಿತ್ವವೂ ದೇವತೆಗಳಿಂದ ಪೂಜ್ಯತೆಯೂ ಹೇಗೆ ಲಭಿಸೀತು?
ಆದುದರಿಂದ ಕರ್ಮಾಭಿಮಾನಿದೇವತೆಗಳಿಂದ ಅವರ ವ್ಯವಸಾಯ ಕ್ರಿಯೆ
ಯು ಆರಂಭವಾಯಿತು.

ಒಡನೆಯೆ ಮಾನಸೇಂದ್ರಿಯಕ್ಕೆ ಅಭಿಮಾನದೇವತೆಯಾದ ಇಂದ್ರನು
ಆಕೆಯ ಮನೋಮಯ ಕ್ಷೇತ್ರವನ್ನು ಪ್ರವೇಶಿಸಿದನು—ಎಂದರೆ ಅದರ
ಮೇಲೆ ತನ್ನ ತೇಜಸ್ಸನ್ನು ಬೀರಿದನು. ಕೂಡಲೆ ಅಲ್ಲಿ ಚಲನೆಯುಂಟಾ
ಯಿತು. ಈವರೆಗೆ ಕೇವಲ ಶ್ರದ್ಧಾ ಭಕ್ತಿಯುಕ್ತವಾಗಿ ಶಾಂತವಾಗಿದ್ದ
ಮನಸ್ಸಿನಲ್ಲಿ ವಿಚಾರ ಪರಂಪರೆಗಳುಂಟಾಗಿ ವಿವಿಧ ಕಲ್ಪನೆಗಳು ತೋರ
ತೊಡಗಿದುವು. ಪಾತ್ರೆಯಲ್ಲಿದ್ದ ನೀರನ್ನು ಕಲಕಿದೊಡನೆಯೇ ಆವರೆಗೆ
ತಳದಲ್ಲಡಗಿ ಕುಳಿತಿದ್ದ ಕಶ್ಮಲಾದಿಗಳೆಲ್ಲವೂ ಮೇಲಕ್ಕೆ ಬಂದು, ಅದ
ರಲ್ಲಿನ ಸಮಸ್ತ ಜಲವೂ ಕಶ್ಮಲಯುಕ್ತವಾಗಿ ಹೋಗುವುದಲ್ಲವೆ?

ಹಾಗೆಯೇ, ಆಕೆಯ ಮನಸ್ಸಮುದ್ರದ ಅಡಿಯಲ್ಲಡಗಿ ಕುಳಿತಿದ್ದ ಕಾಮ ಕ್ರೋಧ ಲೋಭ ಮೋಹಾದಿಗಳೂ ಅಭಿಮಾನ ಅಹಂಕಾರ ಮುಂತಾದ ಕಶ್ಮಲಗಳೂ ಮೇಲಕ್ಕೆದ್ದುವು. ಆ ಕಲ್ಮಷ ಪದಾರ್ಥಗಳು ಮೇಲಕ್ಕೆ ಎದ್ದೊಡನೆಯೇ ಮುಂದೆ ಆಕೆಯ ಯೋಚನೆಗಳೆಲ್ಲವೂ ಕಲುಷಮಾರ್ಗವನ್ನೇ ಹಿಡಿದುವು. ಅವರೆಗೆ ಆಶ್ರಮ ಸಹಜವಾದ ಸಾಧುಸ್ವಭಾವದಿಂದ ಇದ್ದ ಅಹಲ್ಯೆಯ ಮನಸ್ಸಿನಲ್ಲಿ ಈಗ ವಿಚಿತ್ರವಿಚಾರಗಳು ತೋರಲಾಗಿದುವು. ಅಹಲ್ಯೆಯು ತನ್ನ ಭುವನ ಮೋಹನ ಸೌಂದರ್ಯಕ್ಕೆ ಪ್ರಪಂಚದಲ್ಲಿ ಈಡಿಲ್ಲವೆಂದು ತನ್ನಲ್ಲಿ ತಾನೇ ಅಹಂಕಾರ ಪಡುವಳು. ತನ್ನ ಸೌಂದರ್ಯ ಸೌಕುಮಾರ್ಯಗಳನ್ನು ಇತರರ ರೂಪಿನೊಂದಿಗೆ ಹೋಲಿಸಿನೋಡಿ ಹೆಮ್ಮೆಗೊಳ್ಳುವಳು. ಬ್ರಹ್ಮಪುತ್ರಿಯಾದ ತನ್ನ ವಿವಾಹಕಾಲದಲ್ಲಿ ತ್ರಿಲೋಕಾಧಿಪನಾದ ಇಂದ್ರನು ಸಹ ವರಿಸಲಪೇಕ್ಷಿಸಿ, ಭೂಪ್ರದಕ್ಷಿಣೆಯ ಕಾರ್ಯವನ್ನು ಕೈಕೊಂಡನಲ್ಲ–ಶಚೀಪತಿಯಾದ ಆತನ ಮನಸ್ಸನ್ನೂ ಆಕರ್ಷಿಸಿದ ತನ್ನ ರೂಪು ಯೌವನ ಸಂಪತ್ತುಗಳಿಗೆ ಇನ್ನು ಎಣೆಯುಂಟೇ ಎಂದು ಉಬ್ಬುವಳು. ದ್ವಾದಶವರ್ಷ ಕ್ಷಾಮಕಾಲದಲ್ಲಿ, ಕ್ಷುದಾರ್ತರಾದ ಸಹಸ್ರಾರುಗಳೊಂದಿಗೆ ನಿರಂತರ ಅನ್ನದಾನ ನಡೆಸಿದೆವಲ್ಲ, ನಮ್ಮ ಸಮಾನರಾರು! ಎಂಬ ಮದವು ಮನಸ್ಸಿನಲ್ಲಿ ತೋರಿ, ನಮ್ಮ ಪುಣ್ಯಕ್ಕೆ ಮೇರೆಯುಂಟೆ ಎಂದು ಹಲುಬಿಕೊಳ್ಳುವಳು. ತನ್ನ ಮಗ ಶತಾನಂದನನ್ನು ಕೇವಲ ಲೋಭ ಮೋಹ ಬದ್ಧಳಾಗಿ ಅಪ್ಪಿ ಮುದ್ದಾಡಿ, ಅಂತಹ ಪುತ್ರನನ್ನೂ, ಮಹಾತಪಸ್ಸಂಪನ್ನನಾದ ಪತಿಯನ್ನೂ ಪಡೆದ ತನ್ನ ಭಾಗ್ಯಕ್ಕೆ ಸಮನಿಲ್ಲವೆಂದು ಮಿಕ್ಕವರನ್ನು ತುಚ್ಛರೀತಿಯಿಂದ ಕಾಣುವವಳು. ಆಶ್ರಮದ ವಿವಿಧ ಕೆಲಸಕಾರ್ಯಗಳಲ್ಲಿ ಅಸಹ್ಯವು ತೋರಲಾಗಿತು. ಹೀಗೆ ಆಕೆಯ ಮನಸ್ಸು ಅತಿಶಯ ಚಂಚಲಸ್ವಭಾವವನ್ನು ಹೊಂದಿ ತೊಂದರೆಪಡತೊಡಗಿತು. ಅವರೆಗೆ ತನ್ನ ಮನಸ್ಸಿನಲ್ಲಿ ಎಂದೂ ಉತ್ಪನ್ನವಾಗದಿದ್ದ ಆ ಭಾವನೆಗಳು ಆಗ ಏಕೆ ಪ್ರಾಪ್ತವಾದುವೆಂದೂ, ತನ್ನ ರೂಪು ಯೌವನ ಸೌಂದರ್ಯ ವಿಷಯಕವಾದ ಅಭಿಮಾನ ಅಹಂಕಾರಗಳು ಜನ್ಮಾರಭ್ಯ ಎಂದೂ ಇಲ್ಲದೆ ಅಂದೇಕೆ ಒಂದಾದಮೇಲೊಂದರಂತೆ ಬರತೊಡಗಿದವೆಂದೂ ಆಕೆಗೆ ಅತಿಶಯ ಭೀತಿಯುಂಟಾಗ

ತೊಡಗಿತು. ಅದಕ್ಕೆ ಕಾರಣ ತಿಳಿಯದು ; ಪ್ರತಿಕ್ರಿಯೆಯೂ ಮೊದಲೇ ಗೋಚರಿಸದು. ಮುಂದೇನು ಮಾಡಬೇಕೆಂಬುದು ತೋರದೆ ಆಕೆಯು ಭ್ರಾಂತಳಂತಾದಳು; ಸ್ವಲ್ಪಕಾಲಕಳೆಯಿತು.

ಸಂಕಲ್ಪಪೂರ್ವಕ ಒಂದು ಪಕ್ಷಕಾಲ ಧ್ಯಾನಮಗ್ನರಾಗಿ ಕುಳಿತಿದ್ದ ಗೌತಮರು ಬಹಿರ್ಮುಖರಾದರು. ಮನಸ್ಸಮುದ್ರದಲ್ಲಿ ಮೇಲೆ ಮೇಲೆ ಉಕ್ಕಿ ಉಕ್ಕಿ ಬರುತ್ತಿದ್ದ ಅಭಿಮಾನ ಅಹಂಕಾರ ಹೆಮ್ಮೆ ಲೋಭ ಮೋಹ ಮುಂತಾದ ಅಲೆಗಳ ಹೊಡೆತವನ್ನು ತಡೆದುಕೊಳ್ಳಲಾರದೆ ಕಂಗೆಟ್ಟು, ಭೀತಿಯಿಂದ ಕಂದಿದ ಮುಖವುಳ್ಳವಳಾಗಿದ್ದ ತಮ್ಮ ಪತ್ನಿಯನ್ನು ಕಂಡು, ಗೌತಮರು ಒಮ್ಮೆಗೇ ಹೀಗಾಗಲು ಕಾರಣವೇನಿರಬಹುದೆಂದು ಜ್ಞಾನದೃಷ್ಟಿಯಿಂದ ನೋಡಿದರು. ಒಡನೆಯೇ ಕರತಲಾಮಲಕದಂತೆ ಸಮಸ್ತವೂ ತಿಳಿದುಹೋಯಿತು.—"ಆಹಾ ಇದು ಇಂದ್ರನು ಮಾಡಿಟ್ಟ ಕಾರ್ಯವು! ನಾನು, ಸಾಧ್ವಿಯಾದ ಇವಳು ಶ್ರವಣ ಕೀರ್ತನ ಸ್ಮರಣ ಪಾದಸೇವನ ಅರ್ಚನ ವಂದನ ದಾಸ್ಯ ಸಖ್ಯ ಆತ್ಮನಿವೇದನ ಎಂಬ ಈ ಒಂಬತ್ತು ಬಗೆಯ ಭಕ್ತಿಮಾರ್ಗದಲ್ಲಿ ಕ್ರಮವಾಗಿ ನಡೆದು ಬಂದರೆ ಮುಂದೆ ಸ್ವಾಭಾವಿಕವಾಗಿಯೇ ಮನಸ್ಸು ಪರಿಪಕ್ವಸ್ಥಿತಿಯನ್ನು ಹೊಂದುವುದೆಂದು ಯೋಚಿಸಿ, ಯಮನಿಯಮಾದಿ ಕಠಿಣಾಭ್ಯಾಸವನ್ನು ಈಕೆಗೆ ವಿಧಿಸದೆ ಇದ್ದೆನು. ಆದರೆ, ಅಷ್ಟರಲ್ಲಿ ಚಂಚಲನಾದ ಇಂದ್ರನು, ಪಕ್ವವಲ್ಲದ ಇವಳ ಮನಸ್ಸಿನಲ್ಲಿ ಈ ಬಗೆಯ ಚಲನೆಯನ್ನು ಹುಟ್ಟಿಸಿ, ನಮ್ಮ ದಾಂಪತ್ಯದ ಸುಖಜೀವಿತಕ್ಕೆ ವಿಘ್ನವನ್ನುಂಟುಮಾಡಿದನಲ್ಲಾ!" ಎಂದು ಸಂತಾಪಗೊಂಡರು. ಇಂದ್ರನು ಹಾಗೆ ಮಾಡಲು ಕಾರಣವೇನಿರಬಹುದೆಂದೂ ಯೋಚಿಸತೊಡಗಿದರು. ಆದ್ಯಂತ ಸಂಗತಿಯೂ ಸ್ಪಷ್ಟವಾಗಿ ಗೋಚರಿಸಿತು. ತಮಗೆ ಪ್ರಾಪ್ತವಾದ ಅಷ್ಟಸಿದ್ಧಿಗಳಿಂದ ತಾವೂ ವಿಶ್ವಾಮಿತ್ರನಂತೆ ಪುನಸ್ಸೃಷ್ಟಿಗೆ ತೊಡಗಬಹುದೆಂದು ಶಂಕೆಗೊಂಡು ಆತ್ಮಸಾಧನ ತತ್ಪರರಾದ ತಮ್ಮ ತಪಸ್ಸಿಗೆ ವಿಘ್ನವನ್ನುಂಟುಮಾಡತೊಡಗಿದನೆಂಬುದನ್ನೂ ಅವರು ಮನಗಂಡರು. ತಮ್ಮನ್ನು ಸಂಸಾರಬದ್ಧರಾಗುವಂತೆ ಮಾಡಲು, ಬ್ರಹ್ಮನಲ್ಲಿ ಪ್ರಾರ್ಥಿಸಿ ಅಹಲ್ಯೆಯನ್ನು ಸೃಷ್ಟಿಸಿದ ಸಂಗತಿ, ದ್ವಾದಶವರ್ಷಕಾಲ ತಮ್ಮ ತಪಸ್ಸು

ಸಾವಕಾಶಕ್ಕೆ ಬೀಳುವಂತೆ ವೀರಕ್ಷಾಮವನ್ನು ಕಲ್ಪಿಸಿ ಹತ್ತೆಂಟು ಸಹಸ್ರ ಮಂದಿ ಕ್ಷುಡಾರ್ತರು ತಮ್ಮ ಆಶ್ರಮಕ್ಕೆ ಬರುವಂತೆ ಮಾಡಿದ ವಿಷಯ, ತಮಗೆ ಪ್ರಾಪ್ತವಾದ ದುರಂತ ಗೋಹತ್ಯೆ ಇನ್ನೆಲ್ಲಕ್ಕೂ ಇಂದ್ರನೇ ಮೂಲಕಾರಣನೆಂಬುದು ಗೋಚರವಾಯಿತು. ಹೀಗೆ ತಮ್ಮ ಪರಾಭವಕ್ಕಾಗಿಯೇ ಪ್ರಯತ್ನಪೂರ್ವಕ ಏರ್ಪಟ್ಟ ವಿಘ್ನಪರಂಪರೆಗಳೆಲ್ಲಕ್ಕೂ ಮೂಲಕಾರಣವೂ ಉದ್ದೇಶವೂ ಗೋಚರವಾದರೂ, ಮಹಾ ಜಿತೇಂದ್ರಿಯರಾದ ಆ ಋಷಿಪುಂಗವರು ಕೋಪಗೊಳ್ಳದೆ, ಸಾವಧಾನ ಚಿತ್ತರಾಗಿ ಹೀಗೆ ಯೋಚಿಸತೊಡಗಿದರು.

"ಈವರೆಗೆ ಕೇವಲ ಶ್ರದ್ಧಾಭಕ್ತಿಯುಕ್ತವಾಗಿ ಏಕಮುಖವಾಗಿದ್ದ ಈ ಅಹಲ್ಯೆಯ ಮನಸ್ಸು ಈಗ ವಿಚಾರಯುಕ್ತವಾಗಿ ಬಹುಮುಖವಾಗಿದೆ. ಹೀಗೆ ವಿಚಾರಯುಕ್ತವಾದೊಡನೆಯೇ ಅದಕ್ಕೆ ಯೋಗ್ಯವಾವುದು ಅಯೋಗ್ಯವಾವುದು, ಸತ್ಯವಾವುದು ಅಸತ್ಯವಾವುದು. ನಿತ್ಯವಾವುದು ಅನಿತ್ಯವಾವುದು ಎಂದು ವಿಮರ್ಶೆಮಾಡುವಷ್ಟು ಪ್ರಜ್ಞೆಯಿಲ್ಲದಿದ್ದರೆ, ಅದು ಒಡನೆಯೇ ವಿಷಯೇಂದ್ರಿಯಗಳ ಉಲ್ಬಣೆಗೆ ಸಿಕ್ಕಿ ಅಧಃಪಾತಾಳವನ್ನು ಸೇರುವುದು ಸಿದ್ಧ. ಮನಸ್ಸು ಈ ಬಗೆಯ ಕಠಿಣವ್ಯವಸಾಯಕ್ಕೆ ಒಳಪಟ್ಟು ಪ್ರಜ್ಞೆಹೊಂದಿ ಪರಿಪಕ್ವವಾಗದ ಸ್ಥಿತಿಯಲ್ಲಿ ವಿಷಯೇಂದ್ರಿಯಗಳ ಕೈಗೆ ಸಿಕ್ಕ ಪ್ರಾಣಿಯು ಇಹಪರಗತಿಗಳನ್ನು ಕೆಡಸಿಕೊಂಡು, ನಾಶವಾಗುವುದು ಖಂಡಿತ. ಈವರೆಗೆ ಕೇವಲ ಭಕ್ತಿಯುತಳಾಗಿ ನಂಬಿಕೆಯಿಂದ ಕಾರ್ಯತತ್ಪರಳಾಗಿದ್ದ ಅಹಲ್ಯೆಯು ಈಗತಾನೆ ಜ್ಞಾನವಿಚಾರ ಪ್ರವೇಶಕ್ಕಾಗಿ ಎಚ್ಚತ್ತಿರುವಳು. ಪ್ರಾರಂಭದ ಅತಿಶಯ ಚಂಚಲಸ್ಥಿತಿಯಲ್ಲಿ ದಂಭ ಮೋಹ ಅಭಿಮಾನ ಅಹಂಕಾರ ಮುಂತಾದ ಕಶ್ಮಲಗಳು ಮೇಲೆದ್ದು ಕಾಣುವುದು ಸ್ವಾಭಾವಿಕ. ಆದರೆ ಈ ಸಂದರ್ಭದಲ್ಲಿ ವಿಷಯೇಂದ್ರಿಯಗಳೂ ಜಾಗ್ರತವಾಗಿ—ಪಟುವಾಗಿದ್ದುವೆಂದರೆ ಅದರಿಂದ ಅನರ್ಥವುಂಟಾಗದಿರದು. ಬಹಿಃಪ್ರಪಂಚದಿಂದ ಯಾವ ವಿಷಯವಾದರೂ ಈ ಐದು ಇಂದ್ರಿಯಗಳ ಮೂಲಕವೇ ಅಲ್ಲವೆ ಮನಸ್ಸಿಗೆ ಗೋಚರವಾಗತಕ್ಕುದು! ಕಣ್ಣು ನೋಡಬೇಕು, ಕಿವಿ ಕೇಳಬೇಕು, ಮೂಗು

ವಾಸನೆ ನೋಡಬೇಕು, ನಾಲಿಗೆ ರುಚಿ ನೋಡಬೇಕು, ತ್ವಕ್ಕು ಸ್ಪರ್ಶಿಸ
ಬೇಕು. ಈ ಐದು ಇಂದ್ರಿಯಗಳೂ ತಮ್ಮ ಕ್ರಿಯೆಗಳಲ್ಲಿ ವಿರಾಮ ಹೊಂ
ದನೆಂದರೆ ಮನಸ್ಸು ಸ್ತಬ್ಧವಾಗಿ ಒಂದೆಡೆ ಬಿದ್ದು ನಿರುದ್ಯೋಗಿಯಾಗುವು
ದು. ಆಗ ಅದಕ್ಕೆ ತಕ್ಕ ಕ್ರಿಯೆಯೊಂದನ್ನು ಒದಗಿಸಿದರೆ ಅದು ತಾನೇ
ಪಕ್ವವಾಗುವುದು. ತರುವಾಯ ಹಾಗೆ ಮನಸ್ಸು ಪಕ್ವವಾಗಿದ್ದ ಸ್ಥಿತಿ
ಯಲ್ಲಿ ಇಂದ್ರಿಯಗಳು ಎಷ್ಟು ಜಾಗ್ರತವಾಗಿದ್ದರೂ, ಎಷ್ಟು ಪಟುವಾಗಿ
ದ್ದರೂ ಬಾಧಕವಿಲ್ಲ'' ಎಂದು ಯೋಚಿಸಿ, ಗೌತಮರು ಮುಂದೆ ಮಾಡ
ಬೇಕಾದ ಕಾರ್ಯವಿಂಥದೆಂದು ನಿರ್ಧರಿಸಿದರು. ಸಾಧ್ವಿಯೂ ತಮ್ಮ ಗೃಹಿ
ಣಿಯೂ ಪತಿಸೇವಾತತ್ಪರಳೂ ಆಗಿದ್ದ ಆಕೆಯ ವಿಷಯದಲ್ಲಿ ಈ ಬಗೆಯ
ಸ್ವಾತಂತ್ರ್ಯವನ್ನು ವಹಿಸಿ ತಮ್ಮ ಗೃಹಕೃತ್ಯಕ್ಕೆ ವಿಘಾತವನ್ನುಂಟುಮಾ
ಡಿದ ಇಂದ್ರನಿಗೆ ತಕ್ಕಂತೆ ಬುದ್ಧಿ ಕಲಿಸಿ, ಮುಂದೆಯಾದರೂ ಇಂತಹ
ಕೆಲಸ ಮಾಡದಂತೆ ಎಚ್ಚರಿಸತಕ್ಕುದು ಕರ್ತವ್ಯವೆನ್ನಿಸಿತು. ಒಡನೆ ಆತ
ನನ್ನು ಪ್ರತ್ಯಕ್ಷೀಕರಿಸಿಕೊಂಡು—'' ಎಲೈ ಇಂದ್ರನೆ, ಅಹಲ್ಯೆಯು ನನ್ನ
ಭಾರ್ಯೆಯಾದ ಮೇಲೆ ಆಕೆಯ ದೇಹ ಮನೋ ಬುದ್ಧಿಗಳನ್ನು ಯುಕ್ತ
ಮಾರ್ಗದಲ್ಲಿ ಅಭಿವೃದ್ಧಿಗೊಳಿಸುವ ಬಾಧ್ಯತೆಯೂ ಉತ್ತರವಾದಿತ್ವವೂ
ನನಗೆ ಸೇರಿದುದಾಯಿತು. 'ನಾನು ಮನೋಭಿಮಾನಿಯಾದುದರಿಂದ
ಆಕೆಯ ಮನಸ್ಸಿನ ವಿಷಯದಲ್ಲಿ ಸ್ವಾತಂತ್ರ್ಯವಹಿಸದೆನು' ಎಂಬೆಯೋ?
ಆದರೆ ಕೇಳು, ಆಕೆಯು ನನ್ನ ಅರ್ಧಾಂಗಿಯು; ನನಗೆ ಬ್ರಹ್ಮದತ್ತಳಾಗಿ
ಅಗ್ನಿ ಸಾಕ್ಷಿಕವಾಗಿ ವಿವಾಹವಾದ ಪತ್ನಿಯು. ನನ್ನ ಅರ್ಧ ದೇಹವಾದ
ಅವಳ ದೇಹ ಮನಸ್ಸು ಇಂದ್ರಿಯಗಳು ಇವುಗಳ ಮೇಲೆ ನನ್ನ ಅನುಮ
ತಿಯಿಲ್ಲದ ನಿನ್ನ ಅಧಿಕಾರವು ಅತಿಕ್ರಮ ಪ್ರವೇಶವು.—ವ್ಯಭಿಚಾರವು.
ಈ ಬಗೆಯ ಕಾರ್ಯದಿಂದ ನೀನು—ನಾನು ಕ್ರಮರೀತಿಯಲ್ಲಿ ಅವಳ
ಆತ್ಮಾಭಿವೃದ್ಧಿಗೆಂದು ಏರ್ಪಡಿಸಿದ್ದ ಮಾರ್ಗಕ್ಕೆ ವಿಘ್ನವನ್ನುಂಟುಮಾ
ಡಿದೆ. ಸರ್ವಸುಲಭವೂ ನಿರಪಾಯವೂ ಆದ ಆ ಭಕ್ತಿ ಮಾರ್ಗದಿಂದ ಚ್ಯು
ತಳಾದ ಅವಳಿಗೆ ಈಗ ಬಹುಕಷ್ಟಸಾಧ್ಯವಾದ ಈ ಜ್ಞಾನಮಾರ್ಗದಲ್ಲಿ
ನಡೆಯಲು ಸಾಧ್ಯವುಂಟೆ? ಶಕ್ತಿಯುಂಟೆ? ಅಕಟಾ, ಚಂಚಲನಾಗಿ ನನ್ನ
ತಪಸ್ಸಿಗೆ ವಿಘ್ನವನ್ನುಂಟುಮಾಡಬೇಕೆಂದು ಎಂತಹ ದುರಂತ ಕಾರ್ಯ

ಮಾಡಿ ನಮ್ಮ ದಾಂಪತ್ಯ ಜೀವನಕ್ಕೇ ಭಂಗವನ್ನು ತಂದಿಟ್ಟೆಯಲ್ಲಾ! ಇದು ನ್ಯಾಯವಲ್ಲ. ಆದುದರಿಂದ ಇಂದ್ರಾ! ನಿನ್ನೀ ಸ್ವಭಾವವು ಏಕ ಮುಖವಾಗಿಲ್ಲದೆ ಸಹಸ್ರ ಛಿದ್ರವಾಗಿ ಹೋಗಲಿ! ನಿನ್ನೀ ಸ್ವಭಾವವು ಮಹಾ ಚಂಚಲವಾಗಿ ಹೋಗಲಿ!'' ಎಂದು ಶಪಿಸಿದರು.

ಆಗ ಭೀತನಾದ ಇಂದ್ರನು ಕೈಮುಗಿದು–' ಮಹಾಮುನಿಯೇ ಶಾಂತನಾಗು. ಮಹಾತಪಸ್ಸಿದ್ಧನಾದ ನಿನ್ನ ಅರ್ಧಾಂಗಿಯಾದರೂ ಜ್ಞಾನಶೀಲಳೂ ಮಹಾ ತಪಸ್ವಿನಿಯೂ ಆಗಿರತಕ್ಕುದು ಸ್ವಾಭಾವಿಕವಾದುದಲ್ಲವೆ? ಹೀಗಿರುವಲ್ಲಿ ಮಹಾ ಜ್ಞಾನಿಯಾದ ನಿನ್ನ ಅರ್ಧ ದೇಹಳಾದಾಕೆಯು ಮೆಲ್ಲನೆ ಭಕ್ತಿಮಾರ್ಗದ ಒಂದೊಂದೇ ಮೆಟ್ಟಲನ್ನು ಏರಿಕೊಂಡಿರತಕ್ಕುದು ಯುಕ್ತವಲ್ಲವೆಂದೂ, ಆಕೆಯೂ ಜ್ಞಾನಮಾರ್ಗದ ಬಾಲಪಾಠಗಳನ್ನಾದರೂ ಕಲಿಯತೊಡಗಲೆಂದೂ, ನಾನು ಆಕೆಯಲ್ಲಿ ಈ ಚಲನೆಯನ್ನೆಬ್ಬಿಸಿದೆನಲ್ಲದೆ ಅನ್ಯಥಾ ಇಲ್ಲ. ಇದಕ್ಕಾಗಿ ನನ್ನ ಮೇಲೆ ಕೋಪಿಸಲಾಗದು ' ಎಂದು ಕೇಳಿಕೊಂಡನು. ಗೌತಮ ಮುನಿವರ್ಯರು–'' ಇಂದ್ರಾ ನೀನು ಹೇಳತಕ್ಕದು ಯುಕ್ತ. ಆದರೂ ಅಭಿವೃದ್ಧಿಯಾಗಲೀ ಅವನತಿಯಾಗಲೀ ಕ್ರಮವಾಗಿ ನಿಧಾನವಾಗಿ ಸಾಗತಕ್ಕುದೇ ಕ್ಷೇಮಕರವಲ್ಲದೆ? ಆತುರದಿಂದ ಆಗಬಾರದು. ಆತುರದಿಂದ ಸಾಧಕಕ್ಕಿಂತಲೂ ಬಾಧಕವೇ ಹೆಚ್ಚು. ಇದನ್ನು ತಿಳಿದು, ಇನ್ನು ಮುಂದಾದರೂ ಲಘುಚೇತಸ್ಕರನ್ನು ಮಾರ್ಗತಪ್ಪಿಸದಂತೆ ಜಾಗ್ರುತನಾಗಿರು. ನನ್ನ ವಚನವು ವ್ಯರ್ಥವಾಗದು. ಹಾಗೆ ಸಹಸ್ರ ಛಿದ್ರಗಳಾಗುವ ನಿನ್ನೀಸ್ವಭಾವವು ಸಹಸ್ರದೃಷ್ಟಿಗಳಾಗಿ ಮಾರ್ಪಟ್ಟು ಸಹಸ್ರ ವಿಧಗಳಿಂದಲೂ ವಿಷಯ ಸಂಗ್ರಹಣ ಮಾಡಲು ಸಹಾಯಕವಾಗಲಿ.'' ಎಂದು ನುಡಿದರು.

ತರುವಾಯ ಅಹಲ್ಯೆಯನ್ನು ಕುರಿತು—'' ಎಲೌ ಸಾಧ್ವಿ, ಕಾಲಕರ್ಮಸಂಯೋಗದಿಂದ ನಿನ್ನ ಅಭಿವೃದ್ಧಿಗೆಂದು ನಾನು ಏರ್ಪಡಿಸಿದ್ದ ಮಾರ್ಗಕ್ಕೆ ವಿರೋಧ ಒದಗಿಸಿತು. ಇಷ್ಟು ಕಟ್ಟಿನ ಶಾಂತ ವಾತಾವರಣವುಳ್ಳ ಈ ಆಶ್ರಮದಲ್ಲಿ ವಾಸಿಸುತ್ತಿದ್ದರೂ ನಿನ್ನಲ್ಲಿ ಉಂಟಾದ ಚಂಚಲ ಮನಸ್ಸನ್ನು ಜಯಿಸಲಾರದೆ ವಿವಿಧ ದುರಾಲೋಚನೆಗಳಿಗೆ ಒಳಗಾದೆ. ಅವುಗಳ ಬೀಜವನ್ನು ಈಗಲೇ ಕಿತ್ತೊಗೆಯದಿದ್ದರೆ ಮುಂದೆ ಅದರಿಂದ

ಬಹು ಪ್ರಮಾದವುಂಟಾಗಬಹುದು. ಆದುದರಿಂದ ಈಗ ನಿನ್ನ ಮುಂದಿನ ಮೇಲ್ಮೆಗಾಗಿ ಒಂದು ಮಾರ್ಗವನ್ನು ಯೋಚಿಸಿದ್ದೇನೆ. ಇಂದಿನಿಂದ ನಿನ್ನ ದರ್ಶನೇಂದ್ರಿಯು, ಸ್ಪರ್ಶೇಂದ್ರಿಯು, ಶ್ರವಣೇಂದ್ರಿಯು, ಘ್ರಾಣೇಂದ್ರಿಯು, ರಸನೇಂದ್ರಿಯುಗಳೆಂಬ ಈ ಪಂಚೇಂದ್ರಿಯಗಳೂ ತಮ್ಮ ತಮ್ಮ ಸ್ವಾಭಾವಿಕ ಕ್ರಿಯೆಗಳನ್ನು ನಡೆಯಿಸದೆ ಸ್ತಬ್ಧವಾಗುವುವು. ನೀನು ಯಾರೊಬ್ಬರ ಕಣ್ಣಿಗೂ ಕಾಣಿಸಿಕೊಳ್ಳದೆ ಈ ಆಶ್ರಮದಲ್ಲೇ ಇದ್ದು ತಪೋಮಗ್ನಳಾಗಿರು " ಎಂದರು. ಆ ಮಾತನ್ನು ಕೇಳಿದ ಅಹಲ್ಯಾದೇವಿಯು ನಡನಡುಗಿ—" ಪ್ರಭೋ ಎಂದಿನಂತೆಯೇ ತಮ್ಮ ಪಾದಸೇವೆಯಲ್ಲೂ ಗೃಹಕೃತ್ಯಾದಿ ನಿತ್ಯಕ್ರಿಯೆಗಳಲ್ಲೂ ತೊಡಗಿದ್ದ ನನ್ನ ಮನಸ್ಸು ಈದಿನ ಏಕೆ ಹೀಗಾಯಿತೋ ತಿಳಿಯದೆ ನಾನು ಚಿಂತಿಗೊಂಡಿದ್ದೇನೆ. ನನ್ನ ಅಪರಾಧವು ಲೇಶಮಾತ್ರವೂ ಇಲ್ಲದಿರುವ ಈ ಸಂದರ್ಭದಲ್ಲಿ ನನಗೆ ಹೀಗೆ ಘೋರಶಾಪವನ್ನಿತ್ತು, ತಮ್ಮ ಸಹವಾಸಕ್ಕೂ ಪಾದಸೇವೆಗೂ ಬಾಹಿರಳನ್ನಾಗಿ ಮಾಡುವುದು ಯುಕ್ತವೆ? ಮಾನವಪ್ರಾಣಿಗೆ ಪಂಚೇಂದ್ರಿಯ ಜ್ಞಾನವು ನಷ್ಟವಾದಮೇಲೆ, ಆ ದೇಹಕ್ಕೂ ಕಲ್ಲಿಗೂ ಮರದ ತುಂಡಿಗೂ ಏನುವ್ಯತ್ಯಾಸ? ಅಂತಹ ಅಚೇತನ ಸ್ಥಿತಿಯಲ್ಲಿ ಬಿದ್ದಿದ್ದರೆ ನನ್ನ ಗತಿಯೇನು? ತಮ್ಮ ಪಾದಸೇವೆಗಿಂತಲೂ ನನಗೆ ಬೇರೆ ತಪಸ್ಸೆಂದರೇನು? ಧ್ಯಾನವೆಂದರೆ ಬೇರೇನು ? ಹೀಗೆ ಪಂಚೇಂದ್ರಿಯ ಕ್ರಿಯಾಶೂನ್ಯಳಾಗಿ ಸ್ತಬ್ಧಳಾಗಿ ಬಿದ್ದಿರುವ ನಾನು ಪುನಃ ಸ್ವಸ್ವರೂಪವನ್ನು ಹೊಂದಿ ತಮ್ಮ ಪಾದಸೇವೆಗೆ ಸಿದ್ಧಳಾಗುವುದೆಂದಿಗೆ? ಅನುಗ್ರಹಿಸಬೇಕು. ಹೇಗಾದರೂ ಪ್ರೇಮನಿಧಿಗಳಾದ ತಾವು ನನ್ನ ಅಭಿವೃದ್ಧಿಯನ್ನು ಕುರಿತು ಆಜ್ಞಾಪಿಸುವುದನ್ನೆಲ್ಲಾ ಮಹಾಪ್ರಸಾದವೆಂದು ಸ್ವೀಕರಿಸಿ ವಿಧೇಯತೆಯಿಂದ ನಡೆಯುತಕ್ಕುದು ಮಾತ್ರ ನನ್ನ ಕರ್ತವ್ಯವು" ಎಂದು ನುಡಿದು, ಪತಿಪುತ್ರರ ಅಗಲಿಕೆಗಾಗಿ ಕಣ್ಣೀರು ಕಾಲುವೆಯಾಗಿ ಸುರಿಯುತ್ತಿರಲು, ಪಾದ ಮೂಲದಲ್ಲಿ ದಂಡಾಕಾರವಾಗಿ ಬಿದ್ದಿದ್ದ ಆಕೆಯನ್ನು ಹಿಡಿದೆತ್ತಿ —" ಸಾಧ್ವೀಮಣಿ ವ್ಯಸನಪಡಬೇಡ. ಇದರಲ್ಲಿ ನಿನ್ನ ಅಪರಾಧವು ಎಳ್ಳಷ್ಟೂ ಇಲ್ಲ. ಶಾಂತವಾಗಿ ಪ್ರೇಮಪೂರ್ಣವಾಗಿ ಸಂತುಷ್ಟವಾಗಿದ್ದ ನಿನ್ನ ಮನಸ್ಸಮುದ್ರವು, ವಿಚಲಿತವಾಗಿರುವ ಈ ದಿನ ನಿನ್ನ ಸ್ಥಿತಿಯಲ್ಲಿ,

ಅದು ಪುನಃ ದೃಢಪಡುವವರೆಗೂ ಹೊರಗಿನ ಪ್ರಪಂಚದಿಂದ ಯಾವ ವಿಧ ವಾದ ಬಾಧಕವೂ ಒಂದೊದಗದೆ ನಿನ್ನ ಧ್ಯಾನಕ್ರಿಯೆಯು ಅವ್ಯಾಹತವಾಗಿ ಸಾಗಬೇಕೆಂದು, ನಿನ್ನ ಪಂಚ ಜ್ಞಾನೇಂದ್ರಿಯಗಳಿಗೂ ಸ್ತಬ್ಧತೆಯು ನ್ನುಂಟುಮಾಡಿದೆನಲ್ಲದೆ ಬೇರಲ್ಲ. ಈಗ ನೀನು ಹೃದಯದಲ್ಲಿ ಲಕ್ಷ್ಮೀ ಮನೋಹರನಾದ ಶ್ರೀಮನ್ನಾರಾಯಣಮೂರ್ತಿಯನ್ನು ಧ್ಯಾನಿಸುತ್ತಾ ನಿಶ್ಚಿಂತಳಾಗಿರು. ಮುಂದೆ ಇಕ್ಷ್ವಾಕುವಂಶದಲ್ಲಿ ಶ್ರೀವಿಷ್ಣುಮೂರ್ತಿ ಯು ದಶರಥ ಸಾರ್ವಭೌಮನ ಪುತ್ರನಾಗಿ ಅವತಾರಮಾಡಿ, ಕಾರಣಾಂ ತರದಿಂದ ಈ ಮಾರ್ಗವಾಗಿ ಬರುವನು. ಆಗ ಭಗವಂತನ ಕೃಪಾಕಟಾ ಕ್ಷವು ನಿನ್ನ ಮೇಲೆ ಬೀಳುವುದು. ಆತನ ಪಾದಾಂಗುಟವು ಈ ನಿನ್ನ ದೇಹಕ್ಕೆ ಸೋಕಿದೊಡನೆಯೇ, ಆಗಿನಂತೆಯೇ ನಿನ್ನಲ್ಲಿ ನವಚೈತನ್ಯವೂ, ಪಂಚೇಂದ್ರಿಯ ಪಟುತ್ವವೂ ನಿಶ್ಚಲಜ್ಞಾನವೂ ಪ್ರಾಪ್ತಿಸುವುವು. ಚಿಂತಿ ಸಬೇಡ " ಎಂದು ನುಡಿದರು. ತಕ್ಷಣವೇ ಅಹಲ್ಯಾದೇವಿಯ ಪಂಚೇಂ ದ್ರಿಯ ಸಂಪತ್ತಿಯೂ ಅದೃಶ್ಯವಾಗಿಹೋಯಿತು. ಕಣ್ಣು ಕಿವಿ ಮೂಗು ಬಾಯಿ ಚರ್ಮಗಳಿದ್ದರೂ, ನೋಡಲಾರದೆ ಕೇಳಲಾರದೆ ಮೂಸಿಸಲಾ ರದೆ ಮಾತನಾಡಲಾರದೆ ಸ್ಪರ್ಶದಿಂದ ತಿಳಿಯಲಾರದೆ ಆಕೆಯ ದೇಹವು ಕೇವಲ ಶಿಲಾಮೂರ್ತಿಯಂತೆ ಬಿದ್ದುಹೋಯಿತು. ಗೌತಮರು, ಒಂದು ಬಾರಿ ದೀರ್ಘವಾದ ನಿಟ್ಟುಸಿರುಬಿಟ್ಟು, ತಮ್ಮ ಕುಮಾರನಾದ ಶತಾನಂದನನ್ನೂ ಜೊತೆಗೆ ಕರೆದುಕೊಂಡು ಅಲ್ಲಿಂದ ಹೊರಟು, ಅವನನ್ನು ರಾಜರ್ಷಿ ಜನಕಮಹಾರಾಜನ ಬಳಿ ಬಿಟ್ಟು, ತಮ್ಮ ಆ ಆಶ್ರಮವನ್ನು ಪರಿತ್ಯಜಿಸಿ, ಹಿಮಾಲಯಪ್ರಾಂತಕ್ಕೆ ತಪಸ್ಸಿಗಾಗಿ ಹೊರಟುಹೋದರು.

---

## ಅಧ್ಯಾಯ ೫ "ಶ್ರೀರಾಮ ಸಂದರ್ಶನ"

ಸನಕಸನಂದನಾದಿ ಮುನಿವರ್ಯರ ಶಾಪವನ್ನು ಹೊಂದಿದ ವೈಕುಂ ಠದ್ವಾರಪಾಲಕರಾದ ಜಯವಿಜಯರು, ತಮ್ಮ ಮೊದಲನೆಯ ಜನ್ಮದಲ್ಲಿ ರಾವಣಕುಂಭಕರ್ಣರಾಗಿ ಜನ್ಮಿಸಿ, ಮಹಾಬಲವಂತರಾಗಿ ತಪಸ್ಸುಮಾಡಿ ಬ್ರಹ್ಮನನ್ನು ಮೆಚ್ಚಿಸಿ ಅಗಾಧ ವರಗಳನ್ನು ಪಡೆದು ಕೊಬ್ಬಿ ಲೋಕವನ್ನು ಬಾಧಿಸತೊಡಗಿದರು. ಅವರ ಹಾವಳಿಯನ್ನು ತಡೆಯಲಾರದೆ ಲೋಕವ

ತಲ್ಲಣಿಸಿ ಹೋಯಿತು. ಆಗ ಬ್ರಹ್ಮೇಂದ್ರಾದಿಗಳ ಪ್ರಾರ್ಥನೆಯನ್ನು ಲಾಲಿಸಿದ ಕ್ಷೀರಸಾಗರಶಾಯಿಯಾದ ಶ್ರೀ ವಿಷ್ಣುಮೂರ್ತಿಯು, ಪುತ್ರ ಕಾಮೇಷ್ಟಿಯನ್ನು ಮಾಡಿ ಅಗಾಧ ಪುಣ್ಯ ಸಂಪಾದನೆ ಮಾಡಿದ್ದ ಸೂರ್ಯವಂಶ ಶ್ರೇಷ್ಠನಾದ ದಶರಥಚಕ್ರವರ್ತಿಗೆ ಪುತ್ರನಾಗಿ ಅವತಾರ ಮಾಡಲು ಸಂಕಲ್ಪಿಸಿದನು. ಯಜ್ಞಪುರುಷನು ತಂದಿತ್ತ ದಿವ್ಯಪಾಯಸ ವನ್ನು ಭುಜಿಸಿ, ಕೌಸಲ್ಯಾ ಸುಮಿತ್ರೆ ಕೈಕೇಯಿಯರೆಂಬ ಚಕ್ರವರ್ತಿಯ ಮೂರುಮಂದಿ ರಾಣಿಯರೂ ಗರ್ಭಧಾರಣ ಮಾಡಿದರು. ಯುಕ್ತಕಾ ಲದಲ್ಲಿ ರಾಮಲಕ್ಷ್ಮಣ ಭರತ ಶತ್ರುಘ್ನರೆಂಬ ನಾಲ್ಕುಮಂದಿ ಮಕ್ಕಳು ಜನಿಸಿ, ಶುಕ್ಲಪಕ್ಷದ ಚಂದ್ರಕಾಂತಿಯಂತೆ ತೇಜೋವಂತರಾಗಿ ಅಭಿವೃದ್ಧಿ ಯಾಗುತ್ತಿದ್ದರು.

ರಾಮಾದಿಗಳು ಕ್ರಮವಾಗಿ ಶೈಶವ ಬಾಲ್ಯಾವಸ್ಥೆಗಳನ್ನು ನೀಗಿ ಯೌವನಪ್ರಾರಂಭ ದೆಸೆಯಲ್ಲಿದ್ದ ಕಾಲದಲ್ಲಿ ಒಂದುದಿನ ವಿಶ್ವಾಮಿತ್ರ ಮುನೀಶ್ವರರು ರಾಜನ ಆಸ್ಥಾನಕ್ಕೆ ಬಂದು, ತಮ್ಮ ಯಾಗ ಸಂರಕ್ಷಣೆ ಗಾಗಿ ಶ್ರೀರಾಮಲಕ್ಷ್ಮಣರನ್ನು ಕಳುಹಿಸಬೇಕೆಂದು ಯಾಚಿಸಿ ಕರೆತಂ ದರು. ಮಾರ್ಗದಲ್ಲಿ ಅವರಿಗೆ ಅನೇಕ ಅಸ್ತ್ರ ಶಸ್ತ್ರ ವಿದ್ಯೆಗಳನ್ನು ಬೋಧಿಸಿ, ಹಲವು ವಿಚಿತ್ರಕಥೆಗಳನ್ನು ಹೇಳಿ ಅವರ ಮನಸ್ಸನ್ನು ಸಂತೋ ಷಗೊಳಿಸಿದರು. ತಾಟಕಿ ಎಂಬ ರಾಕ್ಷಸಿಯು ಶ್ರೀ ರಾಮನ ಬಾಣ ದಿಂದ ಮೃತಳಾದಳು. ರಾಮನು ದುರುಳನಾದ ಸುಬಾಹುವೆಂಬ ರಕ್ಕ ಸನನ್ನು ಸಂಹರಿಸಿ, ಮಾರೀಚನನ್ನು ಬಾಣವೇಗದಿಂದ ನೂರಾರು ಗಾವುದ ದೂರಕ್ಕೆ ಹಾರಿಸಿ ವಿಶ್ವಾಮಿತ್ರರ ಯಾಗವನ್ನು ಸಂರಕ್ಷಿಸಿದನು. ತರು ವಾಯ ಆ ವೇಳೆಗೆ ತಲುಪಿದ, ಜನಕಪುತ್ರಿ ಶ್ರೀ ಸೀತಾದೇವಿಯ ವಿವಾಹ ವೃತ್ತಾಂತವನ್ನು ತಿಳಿದ ವಿಶ್ವಾಮಿತ್ರರು ರಾಮಲಕ್ಷ್ಮಣರನ್ನು ಕರೆದು ಕೊಂಡು ಮಿಥಿಲಾ ಪುರವನ್ನು ಕುರಿತು ಪ್ರಯಾಣಮಾಡಿದರು. ಮಿಥಿಲಾ ಪಟ್ಟಣದ ಹೊರವಳಯ ಪ್ರದೇಶದಲ್ಲಿ ಪುರಾತನವೂ ನಿರ್ಜನವೂ ಆಗಿದ್ದು ಸ ಕಲವಿಧ ಅನುಕೂಲತೆಗಳಿಂದಲೂ ಒಪ್ಪುತ್ತಿದ್ದ ಬಹು ಅಂದವಾದ ಒಂದಾ ಶ್ರಮವನ್ನು ಕಂಡ ಶ್ರೀರಾಮನು–" ಮುನಿವರ್ಯರೇ ಈ ಪ್ರದೇಶವು ಋಷ್ಯಾಶ್ರಮದಂತೆ ತೋರುವುದು. ಆದರೆ ಇಲ್ಲಿ ಯಾರೂ ವಾಸವಾಗಿ

ದ್ದಂತೆ ಕಾಣಿಸದು. ಇದರ ವೃತ್ತಾಂತವೇನು " ಎಂದು ಪ್ರಶ್ನಿಸಿದನು. ಆಗ ವಿಶ್ವಾಮಿತ್ರರು ಶ್ರೀರಾಮನಿಗೆ ಹೇಳಿದ ಪ್ರತ್ಯುತ್ತರವು ಇಂದ್ರನು ಅಹಲ್ಯೆಯೊಂದಿಗೆ ವ್ಯಭಿಚಾರ ನಡೆಸಿ ತನ್ಮೂಲಕ ಉಭಯರೂ ಗೌತಮ ರಿಂದ ಶಪಿಸಲ್ಪಟ್ಟರೆಂದು ಮುಂತಾಗಿ ರಾಮಾಯಣದಲ್ಲಿ ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ.

ಪ್ರಿಯವಾಚಕ ಮಹಾಶಯರೇ, ಪುರಾಣಗಳು ಸಮಾಧಿಭಾಷೆ ಗುಹ್ಯಭಾಷೆ ದರ್ಶನಭಾಷೆಗಳೆಂಬ ತ್ರಿವಿಧಭಾಷೆಗಳಿಂದ ವಿರಚಿತವಾದು ವೆಂದು ಹಿಂದೊಮ್ಮೆ ಅರಿಕೆ ಮಾಡಿಕೊಂಡಿದ್ದೇವಲ್ಲವೆ? ಆಧ್ಯಾತ್ಮಿಕ ತತ್ತ್ವ ಗಳನ್ನು ಕೇವಲ ಅವುಗಳ ನಿಜಸ್ವರೂಪದಲ್ಲೇ ಹೇಳಿದರೆ, ಸಾಮಾನ್ಯ ಲೋಕಕ್ಕೆ ಅರ್ಥವಾಗುವುದಿಲ್ಲವಾದುದರಿಂದ, ಅವುಗಳನ್ನು ಲೋಕಸಾ ಮಾನ್ಯವಾದ ಪ್ರತ್ಯಕ್ಷ ಉದಾಹರಣೆಗಳ ಮೂಲಕ ತಿಳಿಸತಕ್ಕುದು ಹೆಚ್ಚು ಆವಶ್ಯಕವಿದೆ. ಹಾಗೆ ಜನಗಳ ನಿತ್ಯಜೀವನದ ಉದಾಹರಣೆ ಯನ್ನು ಕೊಡುವಾಗ, ಮೇಲ್ಕಂಡ ರಾಮಾಯಣ ಕಥೆಯಲ್ಲಿ ಹೇಳಿದಂತೆ, ಸಮಾಜನೀತಿಗೆ ಆಭಾಸವೆಂದು ತೋರುವಂತಹ ಹಲವು ಸಂದರ್ಭಗಳು ಒದಗಬಹುದು. ಆದರೆ ಅವುಗಳನ್ನು ಕೇವಲ ಸ್ಥೂಲದೃಷ್ಟಿಯಿಂದ ಅರ್ಥ ಮಾಡಿಕೊಳ್ಳುವುದಕ್ಕಿಂತಲೂ, ಅವುಗಳಲ್ಲಡಗಿರುವ ಅಂತರಾರ್ಥಗಳನ್ನು ಗ್ರಹಿಸತಕ್ಕುದು ಹೆಚ್ಚು ಸಮಂಜಸವೆಂದು ನಮಗೆ ತೋರುತ್ತದೆ. ಇಂದ್ರನಿಗೂ ಅಹಲ್ಯೆಗೂ ಗೌತಮರಿಂದ ಬಂದ ಶಾಪದ ಮತ್ತು ಇಂದ್ರ ನಿಗೆ ಅಹಲ್ಯಾ ಜಾರನೆಂದು ಬಂದ ಅಪವಾದದ ತಾತ್ವಿಕಾರ್ಥವು ಏನೆಂಬು ದನ್ನು ಸ್ವಲ್ಪ ಯೋಚಿಸೋಣ! ಎಲ್ಲರಿಗೂ ಮನಸ್ಸಿದೆ. ಆ ಮನಸ್ಸು ಒಂದು ವಸ್ತುವಿನಲ್ಲಿ–ವಿಚಾರ ವಿಮರ್ಶನಾದಿಗಳಗೊಡವೆಗೆ ಹೋಗದೆ ಕೇವಲ ಶ್ರದ್ಧಾಪೂರ್ವಕ ಭಕ್ತಿಯನ್ನಿಟ್ಟುಕೊಂಡಿರತಕ್ಕ ಸ್ಥಿತಿಯೂ ಒಂದುಂಟಲ್ಲವೆ! ಜೀವನು ಆತ್ಮಿಕ ಬೆಳೆವಣಿಗೆಯ ಮಾರ್ಗದಲ್ಲಿ ದಿನ ದಿನಕ್ಕೆ ನಡೆಯಬೇಕಾಗಿರುವುದರಿಂದ ಪ್ರಾರಂಭದ ಸ್ಥಿತಿಯಲ್ಲೇ ಎಷ್ಟು ಕಾಲವೂ ಇರಲು ಸಾಧ್ಯವಿಲ್ಲ. ಹಾಗೆ ನಡೆವ ಪ್ರಗತಿ ಮಾರ್ಗ ಪ್ರಯಾ ಣದಲ್ಲಿ ಮಾಹಾತ್ಮ್ಯಜ್ಞಾನ ಪೂರ್ವಕವಾಗಿ ಏರ್ಪಡುವ ಭಕ್ತಿಯೇ ಉತ್ತ ಮ ತರದ ಭಕ್ತಿಯಾಗಿಶ್ರೇಯಸ್ಸಾಧಕವಾಗುವುದಲ್ಲದೆ, ಜ್ಞಾನಪೂರ್ವಕ

ವಲ್ಲದ ಅಂತಹ ಭಕ್ತಿಯಿಂದ ನಿಜವಾದ ಆನಂದವೂ ಮೋಕ್ಷಸಾಧನೆಯೂ ಉಂಟಾಗದು? ಈ ಜ್ಞಾನಸಾಧನೆಗೆ ಶ್ರದ್ಧಾಭಕ್ತಿಗಳೊಂದಿಗೆ ನಿಖಿಲ ಕರ್ಮಗಳನ್ನೂ ಶ್ರೀಹರಿಸೇವನೆಯೆಂಬ ಭಾವನೆಯಿಂದಮಾಡುತ್ತಾ ಕ್ರಮವಾಗಿ ನಿದಾನವಾಗಿ ನಡೆವುದಾದರೆ ಯಾವ ಅಪಘಾತವೂ ಉಂಟಾಗದೆ ಯೋಗ್ಯ ಕಾಲದಲ್ಲಿ ಜ್ಞಾನವೂ ಲಭ್ಯವಾಗುವುದು. ಹಾಗಲ್ಲದೆ, ಪ್ರಾರಂಭಸ್ಥಿತಿಯ ಈ ಭಕ್ತಿಗೆ ಕುಂದಕಬಂದು, 'ಅಟ್ಟಕ್ಕೆ ಹಾರಲಾರದವ ಬೆಟ್ಟಕ್ಕೆ ಹಾರಲೆಣಿಸಿ'ದಂತೆ ಒಮ್ಮೆಗೇ ಜ್ಞಾನಮಾರ್ಗಕ್ಕೆ ಹಾರಿಕೊಂಡರೆ ಇಂದ್ರಿಯಗಳು ಸಾಧನೆಯಿಂದ ಇನ್ನೂ ಪರಿಪಕ್ವ ಸ್ಥಿತಿಗೆ ಬಾರದೆ ಇರುವುದರಿಂದ, ಅದರಿಂದ ಜ್ಞಾನಲಾಭವಾಗುವುದಂತಿರಲಿ, ಆ ಸಾಧನಾ ಮಾರ್ಗಕ್ಕೇ ಮಹದಪಾಯವು ಸಂಭವಿಸುವುದು ತಪ್ಪದು. ಆದುದರಿಂದ ಅಂತಹ ಸಂದರ್ಭದಲ್ಲಿ ಬಲವಂತದಿಂದಲಾದರೂ ಪಂಚೇಂದ್ರಿಯಗಳನ್ನು ಹರಿಯಗೊಡದಂತೆ ಬಂಧಿಸಿ ಆತ್ಮನಿಷ್ಠೆಯನ್ನು ಅಭ್ಯಸಿಸಬೇಕಾದುದು ಅತ್ಯಾವಶ್ಯಕವಾಗುವುದು. ಆದರೆಹಾಗೆ ಪಂಚೇಂದ್ರಿಯಗಳ ಸ್ವಾಭಾವಿಕ ಇಚ್ಛೆಗಳನ್ನು ತಡೆಯುವುದೇನು ಸಾಮಾನ್ಯ ಕಾರ್ಯವೇ? ಬಹು ಕಷ್ಟಸಾಧ್ಯವಾದ ಆ ಕಾರ್ಯವು, ಗೃಹಕೃತ್ಯನಿರ್ವಹಣದಲ್ಲಿ ತೊಡಗಿರುವ ಸ್ತ್ರೀ ಜನರು, ಮತ್ತು ಅಪ್ರಬುದ್ಧರಾದ ಜನಸಾಮಾನ್ಯರು, ಮುಂತಾದವರಿಂದ ಸಾಗಲಾರದೆಂಬುದನ್ನು ತಿಳಿದು, ಹಿರಿಯರು ಶ್ರದ್ಧಾಯುಕ್ತವೂ ನಿಷ್ಕಾಮ ಕರ್ಮದ್ಯೋತಕವೂ ಆದ ಭಕ್ತಿಮಾರ್ಗದಲ್ಲಿ ಅಂಥವರು ನಿದಾನವಾಗಿ ನಡೆದು ಆತ್ಮಸಾಧನೆಯನ್ನು ಮಾಡಿಕೊಳ್ಳಲೆಂದು ಯೋಚಿಸಿದ್ದುದು. ಇಂದ್ರನಿಗೆ ಅಹಲ್ಯಾಜಾರ ಎಂದು ವೇದದಲ್ಲಿ ಹೇಳಲ್ಪಟ್ಟಿರುವ ಸಂಬೋಧನೆಗೆ ಇದೇ ಅಂತರಾರ್ಥವಿರಬೇಕೆಂಬುದನ್ನು ವಿಚಾರಜ್ಞರು ಯೋಚಿಸಿ ಗ್ರಹಿಸಬೇಕಲ್ಲದೆ, ಅದಕ್ಕೆ ಸ್ಥೂಲದೃಷ್ಟಿಯಿಂದ ವಿಪರೀತಾರ್ಥಗಳನ್ನು ಕಲ್ಪಿಸಲು ಹೊರಡಬಾರದು. ನಮ್ಮ ಮನೋಮಯ ಕ್ಷೇತ್ರವು ಅ–ಹಲ್ಯವಾಗಿ ಎಂದರೆ ಇನ್ನೂ ಉಳಲ್ಪಡದೆ ಇರುವಾಗ ಅದರಲ್ಲಿ ಮಾನಸೇಂದ್ರಿಯಾಧಿಪತಿಯಾದ ಇಂದ್ರನು ಪ್ರವೇಶಿಸಿ ವ್ಯವಸಾಯ ನಡೆಯಿಸಬೇಕಾದುದು ಕರ್ತವ್ಯವೇ ಆಗಿದೆ. ಈ ಕಾರ್ಯವು ಅನುದಿನವೂ ನಮ್ಮಲ್ಲೇ ನಡೆಯುತ್ತಲೇ ಇರುವುದಲ್ಲವೆ !

ಮೇಲ್ಕಂಡಂತೆ ಆ ಆಶ್ರಮ ವಿಚಾರವನ್ನು ತಿಳಿಸಿದ ವಿಶ್ವಾಮಿತ್ರರ ಮಾತ ಗಳನ್ನು ಕೇಳಿ ರಾಮಚಂದ್ರನು ಪರಮಸಂತೋಷಪಟ್ಟನು. ಆಗ ವಿಶ್ವಾಮಿತ್ರರು–'ಶ್ರೀರಾಮಾ ಅಷ್ಟೇ ಮಾತ್ರವಲ್ಲ. ಇಲ್ಲಿ ನಿನ್ನಿಂದ ಒಂದುಕಾರ್ಯವು ನಡೆಯಬೇಕಾಗಿದೆ ಬಾ' ಎಂದು, ಆತನನ್ನು ಗೌತಮ ರಿದ್ದ ಆಶ್ರಮದ ಬಳಿಗೆ ಕರೆದುಕೊಂಡು ಹೋದರು. ಅಲ್ಲಿ ಚಲನವಿಲ್ಲದೆ ಚೇಷ್ಟೆಯಿಲ್ಲದೆ, ಗೌತಮ ಮಹರ್ಷಿಗಳ ತಪಃ ಪ್ರಭಾವದಿಂದಲೂ, ಅಂತ ಯಾಮಿಯಾಗಿ ನಡೆಯುತ್ತಿದ್ದ ಅಗಾಧತಪಸ್ಸಿನ ಸಾಮರ್ಥ್ಯದಿಂದಲೂ, ಯಾ ವ ಉಪಹತಿಗೂ ಒಳಗಾಗದೆ ಕೇವಲ ಶಿಲೆಯೋ ಎಂಬಂತೆ ಬಿದ್ದಿದ್ದ ಮುನಿ ಪತ್ನಿ ಅಹಲ್ಯಾದೇವಿಯನ್ನು ಶ್ರೀರಾಮಲಕ್ಷ್ಮಣರು ಕಂಡರು. ಎಷ್ಟೋ ಕಾಲಗಳಿಂದ ನಿಶ್ಚೇಷ್ಟಿತವಾಗಿ ನಿದ್ರಾಹಾರ ರಹಿತವಾಗಿ ಬಿದ್ದಿದ್ದರೂ, ಮುಖದಲ್ಲಿ ದಿವ್ಯತೇಜೋರಾಶಿಯು ಉಕ್ಕುತ್ತಿರಲು, ನಿದ್ರಿಸುತ್ತಿರು ವಂತೆ ತೋರುತ್ತಿದ್ದ ಆಕೆಯನ್ನು ಕಂಡೊಡನೆ ಶ್ರೀರಾಮನು, ಚಕಿತ ನಾಗಿ–"ಮುನಿವರ್ಯರೇ, ಇದೇನು ಈಕೆ ಯಾರು?" ಎನ್ನಲು; ವಿಶ್ವಾ ಮಿತ್ರರು–'ಶ್ರೀರಾಮಾ ಇದು ಅಹಲ್ಯಾದೇವಿಯ ಭೌತಿಕದೇಹವು. ಇದನ್ನು ನೀನು ನಿನ್ನ ಚರಣಾರವಿಂದದಿಂದ ಸ್ಪರ್ಶಮಾಡು' ಎಂದರು. ಆ ಸಾಧ್ವಿಯ ದೇಹವನ್ನು ತನ್ನ ಪಾದದಿಂದ ಸ್ಪರ್ಶಿಸಲು ಶ್ರೀರಾಮನು ಹಿಂಜರಿಯುತ್ತಿರಲು ವಿಶ್ವಾಮಿತ್ರರು–'ರಾಮಚಂದ್ರಾ, ಸಂಶಯಗೊಳ್ಳ ಬೇಡ. ಅಂತರಾತ್ಮಕನೂ, ಸಮಸ್ತ ಜಗತ್ತಿಗೂ ಚೇತನ ಸ್ವರೂಪನೂ ಆದಿಮಧ್ಯಾಂತರಹಿತನೂ ಆದ ನಿನ್ನನ್ನೇ ಈ ಸಾಧ್ವಿಯು ಬಹುಕಾಲಗ ಳಿಂದ ಆರಾಧಿಸುತ್ತಾ, ನಿನ್ನ ದಿವ್ಯದರ್ಶನಕ್ಕಾಗಿಯೇ ಕಾದಿರುವಳು. ಈಗ ಭವದೀಯ ತೇಜೋರಾಶಿಯು ನಿನ್ನ ಪಾದಾಂಗುಟದ ಮೂಲಕ ಈ ದೇಹಕ್ಕೆ ಪ್ರವೇಶಿಸದಿದ್ದರೆ, ನಿಶ್ಚಲವಾಗಿ ನಿಶ್ಚೇಷ್ಟಿತವಾಗಿ ಬಿದ್ದಿರುವ ಈಕೆಗೆ ಬಾಹ್ಯಪ್ರಜ್ಞೆಯೇ ಉಂಟಾಗಲಾರದು. ಗೌತಮ ಮಹರ್ಷಿಗಳ ಆಶಯವಾದರೂ ಅದೇ ಇರುವುದು. ಈಕೆಯು ಇಷ್ಟುಕಾಲಗಳಿಂದ ಏಕಾಂತವಾಗಿ ಅಗಾಧ ತಪಸ್ಸುಮಾಡಿ ಜ್ಞಾನಜ್ಯೋತಿಯನ್ನು ಬೆಳೆಸಿರು ವಳು. ಶ್ರೀರಾಮಾ, ಕರುಣಾ ಕಟಾಕ್ಷವಿಟ್ಟು ಈ ಸಾಧ್ವೀಮಣಿಯನ್ನು ಉದ್ಧರಿಸು' ಎಂದರು. ಶ್ರೀರಾಮನು ಮುಂದೆ ಮಾತನಾಡದೆ, ತನ್ನ

ಬಲ ಪಾದದ ಅಂಗುಳಿಯನ್ನು ಅಹಲ್ಯಾದೇವಿಯ ದೇಹಕ್ಕೆ ಸೋಕಿಸಿದನು. ಒಡನೆ ಆಕೆಯ ದೇಹವು ನವಚೈತನ್ಯಯುಕ್ತವಾಗಿ, ಕೈಕಾಲುಗಳನ್ನಲ್ಲಾಡಿಸಿತು. ಅಹಲ್ಯೆಯು ಕಣ್ಣುಬಿಟ್ಟು ಸುತ್ತಲೂ ನೋಡಿದಳು. ಬಳಿಯಲ್ಲೇ ನಿಂತಿದ್ದ ವಿಶ್ವಾಮಿತ್ರಮುನಿವರ್ಯರೂ ಶ್ರೀರಾಮಲಕ್ಷ್ಮಣರೂ ದೃಷ್ಟಿಗೋಚರರಾದರು. ಪಂಚೇಂದ್ರಿಯಗಳೂ ಅತ್ಯಂತ ಸ್ಫುಟರೀತಿಯಿಂದ ಉತ್ತೇಜನಗೊಂಡು ಪ್ರಕಟವಾದುವು. ಅಪೂರ್ವ ಪ್ರಜ್ಞಾಜ್ಯೋತಿಯು ಪ್ರಕಾಶಿತವಾಯಿತು. ಮನಸ್ಸಿನಲ್ಲಿ ಅನಿರ್ವಚನೀಯವಾದ ಆನಂದದ ತೆರೆಗಳು ಮೇಲೆಮೇಲೆ ಏರತೊಡಗಿದುವು. ಆನಂದಬಾಷ್ಪವು ಸಾರೋದ್ಧಾರವಾಗಿ ಸುರಿಯತೊಡಗಿತು. ಕಂಠವು ಗದ್ಗದಿತವಾಗಿ ಬಾಯಿಂದ ಮಾತು ಹೊರಡದಂತಾಯಿತು. ಆಗಲಾಸಾಧ್ವಿಯು ಶ್ರೀರಾಮನ ಪಾದಗಳಿಗೆ ನಮಸ್ಕರಿಸಿ,–'ಪ್ರಭೋ ದೇವಾದಿದೇವ, ಬ್ರಹ್ಮೇದ್ರಾದಿ ವಂದಿತ ಪಾವನ ಚರಣ, ಜಗಚ್ಚೈತನ್ಯಾದಿಕಾರಣ, ಭಕ್ತವತ್ಸಲ ನಿನ್ನೀಪಾದಕಮಲಗಳನ್ನು ಕಂಡು ಇಂದು ಧನ್ಯಳಾದೆನು. ಮಹರ್ಷಿಗಳ ಆಜ್ಞೆಯಿಂದ ಪಂಚೇಂದ್ರಿಯ ಸ್ವಾತಂತ್ರ್ಯವೂ ತಪ್ಪಿ, ಕೇವಲ ಶಿಲಾಸ್ವರೂಪಳಾಗಿ ಬಹುಕಾಲದಿಂದ ನಿನ್ನೀ ದಿವ್ಯ ಪಾದದರ್ಶನವನ್ನೇ ಅಪೇಕ್ಷಿಸಿ ನಿರೀಕ್ಷಿಸಿಕೊಂಡಿದ್ದೆನು. ದೇವಾದಿದೇವ–ಮಹಾನುಭಾವ ಈ ದೀನಳನ್ನು ಉದ್ಧರಿಸಿ ರಕ್ಷಿಸಿದೆ. ಇನ್ನು ಬಹುಕಾಲದಿಂದ ಅಗಲಿರುವ ಪತಿಪಾದಾಂಬುಜ ಪ್ರಾಪ್ತಿಯನ್ನೂ ಅನುಗ್ರಹಿಸು" ಎಂದು ಹಲವು ಬಗೆಯಿಂದ ಪ್ರಾರ್ಥಿಸಿ ಮೇಲಕ್ಕೆದ್ದು ಷೋಡಶೋಪಚಾರಗಳಿಂದಲೂ ಶ್ರೀರಾಮಚಂದ್ರನನ್ನೂ, ವಿಶ್ವಾಮಿತ್ರಲಕ್ಷ್ಮಣರನ್ನೂ ಪೂಜಿಸಿದಳು.

ಆಕೆಯಿಂದ ಈ ರೀತಿ ಪೂಜಿತನಾದ ಶ್ರೀರಾಮನು, ಅಗಾಧ ತಪಸ್ಸಿನಿಂದ ದಿವ್ಯ ತೇಜೋವಂತಳಾದ ಆ ಪತಿವ್ರತಾ ಶಿರೋಮಣಿಯ ಪಾದಗಳನ್ನು ಹಿಡಿದು ನಮಸ್ಕರಿಸಿ ಉಚಿತವಾಕ್ಯಗಳಿಂದ ಆದರಿಸಿದನು ಆ ವೇಳೆಗೆ ಗೌತಮರು ಜ್ಞಾನದೃಷ್ಟಿಯಿಂದ, ಶ್ರೀರಾಮಚಂದ್ರನು ತಮ್ಮಾಶ್ರಮಕ್ಕೆ ಬಂದು, ತಮ್ಮ ಪತ್ನಿಯನ್ನು ಉದ್ಧರಿಸಿದ ಸಂಗತಿಯನ್ನು ತಿಳಿದು ಪರಮಸಂತೋಷಗೊಂಡು ಮನೋವೇಗ ಗಮನದಿಂದ ಉತ್ತರಕ್ಷಣದಲ್ಲೇ ಆ ಸ್ಥಳಕ್ಕೆ ಬಂದು, ಶ್ರೀಮನ್ಮಹಾವಿಷ್ಣು ಸ್ವರೂಪಿಯಾದ

ಶ್ರೀರಾಮಚಂದ್ರನನ್ನೂ ವಿಶ್ವಾಮಿತ್ರಾದಿಗಳನ್ನೂ ವಿವಿಧೋಪಚಾರಗ ಳಿಂದ ಪೂಜಿಸಿದರು. ಶ್ರೀರಾಮಾದಿಗಳು ಬಹುಕಾಲಾನಂತರ ಏಕತ್ರ ಬೆರೆದ ಆ ದಂಪತಿಗಳನ್ನು ನೋಡಿ, ಪರಮಾನಂದಪಟ್ಟು, ಮುಂದೆ ಮಿಥಿ ಲಾಪಟ್ಟಣಕ್ಕಾಗಿ ಪ್ರಯಾಣ ಮಾಡಿದರು,

---

## ಉಪಸಂಹಾರ

ಗೌತಮ ಪತ್ನಿಯಾದ ಅಹಲ್ಯೆಯು ಹೀಗೆ ಅಲೌಕಿಕ ರೀತಿಯ ಅಗಾಧ ತಪಶ್ಚರ್ಯೆಯನ್ನು ನಡೆಯಿಸಿ ಜ್ಞಾನಸಿದ್ಧಿಯನ್ನುಗಳಿಸಿದಳು. ಗೌತಮ ಮಹರ್ಷಿಗಳು ತಮ್ಮ ಪತ್ನಿಯು ಸಂಪಾದಿಸಿದ ದಿವ್ಯತೇಜೋ ರಾಶಿಯನ್ನು ಕಂಡು ಪರಮ ಸಂತೋಷ ಭರಿತರಾದರು. ಮುಂದೆ ಆ ದಂಪತಿಗಳು ಯಾವ ಉಪದ್ರವವೂ ಇಲ್ಲದಿರಲು, ಆತ್ಮಜ್ಞಾನ ತತ್ಪರ ರಾಗಿ, ಭಗವತ್ಸೇವಾರತರಾಗಿ ಲೋಕಾನುಗ್ರಹಾರ್ಥವಾಗಿ ಆ ಆಶ್ರಮ ದಲ್ಲೇ ತಪೋನಿರತರಾಗಿದ್ದರು. ಬ್ರಹ್ಮೇಂದ್ರಾದಿಗಳೂ ಇತರ ದೇವರ್ಷಿ ಬ್ರಹ್ಮರ್ಷಿಗಳೂ ಆ ಸ್ಥಳಕ್ಕೆ ಬಂದು, ಆ ಪೂಜ್ಯದಂಪತಿಗಳನ್ನು ಉಚಿತ ರೀತಿಯಿಂದ ಗೌರವಿಸಿದರು. ಬ್ರಹ್ಮದೇವನು ತಪಸ್ಸಿದ್ಧಳಾದ ಪತ್ನೀ ಯುಕ್ತರಾದ ಗೌತಮರನ್ನೂ, ಕಶ್ಯಪ ಅತ್ರಿ ಭಾರದ್ವಾಜ ವಿಶ್ವಾಮಿತ್ರ ಜಮದಗ್ನಿ ವಸಿಷ್ಠರೆಂಬ ಈ ಆರುಮಂದಿ ಮಹರ್ಷಿಗಳ ಪಙ್ತಿಗೆ ಸೇರಿಸಿ ಆದರಿಸಿದನು. ಅಂದಿನಿಂದ ಈ ಏಳು ಮಂದಿ ಮಹರ್ಷಿಗಳೂ ಲೋಕ ಕ್ಷೇಮಕ್ಕಾಗಿ ತಪೋನಿರತರಾಗಿರುವರು

ಪೌರಾಣಿಕ ವಿಚಾರಗಳನ್ನು, ಕುರಿತು ಏನೆಂದೂ ಸ್ವಲ್ಪಮಟ್ಟಿಗೆ ವಿಚಾರಯುಕ್ತ ಮನಸ್ಕತೆಯಿಂದ ಗಮನಿಸತೊಡಗಿದರೆ, ತ್ರಿಮೂರ್ತಿಗಳ, ಇತರದೇವತೆಗಳ, ಋಷಿಮುನಿಗಳ ವಿವಿಧಾಚರಣೆಗಳಿಗೆ ಅಂತರಾರ್ಥ ಗಳು ಗೋಚರವಾಗದಿರಲಾರವು. ದೇವತೆಗಳನ್ನೂ ಮಹರ್ಷಿಗಳನ್ನೂ ಪುರಾಣ ಪುರುಷ ಶ್ರೇಷ್ಠ ವ್ಯಕ್ತಿಗಳನ್ನೂ ಅವರವರ ಸಹಜ ಸ್ವಭಾವ

ದಿಂದಲೇ ನೋಡಬೇಕಲ್ಲದೆ, ನಮಗೆ ಸಹಜವಾಗಿರುವ ಅಸೂಯೆ ದಂಭ ದ್ವೇಷಕಾಪಟ್ಯಾದಿಗಳು ಕಾಮಕ್ರೋಧಗಳು ಮುಂತಾದ ಅಲ್ಪಪಾತ್ರ ಗಳಿಂದ ಅವರ ಯೋಗ್ಯತೆಯನ್ನೂ ಅಳೆಯುತೊಡಗಬಾರದು. ಇಂತಹ ಸಹಜ ಮನೋಭಾವನೆಯನ್ನು ನಮ್ಮವರಿಗೆ ಕರುಣಿಸಿ, ತನ್ಮೂಲಕ ಭಾರತೀಯ ಪೌರಾಣಿಕ ವಿಚಾರಗಳಲ್ಲಿ ಶ್ರದ್ಧಾ ಭಕ್ತಿಗಳುಂಟಾಗುವಂತೆ ಶ್ರೀವರನು ಅನುಗ್ರಹಿಸಲಿ—ಮತ್ತು ಸಾಧ್ವೀಮಣಿ ಅಹಲ್ಯಾದೇವಿಯನ್ನು ರಕ್ಷಿಸಿದಂತೆಯೇ, ಶ್ರೀರಾಮಚಂದ್ರಮೂರ್ತಿಯು, ಅಶೇಷ ಸ್ತ್ರೀವೃಂದಕ್ಕೂ ಶ್ರದ್ಧೆ ನಿಶ್ಚಲಮತಿ, ವೈರಾಗ್ಯ, ದೃಢ ಪತಿಭಕ್ತಿ ಮುಂತಾದ ಸೌಭಾಗ್ಯಗಳನ್ನೂ ದಯೆಗೈದು ರಕ್ಷಿಸಲಿ.

ತಥಾಸ್ತು.



# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

**ಮುನ್ನುಡಿ :—**

ನಮ್ಮ ಮೈಸೂರು ಸಂಸ್ಥಾನದ ಇತಿಹಾಸದಲ್ಲಿ ಕ್ರಿ. ಶ. ೧೮ನೆಯ ಶತಮಾನವು ಬಹು ಮಹತ್ವದ್ದಾಗಿದೆ. ಈ ಶತಮಾನದಲ್ಲಿ ದೇಶದ ಆಡಳಿತದಲ್ಲಿ ಎಂದೂ ಇಲ್ಲದಿದ್ದ ಅತಿಶಯ ಬದಲಾವಣೆಗಳು ನಡೆದುವು. ಈ ಬದಲಾವಣೆಗಳಿಂದ ನಮ್ಮ ದೇಶಕ್ಕೇ ಉಂಟಾದ ಲಾಭನಷ್ಟಗಳ ವಿಚಾರವಂತಿರಲಿ! ಮೊಗಲಾಯಿ ಚಕ್ರವರ್ತಿಗಳ ಅಧಿಕಾರವು ಅಂತ್ಯವಾದ ತರುವಾಯ ಹಿಂದೂಸ್ಥಾನದಲ್ಲಿ ದಿನದಿನಕ್ಕೆ ಬಲಗೊಳ್ಳುತ್ತಾ ಕ್ರಮಕ್ರಮವಾಗಿ ರಾಜ್ಯಸಂಪಾದನೆ ಮಾಡಿಕೊಂಡು ಬರುತ್ತಿದ್ದ ಇಂಗ್ಲೀಷರ ಆಧಿಪತ್ಯವನ್ನು, ದಕ್ಷಿಣಹಿಂದೂಸ್ಥಾನದಲ್ಲಿ ಸ್ಥಿರವಾಗಿ ನೆಲೆಗೊಳಿಸುವಲ್ಲಿ ಮಾತ್ರ, ಈ ಬದಲಾವಣೆಗಳು ಅಧಿಕ ಸಹಾಯಮಾಡಿದುವು. ಈಗಿನ ರಾಜವಂಶಕ್ಕೆ ಮೂಲಪುರುಷರಾದ ಯದುರಾಯರ ಕಾಲದಿಂದಲೂ ಸ್ವತಂತ್ರವಾಗಿ ರಾಜ್ಯಭಾರ ಮಾಡುತ್ತಾ ಬಂದ ಮೈಸೂರರಸರು, ಈ ಸಂದರ್ಭದಲ್ಲಿ ಸಂಸ್ಥಾನದ ನೌಕರನೊಬ್ಬನ ಪ್ರಾಬಲ್ಯಕ್ಕೆ ಬಲಿಬಿದ್ದು, ರಾಜ್ಯವನ್ನು ಕಳೆದುಕೊಂಡು, ಅನೇಕ ಕಷ್ಟಗಳನ್ನನುಭವಿಸಿದರು. ಕೊನೆಗೆ ಮೂವತ್ತೆಂಟು ವರ್ಷಗಳ ತರುವಾಯ ಪುನಃ ರಾಜ್ಯಾಧಿಪತ್ಯವು ಆ ಮೂಲವಂಶೀಕರಿಗೇ ದೊರೆಯಿತಾದರೂ, ಅರಸರ ಪ್ರಭುತ್ವವು ಹಿಂದಿದ್ದಂತಹ ಸ್ವಾತಂತ್ರ್ಯವನ್ನು ಹೋಗಲಾಡಿಸಿಕೊಂಡು-ಮೂಗುದಾರ ಹಾಕಲ್ಪಟ್ಟ ಎತ್ತಿನಂತೆ-ಪರಾಧೀನಕ್ಕೆ ಒಳಪಟ್ಟಿತು. ಆದರೆ ಒಂದು ವಿಷಯದಲ್ಲಿ ಸಮಾಧಾನ ಪಡಬಹುದು! ರಾಜ್ಯವು ಕೇವಲ ಪರಾಕ್ರಾಂತವಾಗಿ, ಪೂರ್ವದ ರಾಜವಂಶವೇ ಲುಪ್ತವಾಗಿ ಹೋಗುವ ದುಸ್ಥಿತಿಗಿಂತಲೂ, ಸಾಮಂತರಾಜ್ಯಪಾಲನೆಯ ಸ್ವರೂಪದಿಂದಲಾದರೂ ಪೂರ್ವದ ರಾಜವಂಶಕ್ಕೇ ಸಿಂಹಾಸನವು ದೊರೆತುದು ಸುದೈವವೆನ್ನಲು ಸಂದೇಹವೇನು!

ಸುಮಾರು ಮುನ್ನೂರು ವರ್ಷಕಾಲ ಒಂದೇರೀತಿಯಾಗಿ ನಡೆದು ಬಂದು, ಅನೇಕಮಂದಿ ತೇಜಸ್ವಿರಾಜರಿಂದ ಸುಪ್ರತಿಷ್ಠಿತವಾಗಿದ್ದ ಈ ಮೈಸೂರು ರಾಜಸಿಂಹಾಸನವನ್ನು ಬಹು ಸ್ವಲ್ಪಕಾಲದ ತನ್ನ ಪ್ರಾಬಲ್ಯದಿಂದ ಆಕ್ರಮಿಸಿ ಸ್ವಾಧೀನಗೊಂಡವನು ನಮ್ಮ ಕಥಾನಾಯಕನಾದ ಹೈದರಲ್ಲೀಖಾನ್ ಬಹದ್ದೂರನು. ಈತನು ಈ ಸಂಸ್ಥಾನವನ್ನು ಸಂಪಾದಿಸಿ ತಾನು ರಾಜ್ಯಾಧಿಪತಿಯಾಗಬೇಕೆಂಬ ಮಹತ್ವಾಕಾಂಕ್ಷೆಯುನ್ನುಂಟಾಗಿ ಇಲ್ಲಿ

ನೌಕರಿಯನ್ನು ಪ್ರಾರಂಭಿಸಿದವನಲ್ಲ. ಆದರೆ ಆ ಕಾಲದಲ್ಲಿ ಈ ಸಂಸ್ಥಾನ ದಲ್ಲಿ ಮೇಲೆಮೇಲೆ ಪ್ರಾಪ್ತವಾದ ಹಲವು ಸಂದರ್ಭಗಳು, ಅದೃಷ್ಟಶಾಲಿ ಯಾದ ಆತನ ಅಭಿವೃದ್ಧಿಗೆ ಸಾಧಕವಾಗಿ ಪರಿಣಮಿಸಿದುವು. ಹದಿನೇಳನೆಯ ಶತಮಾನದ ಅಂತ್ಯಭಾಗದಲ್ಲಿ ಬಹು ದಕ್ಷತೆಯಿಂದ ರಾಜ್ಯಭಾರಮಾಡಿ, ಹಲವು ಮುಖಗಳಿಂದ ಸಂಸ್ಥಾನದ ಕೀರ್ತಿಯನ್ನು ವಿಸ್ತಾರಗೊಳಿಸಿದ ಚಿಕ್ಕದೇವರಾಜ ಒಡೆಯರ ನಂತರ ಸಿಂಹಾಸನವನ್ನೇರಿದ ಪ್ರಭುಗಳಲ್ಲಿ ಒಬ್ಬ ರೂ ಶಕ್ತರಿಲ್ಲದೆ, ರಾಜ್ಯಾಧಿಪತ್ಯವು ಕ್ರಮಕ್ರಮವಾಗಿ ಸರ್ವಾಧಿಪತಿಗಳ ವಶವಾಯಿತು. ದೇಹಕ್ಕೆ ಪ್ರಧಾನಾಂಗವಾದ ತಲೆಯೇ ಇಲ್ಲದೆ, ಕೈಕಾಲು ಮುಂತಾದ ಅಂಗಗಳಿಗೇ ಸ್ವಾತಂತ್ರ್ಯವುಂಟಾಗಿ ಅವು ಕುಣಿಯತೊಡಗಿ ದರೆ ಆಗ ದೇಹದಸ್ಥಿತಿ ಹೇಗಿರುವುದೋ ಈ ರಾಜ್ಯದಸ್ಥಿತಿಯೂ ಅಂದು ಹಾ ಗಾಯಿತು. ಸರ್ವಾಧಿಕಾರಿಗಳಾದ ದೇವರಾಜಯ್ಯ ನಂಜರಾಜಯ್ಯ ಎಂಬಿಬ್ಬ ರು ಸ್ವಾರ್ಥಸಾಧಕರು, ರಾಜನಿರ್ವಾಹಕರೋ ಎಂಬಂತೆ ಸ್ವಾತಂತ್ರ್ಯ ವನ್ನು ವಹಿಸಿ, ದೇಶದಲ್ಲಿ ಮನಬಂದಂತೆ ಆಧಿಪತ್ಯ ಮಾಡತೊಡಗಿದರು. ಈ ಅವಿವೇಕವು ಆಧಿಪತ್ಯ ಮಾಡತೊಡಗಿದಾಗಲೇ ಸಂಸ್ಥಾನದ ಸೈನ್ಯದಲ್ಲಿ ಅಧಿಕಾರಿಯಾಗಿದ್ದ ಹೈದರಲ್ಲೀಖಾನನು. ತನ್ನಲ್ಲಿ ಮೂರ್ತಿಮತ್ತಾಗಿದ್ದ ಪ್ರಭುಶಕ್ತಿ, ಧೈರ್ಯಸಾಹಸಾದಿಗಳು, ದೂರದೃಷ್ಟಿ, ಕಾರ್ಯದಕ್ಷತೆ, ಆಜ್ಞಾ ಸಾಮರ್ಥ್ಯ ಮುಂತಾದ ಕೆಲವು ಅಸಾಮಾನ್ಯ ಗುಣಗಳ ಪ್ರಭಾವದಿಂದ ಕ್ರಮಕ್ರಮವಾಗಿ ಪ್ರಸಿದ್ಧಿಗೆ ಬಂದು, ಕೊನೆಗೆ ಸಿಂಹಾಸನವನ್ನೂ ಆಕ್ರ ಮಿಸಿ ತಾನೇ ನವಾಬನಾದನು. ಇಂತು ಅನಾದಿಯಿಂದಲೂ ಹಿಂದೂ ಸಂಸ್ಥಾನವಾಗಿದ್ದ ಮೈಸೂರುಚರಿತ್ರೆಯಲ್ಲಿ, ಮಹಮ್ಮದೀಯರ ಪ್ರಭುತ್ವದ ವೃತ್ತಾಂತವೂ ಬರೆಯಲ್ಪಡಬೇಕಾಯಿತು. ಹೈದರಲ್ಲಿಯೂ ಆತನ ಮಗ ಟಿಪ್ಪೂಸುಲ್ತಾನನೂ ಒಟ್ಟಿಗೆ ಮೂವತ್ತೆಂಟು ವರ್ಷಕಾಲ ಈ ದೇಶದಲ್ಲಿ ಆಧಿಪತ್ಯಮಾಡಿ ವಿಖ್ಯಾತರಾದರು. ನಮ್ಮ ದೇಶಚರಿತ್ರೆಗೆ ಸಂಬಂಧಿಸಿದ ಈ ವೃತ್ತಾಂತವೂ ನಮ್ಮ ಚಿಕ್ಕವರಿಗೆ ತಿಳಿದಿರಬೇಕಾದುದು ಆವಶ್ಯಕವಲ್ಲವೆ? ಆದುದರಿಂದ ಕರ್ಣಾಟಕ ಭಾಷಾಬಾಂಧವರು ಈ ಗ್ರಂಥಕ್ಕೂ ಸ್ವಾಗತ ವಿತ್ತು ಗ್ರಂಥಮಾಲಾ ಉದ್ಯಮವನ್ನು ಪ್ರೋತ್ಸಾಹಗೊಳಿಸಬೇಕೆಂದು ಪ್ರಾ ರ್ಥಿಸುತ್ತೇವೆ.

**ಯಂ. ರಾಮರಾವ್.**

ಶ್ರೀರಾಮ ಸಹಾಯಂ

# ಮೈಸೂರಿನ ನವಾಬ

# ಹೈದರಲ್ಲೀ ಖಾನ್ ಬಹದ್ದೂರ್

## ಅಧ್ಯಾಯ ೧ — "ವಂಶವೃತ್ತಾಂತ-ಜನನ"

ನಮ್ಮ ಮಾತೃಭೂಮಿಯಾದ ಈ ಭಾರತದೇಶವು, ಪೂರ್ವ-ದಕ್ಷಿಣ ಪಶ್ಚಿಮದಿಕ್ಕುಗಳಲ್ಲಿ ವಿಸ್ತಾರವಾದ ಸಮುದ್ರಗಳಿಂದಲೂ, ಉತ್ತರದಿಕ್ಕಿನಲ್ಲಿ ಕಡಿದಾದ ಪರ್ವತಪಟ್ಟಿಗಳಿಂದಲೂ, ಸುತ್ತುವರಿಯಲ್ಪಟ್ಟು-ಹೀಗೆ ಪರಕೀಯರ ಧಾಳಿಗೆ ತಪ್ಪದಿಲ್ಲದಂತೆ ಪ್ರಕೃತಿ ದೇವತೆಯಿಂದಲೇ ಸಂರಕ್ಷಿಸಲ್ಪಟ್ಟಿದ್ದರೂ, ವಾಯುವ್ಯಮೂಲೆಯಲ್ಲಿ ಮಾತ್ರ ಚಿಕ್ಕದಾದ ಒಂದು ಕಣಿವೆಯ ಮಾರ್ಗವು ಉಳಿದು, ಪರದೇಶೀಯರು, ಈ ದೇಶಕ್ಕೆ ಬರಲು ಅವಕಾಶವನ್ನು ಕಲ್ಪಿಸಿತು. ಆ ಮಾರ್ಗವಾಗಿ, ಈಗ್ಗೆ ಒಂಬತ್ತು ಶತಮಾನಗಳ ಹಿಂದೆ ಬಂದು ಈ ದೇಶವನ್ನು ಹೊಕ್ಕ ಮುಹಮ್ಮದೀಯರು, ತಮ್ಮ ಮತಪ್ರಚಾರದ ಉದ್ದೇಶದಿಂದಲೂ, ಧನಸಂಗ್ರಹಣ ರಾಜ್ಯಸಂಗ್ರಹಣಾದಿ ಆಸೆಗಳಿಗೆ ವಶರಾಗಿ ಸ್ವಾರ್ಥಸಾಧನೋದ್ದೇಶದಿಂದಲೂ, ಮಾಡಿದ ಹಲವು ಕಾರ್ಯಗಳಿಂದ ಈ ದೇಶೀಯರು ಎಷ್ಟುಮಟ್ಟಿಗೆ ದಣಿದುಹೋದರೆಂಬುದಕ್ಕೆ ಪ್ರಮಾಣವನ್ನು-ಅಳತೆಯನ್ನು ಇಷ್ಟೇ ಎಂದು ಹೇಳಲು ಸಾಧ್ಯವಿಲ್ಲ. ಈ ಆದ್ಯಂತ ವಿಚಾರವೂ ದೇಶಚರಿತ್ರೆಯ ವಾಚಕರಿಗೆ ಪರಿಚಯವಿಲ್ಲದೆ ಇಲ್ಲ. ಆ ಸಂಗತಿಯನ್ನೆಲ್ಲ ಇಲ್ಲಿ ವಿಸ್ತಾರವಾಗಿ ಹೇಳಬೇಕಾದ ಆವಶ್ಯಕವೂ ಇಲ್ಲ—ಸ್ಥಳಾಭಾವದಿಂದ ಅನುಕೂಲವೂ ಇಲ್ಲ. ಆದರೂ ನಮ್ಮ ಪ್ರಕೃತಕಥಾಕ್ಕೆ ಪೂರ್ವಪೀಠಿಕೆಯಾಗಿ ಆ ಸಂಬಂಧ ಕೆಲವೃತ್ತಾಂತಗಳನ್ನು ಹೇಳತಕ್ಕುದು ಅಪ್ರಾಸಂಗಿಕವಾಗಲಾರದು.

ಈಗ್ಗೆ ಹದಿಮೂರು ಶತಮಾನಗಳ ಕೆಳಗೆ ಅರಬ್ಬೀ ದೇಶದಲ್ಲ ಮಹಮ್ಮದ್ ಪೈಗಂಬರ್ ಎಂಬಾತನು ಜನ್ಮಿಸಿ ಮಹಮ್ಮದೀಯಮತವನ್ನು ಸ್ಥಾಪಿಸಿದನಷ್ಟೆ! ಆತನ ತರುವಾಯ ಆ ಮತಾನುಯಾಯಿಗಳಾದ ಹಲವು ಮಂದಿ ಆಸ್ತಿಕರು, ನೂತನವಾಗಿ ಸ್ಥಾಪಿತವಾದ ಆ ಮತದ ತತ್ವಗಳನ್ನು ಅಭ್ಯಸಿಸಿ, ಅವುಗಳನ್ನು ಇತರ ಸ್ಥಳಗಳಲ್ಲೂ ಹಬ್ಬಿಸಲು ಆಸಕ್ತಿಯುಳ್ಳವರಾದರು. ಒಡನೆ ಅವರಿಗೆ ಸ್ವತಃ ಆಸ್ತಿಕರೂ ಸ್ವಮತಪ್ರಚಾರಣೆಯಲ್ಲಿ ದೀಕ್ಷೆಯುಳ್ಳವರೂ ಆದ ಘಜ್ನೀ ಮಹಮ್ಮದನೇ ಮುಂತಾದ ರಾಜರ ಆಶ್ರಯ ದೊರೆಯಿತು. ಮಹಮ್ಮದನು ಹಿಂದೂಸ್ಥಾನದಮೇಲೆ ಹದಿನೇಳುಸಾರಿ ದಂಡಯಾತ್ರೆ ಹೊರಟು ಪ್ರಯಾಣಮಾಡಿದಾಗ್ಗೆ, ಆತನೊಂದಿಗೂ ಆ ತರುವಾಯ ಬಂದ ಇತರ ಹಲವು ಮಂದಿ ರಾಜರೊಂದಿಗೂ ಈ ದೇಶವನ್ನು ಕುರಿತು ಪ್ರಯಾಣಮಾಡಿಬಂದ ಮಹಮ್ಮದೀಯರು, ಪುನಃ ಬಹುದೂರ ಸ್ಥಳವಾದ ತಮ್ಮ ದೇಶಕ್ಕೆ ಹೋಗಲಾರದೆ, ಇಲ್ಲೇ ವಾಸಸ್ಥಾನವನ್ನು ಕಲ್ಪಿಸಿಕೊಂಡು, ಮನೆಬಾಗಿಲುಗಳನ್ನು ಮಾಡಿಕೊಂಡು, ಮಕ್ಕಳು ಮರಿಗಳನ್ನು ಹೆತ್ತು ಕೊನೆಕೊನೆಗೆ ಇದೇ ತಮ್ಮ ಸ್ವದೇಶವೋ ಎಂಬಂತೆ ನೆಲೆಗೊಂಡುಬಿಟ್ಟರು. ಮಹಮ್ಮದ್ ಘೋರಿಯ ದಂಡಯಾತ್ರೆಯು ನಡೆದ ತರುವಾಯ ಬಂದ ಗುಲಾಮಿ, ಖಿಲ್ಜೀ ಮುಂತಾದ ವಂಶಗಳವರ ಕಾಲದಲ್ಲಂತೂ ಹಿಂದೂಸ್ಥಾನದಲ್ಲಿ ಮಹಮ್ಮದೀಯರ ರಾಜ್ಯಾಧಿಪತ್ಯವೃಕ್ಷವೇ ಸ್ಥಾಪಿತವಾಗಿ ದಿನದಿನಕ್ಕೆ ಬಲಗೊಳ್ಳತೊಡಗಿತು. ತರುವಾಯ ಮೊಗಲಾಯಿ ಪ್ರಭುಗಳ ಕಾಲದಲ್ಲಿ ಈ ವೃಕ್ಷವು ಬಹು ದೀರ್ಘವಾಗಿಯೂ ವಿಸ್ತಾರವಾಗಿಯೂ-ಒಳಗಡೆ ತನ್ನ ಬೇರುಗಳನ್ನೂ ಹೊರಗಡೆ ಶಾಖೆ ಉಪಶಾಖೆಗಳನ್ನೂ ಪ್ರಸರಿಸಿ ರೂಢಮೂಲವಾಗಿ ನೆಲೆಗೊಂಡಿತು. ದಕ್ಷಿಣ ಹಿಂದೂಸ್ಥಾನದಲ್ಲೂ ಬಿಜಾಪುರ ಗೋಲ್ಕೊಂಡ ಅಹಮ್ಮದ್‌ನಗರ ಬೇರಾರ್ ಮುಂತಾದ ಮಹಮ್ಮದೀಯ ರಾಜವಂಶಗಳು ಸ್ಥಾಪಿತವಾದುವು. ಹೀಗೆ ಅವಿಚ್ಛಿನ್ನವಾಗಿ ರಾಜಾಶ್ರಯವು ದೊರೆಯುತ್ತಾ ಬಂದುದರಿಂದ, ಈ ದೇಶದಲ್ಲೇ ಆದಿಕಾಲದಿಂದಲೂ ವಾಸಿಸಿದ್ದ ಹಿಂದೂಜನರು ವಿವಿಧಮುಖಗಳಿಂದ ಈ ಮಹಮ್ಮದೀಯ ಪ್ರಭುತ್ವದವರ ಸಾಮ ದಾನ ಭೇದ ದಂಡವೆಂಬ ಚತುರ್ವಿಧ ಉಪಾಯಗಳಿಗೂ ವಶರಾಗಿ, ಕೋಟ್ಯಾನುಕೋಟಿ ಸಂಖ್ಯೆಯಿಂದ ಮಹ

ಮ್ಮದೀಯ ಮತವನ್ನು ಅವಲಂಬಿಸಿದರು. ಪರದೇಶದಲ್ಲಿ ತನ್ನ ಪ್ರಭುತ್ವವನ್ನು ಸ್ಥಿರಗೊಳಿಸಲು ಅಪೇಕ್ಷಿಸುತ್ತಿರುವ ಯಾವ ರಾಜನಾದರೂ ತನ್ನ ಪಂಗಡವನ್ನೂ, ತನ್ನ ಅಭಿಪ್ರಾಯವನ್ನು ಅನುಮೋದಿಸುವವರ ಸಂಖ್ಯೆಯನ್ನೂ ಬಲಪಡಿಸಿಕೊಳ್ಳದೆ ಇರಲು ಸಾಧ್ಯವೆ?. ಹೀಗಾಗಿ ಕ್ರಮಕ್ರಮವಾಗಿ ಏರುತ್ತಾಬಂದ ಈ ಸಂಖ್ಯೆಯು, ಈಗ ಏಳು ಕೋಟಿಯನ್ನು ಮೀರುತ್ತಾಬಂದಿದೆ. ಈ ಮಹತ್ಸಂಖ್ಯಾ ಬಲದಿಂದ ಮಹಮ್ಮದೀಯರು ಇಂದು ಭಾರತ ದೇಶದಲ್ಲಿ ತಮ್ಮ ವ್ಯಕ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಶಕ್ತರಾಗಿದ್ದಾರೆ.

ಅಶಕ್ತಸ್ಥಿತಿಯಲ್ಲಿ ಧಾರ್ಮಿಕ ಸ್ವರೂಪದ ಹೊದಿಕೆಯಿಂದ ಪ್ರಾರಂಭವಾಗುವ ಯಾವುದೊಂದು ಕಾರ್ಯವಾದರೂ, ಜನಬಲ-ಧನಬಲಗಳನ್ನು ಗಳಿಸಿಕೊಂಡ ಒಡನೆಯೇ, ತನ್ನಾಧಾರ್ಮಿಕ ಸ್ವರೂಪವನ್ನು ಕಿತ್ತೊಗೆದು ಆರ್ಥಿಕ ಅಥವ ರಾಜಕೀಯ ಸ್ವರೂಪವನ್ನು ಹೊಂದುವುದು ಲೋಕದಲ್ಲಿ ನಡೆದು ಬಂದ ಒಂದು ಪದ್ಧತಿ. ನಮ್ಮ ದೇಶದಲ್ಲಿ ಕ್ರೈಸ್ತ ಮತವಾದರೂ ಈ ಅಂತಯೆರ್ಧೋದ್ದೇಶದಿಂದಲೇ ಪ್ರಚಾರವಾಗಿ ಪ್ರಬಲಗೊಂಡುದು. ಪ್ರಾರಂಭದಲ್ಲಿ ತಮ್ಮ ಅಸ್ತಿತ್ವವನ್ನು ಕಾಯ್ದುಕೊಳ್ಳುವುದಕ್ಕಾಗಿಯೂ, ತರುವಾಯ ಜೀವನದಲ್ಲಿ ಒಂದು ಸ್ಥಿತಿಯನ್ನು ಗಳಿಸಿಕೊಂಡಮೇಲೆ ಅದನ್ನು ರಕ್ಷಿಸಿಕೊಳ್ಳುವುದಕ್ಕಾಗಿಯೂ, ಪರದೇಶೀಯ ಪ್ರಭುತ್ವದವರಿಂದ ಧಾರ್ಮಿಕ ಕಾರಣದ ವೇಷದ ಈ ಜನಸಂಗ್ರಹಣ ಕಾರ್ಯವು ಅನಾದಿಯಾಗಿ ನಡೆದುಬರುತ್ತಿದೆ. 'ಗತಾನುಗತಿಕೋಲೋಕಃ-ನಲೋಕಃ ಪಾರಮಾರ್ಥಿಕಃ' ಆದರೆ, ಕಾಮಿನೀ ಕಾಂಚನಾದಿ ಐಹಿಕ ಲಾಭಾಪೇಕ್ಷೆಯಿಂದಲಲ್ಲದೆ, ಕೇವಲ ದೈವಿಕ ಭಾವನೆಗಾಗಿಯೇ ಪರಮತವನ್ನಾಶ್ರಯಿಸಿ ತನ್ಮೂಲಕ ಪರಲೋಕಸಿದ್ಧಿಯನ್ನೂ ಪರಮಾತ್ಮ-ಪ್ರಾಪ್ತಿಯನ್ನೂ ಗಳಿಸಿಕೊಂಡಿದ್ದರೆ, ಅಂತಹ ಜೀವಿಗಳು ಪರಮಧನ್ಯರೇ ಸರಿ!

ಈ ಮೇಲೆ ಹೇಳಿದ ವೃತ್ತಾಂತವನ್ನು ಕುರಿತು ಸ್ವಲ್ಪ ದೀರ್ಘವಾಗಿ ಯೋಚಿಸಿದರೆ, ಇಂದು ಭಾರತದೇಶದಲ್ಲಿ ವಾಸಿಸುತ್ತಿರುವ ಮಹಮ್ಮದೀಯರಲ್ಲಿ, ಶತಾಂಶ-ಸಹಸ್ರಾಂಶದಷ್ಟು ಜನವಾದರೂ ಅರಬ್ಬೀ ತುರ್ಕೀ ದೇಶಗಳಿಂದಲೇ ನೇರವಾಗಿ ಹೊರಟುಬಂದು ಇಲ್ಲಿ ನೆಲೆಗೊಂಡವರಲ್ಲ-ಅವರಲ್ಲಿ ಬಹು-ಬಹು ಸಂಖ್ಯೆಯವರು, ವಿವಿಧಕಾಲ-ದೇಶಗಳಲ್ಲಿ ಮಹಮ್ಮದೀಯ

ಮತವನ್ನವಲಂಬಿಸಿದ ಈ ದೇಶೀಯರೇ ಎಂಬುದರ ನಿಶ್ಚಯಾಂಶವು ಗೋಚರಿಸವಿರದು. ಆದರೂ ಈ ಮಹದ್ವೃಕ್ಷಕ್ಕೆ ಬೀಜವು ಆಮದಾಗಿ ಬಂದುದು ಮಾತ್ರ ಆ ಪ್ರಾಂತಗಳಿಂದಲೇ ಎಂಬುದಕ್ಕೆ ಅಡ್ಡಿಯಿಲ್ಲ. ಭಗವದಿಚ್ಛೆಗೆ ಅಧೀನವಾಗಿ ಊಸರಕ್ಷೇತ್ರದಲ್ಲಿ ಬಿದ್ದ ಬೀಜವಾದರೂ ಮೊಳೆತು ಅಭಿವೃದ್ಧಿಯಾಗಬಹುದಾಗಿರುವಲ್ಲಿ, ಮಹಾಫಲವಂತವಾದ ಈ ಭಾರತಭೂಮಿಯಲ್ಲಿ ಕಾಲಕರ್ಮಸಂಯೋಗದಿಂದ ಬಿದ್ದ ಯಾವ ಬೀಜ ತಾನೇ ಅಭಿವೃದ್ಧಿಯಾಗಲಾರದು ! ಅಂತೇ ಪರದೇಶದಿಂದ ಆಮದಾಗುವ ಯಾವುದೊಂದು ಬೀಜವೂ ಇಲ್ಲಿ ಬಿದ್ದೊಡನೆಯೇ ಬಹು ಹುಲುಸಾಗಿ ಬೆಳೆಯತೊಡಗುತ್ತದೆ. ಅದಕ್ಕೆ ಇಲ್ಲಿಯ ಭೂಗುಣ-ವಾತಾವರಣಗಳೇ ಕಾರಣಗಳಿರಬಹುದು !

ಪ್ರಪಂಚದಲ್ಲಿ ಸಾಮಾನ್ಯನಾಗಿದ್ದ ಒಬ್ಬನು ಮಹತ್ಪದವಿಗೇರಿದನೆಂದರೆ, ಆಗ ಅವನ ಪೂರ್ವವೃತ್ತಾಂತವನ್ನೆಲ್ಲ ಶೋಧಿಸಿನೋಡಿ, ಆತನು ಒಂದಾನೊಂದು ಮಹದ್ವಂಶಸಂಭೂತನೆಂದು ಸ್ಥಾಪಿಸುವ ಪ್ರಯತ್ನ ನಡೆವುದು ಪದ್ಧತಿ. ನಮ್ಮ ಕಥಾನಾಯಕನು ಬಾಲ್ಯದಲ್ಲಿ ವಿಧಿಹತನಾಗಿ, ಕಷ್ಟದುಃಖಗಳ ಪಾಲಾಗಿದ್ದಾಗ, ಅವನನ್ನು ಯಾವ ಗಿಡದ ತೊಪ್ಪಲೆಂದು ವಿಚಾರಿಸಿದವರಿಲ್ಲ ! ಆದರೆ, ಆತನಿಗೆ ಲಕ್ಷ್ಮೀಕಟಾಕ್ಷ ದೊರೆತು, ಆತನಲ್ಲಡಗಿದ್ದ ಧೈರ್ಯಸಾಹಸಾದಿಗಳು ಪ್ರಕಾಶಿತವಾಗಿ, ಆತನು ಒಂದು ಸಂಸ್ಥಾನದ ಸಿಂಹಪೀಠವನ್ನೇ ಆಕ್ರಮಿಸಲು ಶಕ್ತನಾದಾಗ, ಆತನ ಪಿತೃ ಪಿತಾಮಹ ಪ್ರಪಿತಾಮಹಾದಿ ಪರಿಚಯಕ್ಕೆ ಅನ್ವೇಷಣವು ನಡೆಯಿತು. ಹಾಗೆ ನಡೆದಾಗ್ಗೆ ಗೊತ್ತುಹಚ್ಚಿದ ಚರಿತ್ರೆಯಿಂದ ಆತನ ಪ್ರಪಿತಾಮಹನು, ನಾವು ಮೇಲೆ ಹೇಳಿದಂತೆ ಮತಪ್ರಚಾರಣೆಯ ಅಭೀಪ್ಸೆಯುಳ್ಳವನಾಗಿದ್ದು, ಅರಬ್ಬೀಸ್ಥಾನದಿಂದ ಬಂದು ಈ ದೇಶದಲ್ಲಿ ನೆಲೆಗೊಂಡಿದ್ದ-ಅಂತಹ ಒಂದು ಬೀಜಸ್ವರೂಪಿಯಾಗಿದ್ದನೆಂದು-ಗೋಚರಿಸುತ್ತದೆ. ಆತನಿಗೆ ಮಹಮ್ಮದ್ ಫಿರೋಜೆ ಎಂದು ಹೆಸರು. ಆತನಿಂದ ಈಚೆಗೆ ಇವರ ವಂಶವೃತ್ತಾಂತವು ಕ್ರಮವಾಗಿ ತಿಳಿಯಲು ಅವಕಾಶವುಂಟಾಯಿತು.

ಫಿರೋಜೆಯು ಮತಸ್ಥಾಪಕನಾದ ಮಹಮದ್ ಪೈಗಂಬರನ ವಂಶಾವಳಿಗೆ ಸೇರಿದ ಗೌರವಕ್ಕೆ ಪಾತ್ರನಾಗಿದ್ದನು. ಅರಬ್ಬೀಸ್ಥಾನದಲ್ಲಿ, ಖುರೈಷಿ ಪಂಗಡವು ಸುಪ್ರಸಿದ್ಧ ಗುರುಪಂಗಡವೆಂದು ಹೆಸರಾದುದು. ಮಹಮ್ಮದ್

ಭಿಲೋಲೆಯು ಈ ಸಂಗಡದಲ್ಲೇ ಜನ್ಮವೆತ್ತಿ ಬಾಲ್ಯದಿಂದಲೂ ಮತಗ್ರಂಥಗಳ ಪಠನಪಾಠನಾದಿ ಕ್ರಿಯೆಗಳಲ್ಲೇ ಕಾಲ ಕಳೆಯುತ್ತಾ, ಕಾರಣಾಂತರದಿಂದ ಸ್ವದೇಶವನ್ನು ಬಿಟ್ಟು, ಪಂಜಾಬ್ ಪ್ರಾಂತಕ್ಕೆ ಬಂದು, ಅಜ್ಮೀರನಲ್ಲಿ ಕೆಲಕಾಲ ವಾಸಿಸಿದ್ದನು. ತರುವಾಯ ಹದಿನೇಳನೆಯ ಶತಮಾನದ ಪ್ರಾರಂಭಕಾಲದಲ್ಲಿ, ಅಲ್ಲಿಂದ ಹೊರಟು ಷೇಕ್ ಮಹಮ್ಮದ್ ವಾಲಿ, ಷೇಕ್ ಮಹಮ್ಮದ್ ಅಲಿ ಎಂಬ ತನ್ನಿಬ್ಬರು ಮಕ್ಕಳೊಂದಿಗೆ ದಕ್ಷಿಣ ಹಿಂದೂಸ್ಥಾನದ ಕಡೆ ಪ್ರಯಾಣ ಹೊರಟು, ಹೈದರಾಬಾದ್ ಮತ್ತು ಗುಲ್ಬರ್ಗಾ ಪಟ್ಟಣಗಳ ಮಧ್ಯದಲ್ಲಿರುವ ಖೋಹಿರ್ ಎಂಬೊಂದು ಊರಿನಲ್ಲಿ ನೆಲೆಗೊಂಡನು. ಪೈಗಂಬರನ ವಂಶೀಕನೂ, ಸ್ವತಃ ಅರಬ್ಬೀ ದೇಶೀಯನೂ ಆದ ಆತನು, ಸುಪ್ರಸಿದ್ಧ ಖಾಜೀ ಎಂಬದಾಗಿ ಆ ಪ್ರಾಂತದಲ್ಲೆಲ್ಲಾ ಬಹು ಗೌರವಕ್ಕೆ ಪಾತ್ರನಾಗಿದ್ದನು. ಆತನ ಇಬ್ಬರು ಮಕ್ಕಳಿಗೂ ಮದುವೆಯಾಗಿ ಕಾಲಕ್ರಮದಲ್ಲಿ ಸಂಸಾರವು ವೃದ್ಧಿಯಾಯಿತು. ಜೀವನೋಪಾಯಕ್ಕಾಗಿ ಹೊರಕ್ಕೆ ಹೊರಡಬೇಕಾದುದು ಅವಶ್ಯಕವೆನ್ನಿಸಿತು. ಒಡನೆ ಆ ಇಬ್ಬರು ಅಣ್ಣತಮ್ಮಂದಿರೂ, ಸುಮಾರು ೧೬೧೧ನೆಯ ಸಂವತ್ಸರದ ವೇಳೆಗೆ, ಖೋಹಿರನ್ನು ಬಿಟ್ಟು ಮೈಸೂರು ಸಂಸ್ಥಾನದಲ್ಲಿ ಬಹು ಪ್ರಸಿದ್ಧಸ್ಥಳವೆನ್ನಿಸಿದ್ದ ಶೀರ್ಯಕ್ಕೆ ಬಂದರು ಆಗ ಶೀರ್ಯವು ೫೦,೦೦೦ ಮನೆಗಳಿಂದ ಕೂಡಿ, ಬಹು ಜನಭರಿತವಾಗಿ ಪ್ರಸಿದ್ಧ ನಗರವಾಗಿತ್ತು. ಅಲ್ಲಿ ದಿಲಾವರ್‌ಖಾನನೆಂಬುವನು ಫೌಜುದಾರನಾಗಿದ್ದನು. ಆತನು ಈ ಇಬ್ಬರು ಸೋದರರ ತೇಜಸ್ವಿತೆ, ದಕ್ಷತೆಗಳನ್ನು ನೋಡಿ ಅವರಿಗೆ ತೆರಿಗೆ ವಸೂಲಿಯ ಉದ್ಯೋಗವನ್ನು ಕೊಡಿಸಿದನು. ಅಲ್ಲಿ ಕೆಲವು ದಿನಗಳಿದ್ದು ಕೆಲಸ ಮಾಡಿದ ತರುವಾಯ, ಅವರು ಸರಕಾರದ ಉದ್ಯೋಗ ನಿಮಿತ್ತ ಕೋಲಾರಕ್ಕೆ ಹೋಗಬೇಕಾಯಿತು. ಮಹಮ್ಮದ್ ಅಲಿಯು ತನ್ನ ಕೆಲಸದಲ್ಲಿ ಬಹು ಸಮರ್ಥತೆಯನ್ನು ತೋರಿಸಿದುದರಿಂದ ಫೌಜುದಾರನಾದ ದಿಲಾವರ್‌ಖಾನನು ಆತನ ವಿಷಯದಲ್ಲಿ ಸುಪ್ರೀತನಾಗಿ, ದಂಡಿನಲ್ಲಿ ೧೫೦ ಜನ ಸೈನಿಕರ ಮೇಲೆ ಅಧಿಕಾರವಿರುವ ಒಂದು ಗೌರವದ ಉದ್ಯೋಗವನ್ನು ಆವನಿಗೆ ಕೊಟ್ಟನು. ಹೀಗೆ ದಿನದಿನಕ್ಕೆ ಐಶ್ವರ್ಯ ಅಧಿಕಾರ ಪ್ರತಿಷ್ಠೆಗಳೂ ಗೌರವತೇಜಸ್ವಿತೆಗಳೂ ಹೆಚ್ಚುತ್ತಿರಲು, ಕೋಲಾರದ ನಿವಾಸಿಯಾದ ಸೈಯದ್ ಫಾರಸಾ ಮುನ್ಷಿ ಎಂಬೊಬ್ಬ ಮಹ

ಮ್ಮದೀಯ ದೊಡ್ಡಮನುಷ್ಯನು ತನ್ನ ಮಗಳನ್ನು ಆತನಿಗೆ ಕೊಟ್ಟು ಮದುವೆ ಮಾಡಿದನು. ಮುಂದೆ ಆಲಿ ಮಹಮ್ಮದನಿಗೆ ಕೋಲಾರವೇ ವಾಸಸ್ಥಳವಾಯಿತು. ಆತನಿಗೆ ಇಬ್ಬರು ಮಕ್ಕಳು. ಒಂದು ಗಂಡು, ಒಂದು ಹೆಣ್ಣು. ಮಗನ ಹೆಸರು ಫತ್ತೆ ಮಹಮ್ಮದ್ ಆಲಿ. ಈತನೇ ನಮ್ಮ ಕಥಾನಾಯಕನ ತಂದೆ!

ಮಕ್ಕಳು ಚಿಕ್ಕವಯಸ್ಸಿನಲ್ಲಿದ್ದಾಗಲೇ ಷೇಕ್ಆಲಿ ಗುಲಾಂದೋಸ್ತ್ ಮಹಮ್ಮದನು (ಷೇಕ್ ಮಹಮ್ಮದ್ ಆಲಿಯ ಪೂರ್ಣವಾದ ಹೆಸರು) ತೀರಿಹೋದನು. ತರುವಾಯ ಆತನ ತಮ್ಮನಾದ ಮಹಮ್ಮದ್ ವಾಲಿಯು ಅಣ್ಣನ ಆಸ್ತಿಯನ್ನೆಲ್ಲ ತಾನೇ ಸ್ವಾಧೀನಪಡಿಸಿಕೊಂಡು, ಆತನ ಹೆಂಡತಿಯನ್ನೂ ಮಗನನ್ನೂ ಹೊರಕ್ಕೆ ಹೊರಡಿಸಿದನೆಂದು ಹೇಳುವ * ಒಂದು ಚಾರಿತ್ರಿಕ ಪಾಠಾಂತರವೂ ಉಂಟು. ಇದನ್ನನುಸರಿಸಿ ಮುಂದೆ ಆ ತಾಯಿ ಮಕ್ಕಳು ಬಹು ಕಷ್ಟಕ್ಕೆ ಸಿಕ್ಕಿ ದುಃಖಪಟ್ಟರೆಂದೂ, ಫತ್ತೇ ಮಹಮ್ಮದನು ಹೇಗೆಯೋ ಬೆಳೆದು ದೊಡ್ಡವನಾದಮೇಲೆ ಅವರ ದುರವಸ್ಥೆಯನ್ನು ನೋಡಲಾರದೆ ಕನಿಕರಗೊಂಡ ಒಬ್ಬ ನಾಯಕನ ದಯೆಯಿಂದ, ಸೈನ್ಯದಲ್ಲಿ ಒಂದು ಉದ್ಯೋಗವನ್ನು ಹೊಂದಿ ಕ್ರಮವಾಗಿ ವೃದ್ಧಿಗೆ ಬಂದನೆಂದೂ ತಿಳಿಯಬರುತ್ತದೆ. ಆದರೆ 'ಹೈದರ್‌ನಾಮ' ಎಂಬ ಗ್ರಂಥದಲ್ಲಿ, ಮಹಮ್ಮದ್ ಆಲಿಯ ಮರಣಾನಂತರ ಫತ್ತೇ ಮಹಮ್ಮದನು ತನ್ನ ಮಾತಾಮಹನಾದ ಘಾರಸಾ ಮುಲ್ಲಾಯಿಂದಲೇ ಪೋಷಿತನಾಗಿ, ಮುಂದೆ ವಿದ್ಯಾಬುದ್ಧಿಗಳನ್ನು ಕಲಿತು, ಪ್ರಬುದ್ಧನಾದೊಡನೆಯೇ, ತನ್ನ ತಂದೆಯ ಪರಿಚಯಸ್ಥರಾದ ಸರದಾರರ ಸಹಾಯದಿಂದ ಶೀರ್ಯದ ಸೈನ್ಯದಲ್ಲಿ ಒಂದು ಉದ್ಯೋಗವನ್ನು ಸಂಪಾದಿಸಿದನೆಂದೂ ಹೇಳಲ್ಪಟ್ಟಿದೆ. ಅವನ ಶಕ್ತಿ ಸಾಮರ್ಥ್ಯಗಳು ದಿನದಿನಕ್ಕೆ ಹೆಚ್ಚುಹೆಚ್ಚಾಗಿ ಪ್ರಕಟವಾಗುತ್ತಾ ಬಂದು, ಆತನು ಗಂಜೀಕೋಟೆಯೆಂಬೊಂದು ದುರ್ಗವನ್ನು ಸ್ವಾಧೀನಪಡಿಸಿಕೊಂಡು, ಪ್ರಭುತ್ವದವರ ಅಭಿಮಾನಕ್ಕೆ ಪಾತ್ರನಾಗಲು, ೧೫೦೦ ಮಂದಿ ಸೈನಿಕರಮೇಲೆ ಅಧಿಕಾರ

* ಶ್ರೀಮಾನ್ ಎಂ. ಶಾಮರಾವ್ ಎಂ.ಎ, ಯವರಿಂದ ವಿರಚಿತವಾದ 'ಮೈಸೂರು ಸಂಸ್ಥಾನದ ಚರಿತ್ರೆ' ಪಾಠದಂತೆ.

ವುಳ್ಳ ನಾಯಕನೆಂಬ ಗೌರವದ ಉದ್ಯೋಗವು ಲಭಿಸಿತು. ಆತನಿಗೆ ಆವರೆಗೇ ಮೊದಲನೆಯ ಹೆಂಡತಿಯಲ್ಲಿ ಮೂವರು ಮಕ್ಕಳಾಗಿ ಆಕೆಯು ಕಾಲಾಧೀನಳಾಗಿಹೋಗಿದ್ದುದರಿಂದ, ಈಗ ಆತನು ಪುನಃ ಶೀರ್ಯದಲ್ಲಿ ಜಮೀನ್ದಾರನಾಗಿದ್ದ ಮೀರ್ ಆಲಿ ಅಕ್ಬರ್ ಎಂಬಾತನ ಮಗಳಾದ ಮಜೀದಾ ಬೇಗಂ ಎಂಬಾಕೆಯನ್ನು ಮದುವೆಯಾದನು. ಇಷ್ಟರಲ್ಲಿ ದೈವಬಲೀಯವೊದಗಿ, ದಿನದಿನಕ್ಕೆ ಅಧಿಕಾರಗೌರವಗಳಲ್ಲಿ ಏರುತ್ತಾ ಬಂದು, ಆತನು ಕೋಲಾರದ ಫೌಜುದಾರಿ ಉದ್ಯೋಗವನ್ನೂ, ಬೂದೀಕೋಟೆಯ ಜಹಗೀರಿಯನ್ನೂ ಪಡೆದು ಬಹು ಗಣ್ಯಸ್ಥಿತಿಗೇರಿದನು. ಆತನಿಗೆ ಎರಡನೆಯ ಹೆಂಡತಿಯಾದ ಮಜೀದಾ ಬೇಗಮಿನ ಉದರದಲ್ಲಿ ಇಬ್ಬರು ಮಕ್ಕಳು ಹುಟ್ಟಿದರು. ಇವರಲ್ಲಿ ಆತನ ಜಹಗೀರಾದ ಬೂದೀಕೋಟೆಯಲ್ಲಿ ೧೭೨೨ರಲ್ಲಿ ಜನಿಸಿದ ಆತನ ಎರಡನೆಯ ಮಗನೇ ನಮ್ಮ ಚರಿತ್ರನಾಯಕನಾದ ಹೈದರ್ ಅಲಿ. 'ಹೈದರ್' ಎಂಬ ಪದಕ್ಕೆ ಸಿಂಹವೆಂದು ಅರ್ಥವಂತೆ !



## ಅಧ್ಯಾಯ ೨ “ಸ್ವಾಮಿಕಾರ್ಯ-ಸ್ವಕಾರ್ಯ”

ಫತ್ತೇ ಮಹಮ್ಮದನು ಶೀರ್ಯದಲ್ಲಿ ಸೈನ್ಯಾಧಿಪತಿಯಾಗಿ ಕೆಲವುಕಾಲ ಸುಖವಾಗಿದ್ದನು. ಆದರೆ ಮುಂದೆ ಅಲ್ಲಿಯ ಫೌಜುದಾರನಾದ ದರ್ಗಾಕುಲೀಖಾನನ ಅವಿವೇಕ ಆಡಳಿತದಿಂದ ಅಧಿಕಾರದ ಬಿಗಿ ತಪ್ಪಿ, ಸರ್ಕಾರದ ಕೀಳು ನೌಕರರು ಮನಸ್ವೀ ಕಾರ್ಯಭಾರ ನಡೆಯಿಸಲು ಪ್ರಾರಂಭಿಸಿದರು. ಇದರಿಂದ ಸಕಾಲಕ್ಕೆ ರೈತರಿಂದ ಕಂದಾಯವು ವಸೂಲುಬಾರದೆ ದಂಡಿನ ನೌಕರರಿಗೆ ಸಂಬಳ ದೊರೆಯಲು ಅನಾನುಕೂಲವಾಯಿತು. ಸೈನ್ಯಾಧಿಕಾರಿಯಾದ ಫತ್ತೇ ಮಹಮ್ಮದನನ್ನು, ಸಂಬಳವನ್ನು ಸಲ್ಲಿಸಿರೆಂದು ಸೈನಿಕರು ಪೀಡಿಸಲಾರಂಭಿಸಿದರು. ಈ ತೊಂದರೆಗಾಗಿ ಬೇಸತ್ತು ಆತನು, ಇಲ್ಲಿಯ ಉದ್ಯೋಗವನ್ನು ಬಿಟ್ಟು ತನ್ನ ಆಶ್ರಿತರಾದ ಕೆಲಮಂದಿ ಸೈನಿಕರನ್ನು ಕರೆದುಕೊಂಡು ಮಲೆಯಾಳ ಪ್ರಾಂತಕ್ಕೆ ನಡೆದು ಅಲ್ಲಿಯ ರಾಜನ ಸೈನ್ಯದಲ್ಲಿ ಅಧಿ

ಕಾರಿಯಾಗಿ ಸೇರಿಕೊಂಡನು. ಧೀರನೂ ಸ್ವಜನಾನುರಾಗಿಯೂ ಆದ ತಮ್ಮ ಸೈನ್ಯಾಧಿಕಾರಿಗೆ ಮಲೆಯಾಳ ಪ್ರಾಂತದಲ್ಲಿ ಸೈನ್ಯಾಧಿಪತ್ಯವು ದೊರೆಯಿತೆಂಬ ವಾರ್ತೆಯು ತಿಳಿದೊಡನೆಯೇ, ಆತನ ಸೇವೆಯನ್ನು ಮೆಚ್ಚಿಕೊಂಡಿದ್ದ ಹಲವು ಮಂದಿ ಆಶ್ರಿತರು, ನಾನಾ ಪ್ರಾಂತಗಳಿಂದಲೂ ಬಂದು, ಆತನ ಬಳಿ ಸೇರಿದರು. ಆತನು ಅವರೆಲ್ಲರಿಗೂ ಉದ್ಯೋಗ ಕೊಟ್ಟು ಕೆಲ ಕಾಲ ಕಾಪಾಡಿದನು. ಕಾಲಕ್ರಮದಲ್ಲಿ ಆತನ ಈ ಸ್ವಂತಸೇನೆಯೇ ಸಾವಿರಕ್ಕೆ ಏರಿತು. ಒಡನೆ ಆತನು ಅವರನ್ನು ಕರೆದುಕೊಂಡು, ಸ್ವದೇಶವಾದ ಮೈಸೂರಿಗೆ ಹಿಂದಿರುಗಿದನು. ಆಗ್ಗೆ ಶೀರ್ಯದಲ್ಲಿ ದರ್ಗಾ ಕುಲೀಖಾನನು ಮೃತನಾಗಿ ಆತನ ಮಗನಾದ ಅಬ್ದುಲ್ ರಸೂಲ್‌ಖಾನನೆಂಬಾತನು ಸುಬೇದಾರನಾಗಿದ್ದನು. ಆತನು ಫತ್ತೇ ಮುಹಮ್ಮದನನ್ನು ಆದರಿಸಿ, ತನ್ನ ಬಳಿಯಲ್ಲೇ ಇರುವಂತೆ ಹೇಳಿ ಆತನ ಸೈನ್ಯವನ್ನು ಸರ್ಕಾರಕ್ಕೆ ಸೇರಿಸಿಕೊಂಡು, ಸೈನಿಕರಿಗೆಲ್ಲಾ ಸಂಬಳವು ಸರ್ಕಾರದಿಂದಲೇ ದೊರೆವಂತೆ ಏರ್ಪಡಿಸಿದನು. ೧೭೩೯ನೆಯ ಸಂವತ್ಸರದ ಸುಮಾರಿನಲ್ಲಿ, ಆರ್ಕಾಟಿನಲ್ಲಿ ನವಾಬನಾಗಿದ್ದ ಸಾದತ್ ಉಲ್ಲಾ ಖಾನ್ ಎಂಬಾತನ ಕೈಕೆಳಗೆ ಅಧಿಕಾರಿಯಾಗಿದ್ದ ಚಿತ್ತೂರಿನ ಫೌಜುದಾರ ಟಾಹಿರ್‌ಖಾನನು ಶೀರ್ಯದ ಸುಬೇದಾರಿಯನ್ನು ಅಪೇಕ್ಷಿಸಿ ದಂಡೆತ್ತಿದನು. ನವಾಬನ ಸೈನ್ಯದೊಂದಿಗೆ ನಡೆದ ಘೋರಸಂಗ್ರಾಮದಲ್ಲಿ ಫತ್ತೇ ಮುಹಮ್ಮದನೂ ಆತನ ಮೊದಲನೆಯ ಹೆಂಡತಿಯ ಹಿರೀಮಗನೂ ಮೃತರಾದರು. ಮೃತರ ಕಳೇಬರಗಳು ಕೋಲಾರಕ್ಕೆ ಸಾಗಿಸಲ್ಪಟ್ಟು ಅಲ್ಲಿ ಮತಪದ್ಧತಿಯನ್ನು ಅನುಸರಿಸಿ ಸಂಸ್ಕರಿಸಲ್ಪಟ್ಟುವು.

ಚಿತ್ತೂರು ಫೌಜುದಾರನೊಂದಿಗೆ ನಡೆದ ಯುದ್ಧದಲ್ಲಿ, ಸುಬೇದಾರ ಅಬ್ದುಲ್ ರಸೂಲ್‌ಖಾನನೂ ಮೃತನಾದನು. ತರುವಾಯ ಆತನ ಮಗನಾದ ಅಬ್ಬಾಸ್ ಕುಲೀಖಾನನು ಶೀರ್ಯದ ಸುಬೇದಾರಿ ಮುಂತಾದ ಸಂಬಂಧಗಳನ್ನೆಲ್ಲಾ ಪೂರ್ತಿಯಾಗಿ ತ್ಯಜಿಸಿ, ಪಿತ್ರಾರ್ಜಿತವಾದ ಸಮಸ್ತ ಸಂಪತ್ತನ್ನೂ ಸಂಗ್ರಹಿಸಿಕೊಂಡು, ತನ್ನ ಮನೆತನದ ಜಹಗೀರಾದ ದೊಡ್ಡಬಳ್ಳಾಪುರಕ್ಕೆ ಪ್ರಯಾಣಮಾಡಿ, ಅಲ್ಲೇ ನೆಲೆಗೊಂಡನು. ಫತ್ತೇ ಮುಹಮ್ಮದನು ಅಬ್ಬಾಸನ ತಂದೆಗೆ ಸ್ವಲ್ಪ ಹಣವನ್ನು ಕೊಡಬೇಕಾಗಿದ್ದಿತಂತೆ ! ಆ ಸಾಲದ ಹಣಕ್ಕಾಗಿ ಆತನು ಈಗ ಮಜೀದಾ ಬೇಗಮನ್ನೂ ಆಕೆಯ ಇಬ್ಬರು ಮಕ್ಕ

ಳನ್ನೂ ತಗಾದೆಮಾಡಿ ತೊಂದರೆಪಡಿಸಲಾರಂಭಿಸಿದನು. ಹೈದರನಿಗೆ ಆಗ ಕೇವಲ ೭ ವರ್ಷವೂ, ಆತನ ಅಣ್ಣ ಷಹಬ್ಬಾಜಾ ಖಾನನಿಗೆ ೯ ವರ್ಷವೂ ವಯಸ್ಸು. ಬೇಗಮಳೋ ನಿಸ್ಸಹಾಯಕಳಾದ ಸ್ತ್ರೀಮಾತ್ರಳು. ಕುಲೀ ಖಾನನು ಅವರಿಂದ ಮೂರುಸಾವಿರ ವರಹಗಳು ಬರಬೇಕೆಂದು ತಗಾದೆ ಹಾಕಿದನು. ಘೋಷಾದಲ್ಲಿದ್ದ ಆ ಮರ್ಯಾದಸ್ಥ ಹೆಂಗಸಿನ ಎದುರಿನಲ್ಲಿ ನಿಂತು ಬಲವಂತಪಡಿಸಲು ಸಾಧ್ಯವಿರಲಿಲ್ಲವಾದರೂ ಅಬ್ಬಾಸನು ಆಕೆಯ ಆ ಇಬ್ಬರು ಮಕ್ಕಳನ್ನು ವಿವಿಧಹಿಂಸೆಗಳಿಗೆ ಗುರಿಪಡಿಸಿದನು. ಅವರನ್ನು ನಗಾರಿಯ ಕೆಳಗೆ ಕೂರಿಸಿ-ಮೇಲೆ ಬಾರಿಸಿಸಿ ಅವರನ್ನು ವಿಚಿತ್ರಹಿಂಸೆಗೆ ಒಳ ಪಡಿಸುವನು. ಆ ಚಿಕ್ಕವರನ್ನು ಎಷ್ಟೋ ದಿನಗಳು ಕಲ್ಲುಹೊರಿಸಿ ಬಿಸಿಲಲ್ಲಿ ನಿಲ್ಲಿಸುತ್ತಿದ್ದನು. ದನಕಾಯುವುದೇ ಮುಂತಾದ ನೀಚವೃತ್ತಿಗಳನ್ನು ಮಾ ಡುವಂತೆ ಅವರಿಗೆ ನಿಯಮಿಸುವನು. ಹೀಗೆ ಬಹು ಹಿಂಸೆಗೆ ಗುರಿಯಾದ ಆ ತನ್ನ ಮಕ್ಕಳನ್ನು ಕಂಡು ಅವರ ತಾಯಿಯು ಬಹು ಮರುಗಿ, ಹೇಗಾ ದರೂ ಆ ಋಣಬಾಧೆಯಿಂದ ಮುಕ್ತಳಾಗಬೇಕೆಂದು ನಿಶ್ಚಯಿಸಿದಳು. ಆಗ ಬೆಂಗಳೂರಿನಲ್ಲಿ ಇಬ್ರಾಹಿಂಖಾನನೆಂಬ ಆಕೆಯ ತಮ್ಮನೊಬ್ಬನು ವಾಸ ವಾಗಿದ್ದನು. ಮಜೀದಾ ಬೇಗಮಳು ಆತನ ಮೂಲಕ ಮೈಸೂರು ದರ್ಬಾ ರಿನಿಂದ ಹತ್ತುಸಾವಿರ ವರಹಗಳ ಹಣವನ್ನು ಸಾಲವಾಗಿ ಪಡೆದು, ಅಬ್ಬಾಸ್ ಕುಲೀಖಾನನಿಗೂ, ಶೀರ್ಯದ ವರ್ತಕರಿಗೂ ಫತ್ತೇ ಮಹಮ್ಮದನು ಕೊಡಬೇ ಕಾಗಿದ್ದ ಸಾಲವನ್ನು ತೀರಿಸಿ, ಮುಂದೆ ಮಕ್ಕಳು ದೊಡ್ಡವರಾಗುವವರೆಗೂ ತಮ್ಮನ ಪೋಷಣೆಯಲ್ಲಿ ಬೆಂಗಳೂರಿನಲ್ಲೇ ವಾಸವಾಗಿದ್ದಳು.

ಷಹಬ್ಬಾಜಾಖಾನನು ಪ್ರಾಯಸಮರ್ಥನಾಗಿ, ಮೈಸೂರು ಸೈನ್ಯದಲ್ಲಿ ಒಂದು ಉದ್ಯೋಗವನ್ನು ಸಂಪಾದಿಸಿಕೊಂಡನು. ಮುಂದೆ ಸ್ವಲ್ಪ ದಿನಗ ಳಲ್ಲೇ ತನ್ನ ಶಕ್ತಿಸಾಮರ್ಥ್ಯದಿಂದ ೨೦೦ ಕುದುರೆಗಳ ಮತ್ತು ಒಂದು ಸಾವಿರ ಕಾಲಾಳು ಸೈನಿಕರಮೇಲಿನ ಅಧಿಕಾರವನ್ನು ಹೊಂದಿದನು. ಅದು ವರೆಗೂ ಹೈದರಲ್ಲಿಯು ಯಾವ ಉದ್ಯೋಗಕ್ಕೂ ಸೇರದೆ, ನಯನೀತಿಗಳನ್ನ ರಿಯದ ತುಂಟಯುವಕರೊಂದಿಗೆ ಸೇರಿ, ಆಟಬೇಟೆಗಳಲ್ಲೂ, ಕುದುರೆಸವಾರಿ ಮುಂತಾದ ವೀರವಿದ್ಯೆಗಳಲ್ಲೂ ಕಾಲಹರಣ ಮಾಡಿಕೊಂಡಿದ್ದನು. ಹೀಗೆ ಇರುತ್ತಿರಲು ೧೭೪೬ನೆಯ ಸಂವತ್ಸರದಲ್ಲಿ ಮೈಸೂರು ದರ್ಬಾರಿನವರು

ದೇವನಹಳ್ಳಿಗೆ ಮುತ್ತಿಗೆಹಾಕಿ ಅದನ್ನು ಸ್ವಾಧೀನಪಡಿಸಬೇಕೆಂದು ಇಚ್ಛೆ ಮಾಡಿದರು. ಸರ್ವಾಧಿಕಾರಿ ನಂಜರಾಜಯ್ಯನ ಮೇಲ್ವಿಚಾರಣೆಯಲ್ಲಿ ಸೈನ್ಯವು ಹೊರಟಿತು. ಮಹಬ್ಬೂಬಖಾನನು ತನ್ನ ದಂಡಿನೊಡನೆ ಹೊರಟು, ಕೋಟೆಗೆ ಮುತ್ತಿಗೆ ಹಾಕಿ, ಒಂಬತ್ತು ತಿಂಗಳಕಾಲ ಶತ್ರುದಳದೊಂದಿಗೆ ಯುದ್ಧಮಾಡಿದನು ಈ ಮುತ್ತಿಗೆಯಲ್ಲೇ ಹೈದರಲ್ಲಿಯೂ ಸೈನ್ಯದಲ್ಲ ಉದ್ಯೋಗಕ್ಕೆ ಸೇರಿ ಹೋರಾಡಿದನು. ಹೈದರಲ್ಲಿಯಲ್ಲಿ ಸ್ವಾಭಾವಿಕವಾಗಿ ನೆಲೆಸಿದ್ದ ಧೈರ್ಯಸಾಹಸಗಳೂ ದಕ್ಷತೆ ಪರಾಕ್ರಮಗಳೂ ಈ ಯುದ್ಧದಲ್ಲೇ ಚೆನ್ನಾಗಿ ಪ್ರಕಟವಾದುವು. ಇದುವರೆಗೆ ಪ್ರಕಟಗೊಳ್ಳಲು ಗೊತ್ತಾದ ಒಂದು ಮಾರ್ಗಕಾಣದೆ, ದುರ್ವೃತ್ತಿಗಳಲ್ಲಿ ಪ್ರವೇಶಗೊಳ್ಳುತ್ತಿದ್ದ ಧೈರ್ಯೋತ್ಸಾಹಾದಿಗಳು ಈಗ ಶತ್ರುಸೈನ್ಯದಮೇಲೆ ಪ್ರಯೋಗಿಸಲ್ಪಟ್ಟು ವಿಜಯ ಹೊಂದಲು, ಹೈದರಲ್ಲಿಯು ಸಕಲರ ಗಮನಕ್ಕೂ ಒಳವಂತಾದನು. ಸರ್ವಾಧಿಕಾರಿ ಕತ್ತಿ ನಂಜರಾಜಯ್ಯನು ಆತನನ್ನು ಮೆಚ್ಚಿಕೊಂಡು. ಸೈನ್ಯದಲ್ಲಿ ಒಂದು ತುಕಡಿಯನ್ನು ಆತನ ವಶಕ್ಕೆ ಕೊಟ್ಟು ಅದರ ಮೇಲಧಿಕಾರವನ್ನು ವಹಿಸಿದನು.

ಈ ತರುವಾಯ ದಿನದಿನಕ್ಕೆ ಅಭಿವೃದ್ಧಿಗೊಳ್ಳುತ್ತಾ ಸಾಗಿದ ಹೈದರಲ್ಲಿಯ ಚರಿತ್ರೆಯೊಂದಿಗೆ ಮುಂದರಿಸುವುದಕ್ಕೆ ಮುಂಚೆ, ಆಗ ಮೈಸೂರು ಸಂಸ್ಥಾನದ ಆಡಳಿತವು ಯಾವ ರೀತಿ ಸಾಗುತ್ತಿತ್ತು ಎಂಬುದನ್ನು ಹೇಳುವುದು ಆವಶ್ಯಕವಿದೆ. ಮೈಸೂರು ಸಂಸ್ಥಾನದಲ್ಲಿ ಈಗ ಆಳುವ ರಾಜಪೀಠವನ್ನು ಸ್ಥಾಪಿಸಿದ ಶ್ರೀ ಯದುರಾಯರು, ಬಹುಕಾಲ ಸುಖದಿಂದ ರಾಜ್ಯವಾಳಿ, ಕ್ರಿ. ಶ. ೧೪೨೨ನೆಯ ಸಂ||ದಲ್ಲಿ ದೈವಾಧೀನರಾದರು. ಇವರ ತರುವಾಯ ಕ್ರಮವಾಗಿ ಹಿರಿಯಬೆಟ್ಟದ ಚಾಮರಾಜ ಒಡೆಯರು, ತಿಮ್ಮರಾಜ ಒಡೆಯರು, ಅರುಬೆರಳು ಚಾಮರಾಜ ಒಡೆಯರು, ಬೆಟ್ಟದ ಚಾಮರಾಜ ಒಡೆಯರು, ತಿಮ್ಮರಾಜ ಒಡೆಯರು, ರಾಜ ಒಡೆಯರು, ಚಾಮರಾಜ ಒಡೆಯರು, ಇಮ್ಮಡಿ ರಾಜ ಒಡೆಯರು, ಚಿಕ್ಕ ದೇವರಾಜ ಒಡೆಯರು ಎಂಬ ಮಹಾಶಕ್ತರಾದ ರಾಜರು ಸಿಂಹಾಸನವನ್ನೇರಿ ಆಧಿಪತ್ಯ ಮಾಡಿದರು. ಇವರಲ್ಲಿ ಕೊನೆಯವರಾದ ಚಿಕ್ಕ ದೇವರಾಜ ಒಡೆಯರ ಕಾಲಕ್ಕೆ ದೇಶವು ಬಹುಮಟ್ಟಿಗೆ ವಿಸ್ತರಿಸಲ್ಪಟ್ಟಿತು. ರಾಜ್ಯಭಾರದಲ್ಲಿ ಹಲವು ನೂತನ ಏರ್ಪಾಟು

ಗಳನ್ನು ರೂಢಿಗೆ ತಂದು, ರಾಜರು ಪ್ರಜಾಪಾಲನೆಯಲ್ಲಿ ವಿಶೇಷ ದಕ್ಷತೆಯನ್ನು ತೋರ್ಪಡಿಸಿದರು. ಕಂದಾಯ ಕೌಳಿಗೆಗಳು ನಿಗದಿ ಮಾಡಲ್ಪಟ್ಟುವು. ರಾಜಾದಾಯವು ದಿನದಿನಕ್ಕೆ ಒಂದಕ್ಕೆ ಹತ್ತಾಗಿ ಹೆಚ್ಚಿತು. ರಾಜರು ಕಾವೇರಿ ನದಿಗೆ ಅಣೆಕಟ್ಟನ್ನು ಕಟ್ಟಿಸಿ, ಉಭಯಪಾರ್ಶ್ವಗಳಲ್ಲೂ ನಾಲೆಗಳನ್ನು ತೆಗೆಸಿ ವ್ಯವಸಾಯಕ್ಕೆ ವಿಶೇಷ ಅನುಕೂಲತೆಯನ್ನು ಕಲ್ಪಿಸಿದರು. ಸಿರೂಪದ ಚಾವಡಿ, ಅರುಕಟ್ಟಿನ ಚಾವಡಿಯೇ ಮುಂತಾದ ಹದಿನೆಂಟು ಬಗೆಯ ಚಾವಡಿಗಳ ವಿಚಾರಕ್ಕೆ ಒಳಪಟ್ಟು ಆಡಳಿತವು ಉತ್ತಮಸ್ಥಿತಿಯನ್ನೈದಿತು. ಅಲ್ಲದೆ ಧೊರೆಗಳು ಸ್ವತಃ ದಿನವೊಂದಕ್ಕೆ ಎರಡು ಸಹಸ್ರ ವರಹಗಳು ಅರಮನೆಯ ಖಾಸಾ ಬೊಕ್ಕಸಕ್ಕೆ ಜಮೆಯಾಗುವವರೆಗೂ ಭೋಜನ ಮಾಡುವುದಿಲ್ಲವೆಂಬ ಪ್ರತಿಜ್ಞೆಯನ್ನು ತೊಟ್ಟು, ವಿಶೇಷ ದ್ರವ್ಯ ಸಂಗ್ರಹಣ ಮಾಡಿ, 'ನವಕೋಟಿ ನಾರಾಯಣ' ಎಂಬ ಬಿರುದಿಗೆ ಪಾತ್ರರಾದರು. ದೈವಭಕ್ತರೂ, ರಣಪಂಡಿತರೂ, ರಾಜತಂತ್ರನಿಪುಣರೂ, ಪರೋಪಕಾರ ಧುರೀಣರೂ ಆದ ಈ ರಾಜವರೇಣ್ಯರು ತಮ್ಮ ವಂಶಕ್ಕೇ ಅತ್ಯಂತ ಕೀರ್ತಿಪ್ರದರಾಗಿ ರಾಜ್ಯವಾಳಿ, ಕ್ರಿ. ಶ. ೧೭೦೪ನೆಯ ಸಂ||ದಲ್ಲಿ ಕೀರ್ತಿಶೇಷರಾದರು. ಇವರ ತರುವಾಯ ಪಟ್ಟಕ್ಕೆ ಬಂದವರು, ಶತ್ರುನಿಗ್ರಹಣ ಕಾರ್ಯದಲ್ಲಿ ಅಸಮರ್ಥರೂ, ದರ್ಪವಿಹೀನರೂ, ಸುಖಾಭಿಲಾಷಿಗಳೂ ಆಗುತ್ತಾ ರಾಜ್ಯಾಧಿಕಾರವು ಕ್ರಮಕ್ರಮವಾಗಿ ಸರ್ವಾಧಿಕಾರಿಗಳ ಕೈಸೇರಲು ಅವಕಾಶವಾಯಿತು. ಚಿಕ್ಕದೇವರಾಜ ಒಡೆಯರ ತರುವಾಯ ಧೊರೆತನಕ್ಕೆ ಬಂದ ಅವರ ಮಕ್ಕಳು ಕಂಠೀರವ ಒಡೆಯರು ಮೂಕರಾಗಿದ್ದರು. ಇವರ ತರುವಾಯ ದೊಡ್ಡಕೃಷ್ಣರಾಜ ಒಡೆಯರಿಗೆ ಪಟ್ಟವಾಯಿತು. ಇವರು ಕೇವಲ ಆತ್ಮಸುಖಲೋಲುಪರಾಗಿದ್ದುದರಿಂದ ಆಡಳಿತವನ್ನು ದಳವಾಯಿ ದೇವರಾಜಯ್ಯನು ಆಕ್ರಮಿಸಿದನು. ಹೀಗೆ ನಾಮಮಾತ್ರರಾಜರಾಗಿದ್ದ ದೊಡ್ಡಕೃಷ್ಣರಾಜ ಒಡೆಯರು ೧೭೩೧ರಲ್ಲಿ ಕಾಲವಾದರು. ಇವರಿಗೆ ಸಂತಾನವಿರಲಿಲ್ಲವಾದುದರಿಂದ ಪುತ್ರಸ್ವೀಕಾರ ಮಾಡಿಕೊಳ್ಳಬೇಕೆಂಬ ಪ್ರಶ್ನೆ ಹುಟ್ಟಿತು. ಆಗಲೂ ದಳವಾಯಿ ದೇವರಾಜಯ್ಯನೂ ಅವನ ಜ್ಞಾತಿಯಾದ ನಂಜರಾಜಯ್ಯನೂ ಯೋಚಿಸಿ ಅಂಕನಹಳ್ಳಿಯ ಚಾಮರಾಜ ಅರಸಿನವರನ್ನು ದತ್ತುಮಾಡಿಸಿ, ಅವರಿಗೆ ಯಾವ ಸ್ವಾತಂತ್ರ್ಯವನ್ನೂ ಕೊಡದೆ ಸಮ

ಸ್ತ ಅಧಿಕಾರವನ್ನೂ ತಮ್ಮ ಸ್ವಾಧೀನದಲ್ಲೇ ಇಟ್ಟುಕೊಂಡಿದ್ದರು. ಇದು ದೊರೆಗಳಿಗೆ ಸಹನೆಯಾಗದೆ, ಅವರು ಉಪಾಯದಿಂದ ಇವರಿಬ್ಬರನ್ನೂ ಅಧಿಕಾರದಿಂದ ನಿವೃತ್ತಿಗೊಳಿಸಿ ಸ್ವತಂತ್ರವಾಗಿ ಆಡಳಿತ ಮಾಡಲು ಪ್ರಾರಂಭಿಸಿದರು. ಬಹುಕಾಲದಿಂದ ನಿರಂಕುಶಾಧಿಕಾರ ಮಾಡಿ ರುಚಿಕಂಡಿದ್ದ ಆ ಸರ್ವಾಧಿಕಾರಿಗಳಿಗೆ ದೊರೆಗಳು ಸ್ವತಂತ್ರಾಧಿಕಾರವನ್ನು ಸ್ವೀಕಾರಮಾಡಿದ್ದು ಕೋಪೋದ್ರೇಕವನ್ನುಂಟುಮಾಡದೆ ಇದ್ದೀತೆ? ಅವರು ಒಡನೆ ಪಿತೂರಿ ನಡೆಸಿ, ಅವರನ್ನು ಸೆರೆ ಹಿಡಿದು ಕಬ್ಬಾಳದುರ್ಗಕ್ಕೆ ಸಾಗಿಸಿ ಅಲ್ಲಿ ನಿರ್ಬಂಧದಲ್ಲಿರಿಸಿದರು. ಮುಂದೆ ಕೆಲವು ದಿನಗಳಲ್ಲಿ ಅವರು ಅಲ್ಲೇ ಮೃತರಾದರು.

ಇತ್ತ ದೇವರಾಜಯ್ಯ ನಂಜರಾಜಯ್ಯ ಎಂಬೀ ಇಬ್ಬರು ಪುನಃ ಆಡಳಿತವನ್ನು ವಹಿಸಿ, ದೊಡ್ಡಕೃಷ್ಣರಾಜ ಒಡೆಯರ ಹೆಂಡತಿಗೆ ಮೂರುವರ್ಷದ ಒಂದು ಮಗುವನ್ನು ಸ್ವೀಕಾರಮಾಡಿಸಿ ಆ ಮಗುವಿಗೆ ಇಮ್ಮಡಿ ಕೃಷ್ಣರಾಜ ಒಡೆಯರೆಂದು ನಾಮಕರಣಮಾಡಿ ಪಟ್ಟಗಟ್ಟಿ ಅವರ ಹೆಸರಿನಲ್ಲಿ ಸರ್ವತಂತ್ರ ಸ್ವತಂತ್ರರಾಗಿ ಆಧಿಪತ್ಯ ನಡೆಸತೊಡಗಿದರು. ಇವರೊಂದಿಗೆ ಸ್ವಕಾರ್ಯ ಧುರಂಧರರಾದ ಕನ್ನಂಬಾಡಿ ವೆಂಕಟಪತಯ್ಯ ಕರಾಚೂರಿ ನಂಜರಾಜಯ್ಯ ಮುಂತಾದವರೂ ಸೇರಿ, ಮನಬಂದಂತೆ ಆಡಳಿತ ಮಾಡುತ್ತಿದ್ದರು. ಈ ಅಧಿಕಾರಿಗಳು ತಡೆಬಡೆಗಳಿಲ್ಲದಂತೆ ಲಂಚ ತೆಗೆದುಕೊಂಡು, ತಮ್ಮ ಮನೆಯಲ್ಲಿನ ಕೀಳುನೌಕರರಿಗೆಲ್ಲ ಸರ್ಕಾರದಲ್ಲಿ ಬೇಕುಬೇಕಾದ ಚಾಕರಿಗಳನ್ನು ಮಾಡಿಸಿಕೊಟ್ಟು, ಉತ್ತಮವಾದ ಸರ್ಕಾರಿ ಭೂಮಿಗಳನ್ನು ತಮ್ಮ ಸ್ವಾಧೀನಪಡಿಸಿಕೊಂಡು, ಖಜಾನೆಯ ಹಣವನ್ನೂ ಸಂದರ್ಭಾನುಸಾರ ದುರುಪಯೋಗಪಡಿಸಿಕೊಳ್ಳುತ್ತಾ, ಹೀಗೆ ತಮಗೆ ಎದುರೇ ಇಲ್ಲವೆಂಬಂತೆ ನಡೆಯುತ್ತಿದ್ದರು. ರಾಜ್ಯವು ಇಂತಹ ಅವ್ಯವಸ್ಥೆಯಲ್ಲಿದ್ದಾಗ ಹೈದರಲ್ಲೀಖಾನನೂ ಆತನ ಅಣ್ಣನೂ ಸಂಸ್ಥಾನದ ನೌಕರಿಗೆ ಸೇರಿ ತಮ್ಮ ಅಭಿವೃದ್ಧಿಮಾರ್ಗವನ್ನು ಗಮನಿಸಿಕೊಂಡಿದ್ದರು.

ದೇವನಹಳ್ಳಿಯಲ್ಲಿ ಜಯಸಂಪಾದನೆ ಮಾಡಿಕೊಂಡು ಹಿಂದಿರುಗಿದ ತರುವಾಯ, ಹೈದರಲ್ಲಿಯ ಪ್ರತಾಪವನ್ನು ಅಭಿವೃದ್ಧಿಪಡಿಸಲು ಸಹಾಯಕವಾದ ಮತ್ತೊಂದು ಕಾರ್ಯವು ನಡೆಯಿತು. ಹೈದರಾಬಾದಿನ ನಿಜಾಮ

ನಾದ ನೈಜಾಮುಲ್‌ಮುಲ್ಕನು ಮೃತನಾಗಿ ರಾಜ್ಯವನ್ನು ಆತನ ಎರಡನೆಯ ಮಗನಾದ ನಾಜಿರ್‌ಜಂಗನು ಆಕ್ರಮಿಸಿದನು. ಆದರೆ ನೈಜಾಮನ ಮಗಳ ಮಗನಾದ ಮುಜಫರ್‌ಜಂಗ್ ಎಂಬುವನು, ರಾಜ್ಯವು ತನಗೆ ಬರಬೇಕೆಂದು ಹೇಳಿಕೊಂಡು, ನಾಜಿರ್‌ಜಂಗನಮೇಲೆ ಯುದ್ಧಮಾಡಲು ಸನ್ನಾಹಮಾಡ ತೊಡಗಿದನು. ನಾಜಿರನು ಸ್ವಸಂರಕ್ಷಣೆಗಾಗಿ, ಆಗ ಹೈದರಾಬಾದಿನ ಸಾ ಮಂತರಾಜರಾಗಿದ್ದ ಮೈಸೂರರಸರನ್ನು ಸಹಾಯಕ್ಕೆ ಸೈನ್ಯವನ್ನು ಕಳುಹಿಸಿ ರೆಂದು ಕೋರಿದನು. ಅಲ್ಲದೆ ಮೇಜರ್ ಲಾರೆನ್ಸ್ ಎಂಬಾತನ ಕೈಕೆಳಗೆ ಇಂಗ್ಲೀಷರ ಸೈನ್ಯದ ಒಂದು ತುಕಡಿಯೂ ಆರ್ಕಾಟ್ ನವಾಬನಾದ ಮಹ ಮ್ಮದಲ್ಲಿಯ ಸೈನ್ಯವೂ ಅವನ ಸಹಾಯಕ್ಕೆ ಒದಗಿದುವು. ಮುಜಫರ್ ಜಂಗನಕಡೆ ಕರ್ನಲ್ ಡಿ ಬುಸ್ಸೀ ಎಂಬವನ ಕೈಕೆಳಗೆ ಫ್ರೆಂಚರ ಸೈನ್ಯದ ಒಂದು ತುಕಡಿಯೂ ಚಂದಾ ಸಾಹೇಬನೆಂಬೊಬ್ಬ ಸರದಾರನೂ ಸಹಾಯ ಕ್ಕಾಗಿ ಬಂದರು. ಇಬ್ಬರಿಗೂ ನಡೆದ ಯುದ್ಧದಲ್ಲಿ ಮುಜಫರ್‌ಜಂಗನು ಸೋತು ಕೈಸೆರೆ ಸಿಕ್ಕಿದನು. ಆದರೆ ಮುಂದೆ ಕೆಲವು ದಿನಗಳಲ್ಲೇ ಕಡಪೆ ನವಾಬನು ನಾಜಿರ್ ಜಂಗನನ್ನು ಮೋಸ ರೀತಿಯಿಂದ ಕೊಲೆ ಮಾಡಿಸಲಾ ಗಿ, ಮುಜಫರ್‌ಜಂಗನನ್ನು ಫ್ರೆಂಚರ ಸಹಾಯದಿಂದ ಹೈದರಾಬಾದಿನ ಗಾದಿ ಯನ್ನೇರಿದನು. ಇದು ಹೇಗಾದರೂ ಇರಲಿ; ಈ ಯುದ್ಧದಲ್ಲಿ ಬಕ್ಷಿ ವೆಂಕ ಟರಾಯನೆಂಬ ಸೈನ್ಯಾಧಿಪತಿಯ ಕೈಕೆಳಗೆ ಹೋಗಿದ್ದ ಮೈಸೂರು ಸೈನ್ಯವು ಬಹು ಧೈರ್ಯದಿಂದ ಕಾದಿತೆಂದು ಕೀರ್ತಿಬಂದಿತು. ಹೈದರನಾದರೋ ಹೈ ದರಾಬಾದಿನ ಆಧಿಪತ್ಯಕ್ಕಾಗಿ ಅವರವರಲ್ಲಿ ನಡೆದ ಈ ಗಲಭೆಯಲ್ಲಿ ಆ ಪ್ರಾಂತ ದಲ್ಲಿ ಉಂಟಾಗಿದ್ದ ಅವ್ಯವಸ್ಥೆಯನ್ನು ಗಮನಿಸಿ, ತನ್ನೊಂದಿಗೆ ಬಂದಿದ್ದ ಬೇ ಡರ ಪಡೆಗೆ ಕೊಳ್ಳೆಗೆ ಅಪ್ಪಣೆಕೊಟ್ಟನು. ಒಡನೆ ಮುನ್ನೂರು ಮಂದಿ ಬೇ ಡರು, ಆ ದಂಡಿನವರ ಮೇಲೆ ಬಿದ್ದು ಲೂಟಿಮಾಡಿ ಹದಿನೈದು ಒಂಟೆಗಳ ಮೇಲಿದ್ದ ಅಕ್ಬರ್ ಮೊಹರಿಗಳ ಹೇರುಗಳನ್ನು ಹೊತ್ತು ತಂದು ಹೈದರನಿಗೆ ಒಪ್ಪಿಸಿದರು. ಅಲ್ಲದೆ ಅವನಿಗೆ ಅನೇಕ ಕುದುರೆಗಳೂ ಬಂದೂಕುಗಳೂ ಲಭ್ಯವಾದುವು. ಹೈದರನು ಎಲ್ಲವನ್ನೂ ತೆಗೆದುಕೊಂಡು ಶ್ರೀರಂಗಪಟ್ಟ ಣಕ್ಕೆ ಬರಲು, ಈ ಸಂಗತಿಯನ್ನು ತಿಳಿದ ದಳವಾಯಿ ದೇವರಾಜಯ್ಯನ ಆ ದ್ರವ್ಯವನ್ನು ತನಗೆ ಕೊಡೆಂದು ಹೈದರನನ್ನು ಕೇಳಿದನು. ಆದರೆ ಹೈದ

ರನು ಅದಕ್ಕೆ ಒಪ್ಪದೆ ಆ ಹದಿನೈದು ಒಂಟೆಯು ಹೇರುಗಳನ್ನೂ ಧೊರೆಗಳಿಗೆ ನಜರುಮಾಡಲು, ಧೊರೆಗಳು ಹೈದರಲ್ಲಿಯ ರಾಜಭಕ್ತಿಯನ್ನು ಮೆಚ್ಚಿಕೊಂಡು ಆ ಪೈಕಿ ಹನ್ನೆರಡು ಹೇರುಗಳನ್ನು ಬೊಕ್ಕಸಕ್ಕೆ ಸೇರಿಸಿಕೊಂಡು, ಮಿಕ್ಕ ಮೂರು ಹೇರುಗಳನ್ನು ಹೈದರನಿಗೇ ಬಹುಮಾನವಾಗಿ ಕೊಟ್ಟುಬಿಟ್ಟರು.

ಕೆಲವು ದಿನಗಳು ಕಳೆದುವು. ತರುವಾಯ ಧೊರೆಗಳವರಿಗೆ ಸೇರಿದ್ದ ತಿರುಚನಾಪಳ್ಳಿಯನ್ನು ಚಂದಾ ಸಾಹೇಬನೆಂಬುವನು ಆಕ್ರಮಿಸಿದನು. ಈ ಸಮಾಚಾರವು ಶ್ರೀರಂಗಪಟ್ಟಣಕ್ಕೆ ತಿಳಿಯಲು ಕರಾಚೂರಿ ನಂಜರಾಜಯ್ಯನೂ ಜಮಾದಾರ್ ಹೈದರ್ ನಾಯಕನೂ ಸೈನ್ಯದೊಂದಿಗೆ ಕಳುಹಿಸಲ್ಪಟ್ಟರು. ಅವರು ಅತ್ತ ತಿರುಚನಾಪಳ್ಳಿಗೆ ಹೋಗಿ ಮುತ್ತಿಗೆ ಹಾಕಿ ಯುದ್ಧ ಮಾಡುತ್ತಿರಲು ಚನ್ನಪಟ್ಟಣದ ಮಹಮ್ಮದಲ್ಲೀ ಖಾನನೆಂಬುವನು, ತಾನು ಧೊರೆಗಳ ಕಟಾಕ್ಷಕ್ಕೆ ಪಾತ್ರನಾಗಬೇಕೆಂದು ಅಪೇಕ್ಷಿಸಿ, ಆರ್ಕಾಡು ಚಂದಾ ಸಾಹೇಬನನ್ನೂ, ಅವನ ದಿವಾನನಾದ ಶೇಷಗಿರಿ ರಾಯನನ್ನೂ ತನ್ನ ಡೇರೆಗೆ ಕರೆಯಿಸಿಕೊಂಡು, ಘಾತುಕತನದಿಂದ ಅವರ ಕೊರಳನ್ನು ಕೊಯಿಸಿ, ಅವರ ತಲೆಗಳನ್ನು ಶ್ರೀರಂಗಪಟ್ಟಣಕ್ಕೆ ಕಳುಹಿಸಿದನು. ಅಲ್ಲಿ ಆ ಎರಡು ತಲೆಗಳನ್ನೂ ಕೋಟೆಯ ಬಾಗಿಲಿಗೆ ಕಟ್ಟಿಸಿದರು.

ಚಂದಾಸಾಹೇಬ ಮುಂತಾದವರನ್ನು ಕೊಲೆಮಾಡಿಸಿದ ಮಹಮ್ಮದಲ್ಲಿಯು ತಿರುಚನಾಪಳ್ಳಿಯನ್ನು ತಾನು ಸ್ವಾಧೀನಪಡಿಸಿಕೊಂಡನು. ಅಷ್ಟು ಮಾತ್ರವೇ ಅಲ್ಲ - ಆ ವಿಚಾರವೇನೆಂದೂ ಮೈಸೂರು ಧೊರೆಗಳಿಗೆ ಸೇರಿದ ಆ ಊರನ್ನು ತಮ್ಮ ಸ್ವಾಧೀನಕ್ಕೆ ಕೊಡೆಂದೂ ಕೇಳಲು ಹೋಗಿದ್ದ, ಕರಾಚೂರಿ ನಂಜರಾಜಯ್ಯನನ್ನು ಉಪಾಯದಿಂದ ಕೋಟೆಯೊಳಕ್ಕೆ ಹೊಗಿಸಿಕೊಂಡು, ಮೋಸಗೊಳಿಸುವುದರಲ್ಲಿದ್ದನು. ಆಗ ಜಮಾದಾರ್ ಹೈದರಲ್ಲೀ ನಾಯಕನು ಧೈರ್ಯದಿಂದ ಒಳಕ್ಕೆ ನುಗ್ಗಿ ಶತ್ರುಗಳೊಂದಿಗೆ ಕಾದಿ ಆತನನ್ನು ಬಿಡಿಸಿಕೊಂಡು ಹೊರಕ್ಕೆ ಕರೆತಂದನು. ಮಹಮ್ಮದಲ್ಲಿಯು ಮುಂದೆ ಮೈಸೂರು ಸೈನ್ಯದೊಂದಿಗೆ ತಾನೊಬ್ಬನೇ ಯುದ್ಧಮಾಡುವುದು ಸಾಧ್ಯವಲ್ಲವೆಂದು ತಿಳಿದು, ಇಂಗ್ಲೀಷರ ಸಹಾಯವನ್ನು ಪಡೆದು, ಎಂಟು ಹತ್ತು ಸಾರಿ ಯುದ್ಧಮಾಡಿದನು. ಆಗಲೆಲ್ಲಾ ಹೈದರಲ್ಲಿಯು ಬಹು ಧೈರ್ಯ ಪರಾ

ಕ್ರಮಗಳಿಂದ ಶತ್ರು ಸೈನ್ಯವನ್ನು ಎದುರಿಸಿದನಲ್ಲದೆ, ಫೌಜು ಸಾಲದೆ
ಬಂದ ಸಂದರ್ಭದಲ್ಲಿ, ತನಗೆ ಧೊರೆಗಳವರು ಇನಾಮಾಗಿ ದಯಪಾಲಿ
ಸಿದ್ದ ಹಣವನ್ನು ತರಿಸಿಕೊಂಡು ಫೌಜುಕಟ್ಟಿ, ಹೀಗೆ ಮೂರು ವರ್ಷಗಳ ವರೆ
ಗೂ ಯುದ್ಧಮಾಡಿ, ಕೊನೆಗೂ ೧೭೫೫ನೆಯ ಸಂ|| ದಲ್ಲಿ ತಿರುಚನಾಪಳ್ಳಿಯ
ನ್ನು ಸ್ವಾಧೀನಮಾಡಿಕೊಂಡು ಶ್ರೀರಂಗಪಟ್ಟಣಕ್ಕೆ ಹಿಂತಿರುಗಿದನು. ಮಾ
ರ್ಗದಲ್ಲಿ ನಂಜರಾಜಯ್ಯನ ದಂಡಿನ ಜನಗಳು ತಮ್ಮ ಬಾಬತು ಬಾಕಿಯಿರು
ವ ಸಂಬಳವನ್ನೆಲ್ಲಾ ಅಲ್ಲೇ ಕೊಟ್ಟುಬಿಡಬೇಕೆಂದು ತೊಂದರೆಪಡಿಸಲಾರಂ
ಭಿಸಿದರು. ನಂಜರಾಜಯ್ಯನು, ಮುಂದೇನುಮಾಡಬೇಕೆಂದು ಉಪಾಯ
ತೋರದವನಾಗಿ, ಶಕ್ತನಾದ ಹೈದರಲ್ಲಿಯನ್ನು ಕರೆಸಿ ಅವರನ್ನು ಹೇಗಾದ
ರೂ ಮಾಡಿ ಸಮಾಧಾನ ಪಡಿಸೆಂದು ಹೇಳಿದನು. ಹೈದರಲ್ಲಿಯು ಉಪಾ
ಯವನ್ನು ಯೋಚಿಸಿ, ಕಣಿವೆಯ ಕೆಳಗೆ ಪ್ರಸಿದ್ಧರಾಗಿದ್ದ ನಾಮಕಲ್ಲಿನ
ರಾಮಾರೆಡ್ಡಿ ಮುಂತಾದ ಪ್ರಮುಖರನ್ನು ಕರೆಯಿಸಿಕೊಂಡು, ಅವರಿಗೆ
ಯೋಗ್ಯ ಸನ್ಮಾನಮಾಡಿಸಿ ಆ ಸೀಮೆಯಿಂದ ಸರ್ಕಾರಕ್ಕೆ ಬರಬೇಕಾದ ಹ
ಣವು ಬಹು ದಿನಗಳಿಂದ ನಿಲ್ಲಲು ಕಾರಣವೇನೆಂದು ಪ್ರಶ್ನಿಸಲು ಆ ಜನರು
ದಿಗ್ಭ್ರಾಂತರಾಗಿ ಕೆಲವು ದಿನಗಳ ಅವಧಿಕೊಟ್ಟರೆ ಎಲ್ಲವನ್ನೂ ಒಪ್ಪಿಸುತ್ತೇ
ವೆಂದು ವಚನಕೊಟ್ಟರು. ಮುಂದೆ ಕೆಲವು ದಿನಗಳೊಳಗಾಗಿಯೇ ಅವರಿಂ
ದ ಐದಾರು ಲಕ್ಷ ವರಹಗಳನ್ನು ವಸೂಲುಮಾಡಿ, ದಂಡಿನವರಿಗೆ ಬಟವಾಡೆ
ಮಾಡಿಸಿ, ನಂಜರಾಜಯ್ಯನೊಂದಿಗೆ ಹೊರಟು ಶ್ರೀರಂಗಪಟ್ಟಣವನ್ನು
ಸೇರಿದನು.

ನಂಜರಾಜಯ್ಯನು, ತಿರುಚನಾಪಳ್ಳಿಯನ್ನು ಸ್ವಾಧೀನಪಡಿಸಿಕೊಳ್ಳು
ವಲ್ಲಿ ಹೈದರಲ್ಲಿಯು ಪ್ರಕಟಿಸಿದ ಸಾಹಸವನ್ನೂ, ಸೈನ್ಯದವರ ದಂಗೆಯನ್ನಡ
ಗಿಸುವುದರಲ್ಲೂ, ಆ ಪರದೇಶದಲ್ಲಿ ಹಣವನ್ನು ಜೊತೆಗೊಳಿಸುವುದರಲ್ಲೂ
ಆತನು ಕೈಕೊಂಡ ಯುಕ್ತಿಯನ್ನೂ ವರ್ಣಿಸಿ ಧೊರೆಗಳ ಮನಸ್ಸು ಆತನ
ವಿಷಯದಲ್ಲಿ ಪ್ರಸನ್ನವಾಗುವಂತೆ ಮಾಡಿದನು. ಸುಪ್ರೀತರಾದ ಧೊರೆಗಳು,
ಸಾಮಂತರಿಂದಲೂ ಸರದಾರ ಸಾಹುಕಾರರೇ ಮುಂತಾದ ಪರಿವಾರದಿಂದ
ಲೂ ನೆರೆದ ಸಭೆಯಲ್ಲಿ ಹೈದರಲ್ಲಿಗೆ 'ಬಹದ್ದೂರ್' ಎಂಬ ಘನತರವಾದ ಬಿ
ರುದನ್ನು ಕೊಟ್ಟು ಗೌರವಿಸಿದರು. ದಂಡಿನ ಖರ್ಚಿಗಾಗಿ ಆತನು ಕೊಟ್ಟಿ

ದ್ದ ತನ್ನ ಸ್ವಂತ ಹಣಕ್ಕಾಗಿ ಮೂರುಲಕ್ಷ ಗೋಪಾಲಿ ವರಹಗಳನ್ನು ಕೊಡುವಂತೆ ಈರೋಡು ಧಾರಾಪುರ ಸತ್ಯಮಂಗಲ ಮುಂತಾದ ಪ್ರಾಂತಗಳಿಗೆ ನಿರೂಪವನ್ನು ಬರೆಸಿಕೊಟ್ಟರು. ಅಲ್ಲದೆ ದಿಂಡಿಗಲ್ಲು ಮುಂತಾದ ಎರಡು ಲಕ್ಷ ವರಹಗಳ ಸೀಮೆಯನ್ನು ವಿಂಗಡಿಸಿ, ಆ ಪ್ರಾಂತಕ್ಕೆ ಆತನನ್ನು ಫೌಜುದಾರನಾಗಿರುವಂತೆ ನಿಯಮಿಸಿ ಕಳುಹಿಸಿದರು. ಹೈದರಲ್ಲಿಯು ೧೭೫೫ನೆಯ ಸಂ|| ದ ಕೊನೆಯ ಭಾಗದಲ್ಲಿ ತನ್ನ ನೂತನ ಉದ್ಯೋಗವನ್ನು ಕೈಕೊಳ್ಳಲು ದಿಂಡಿಗಲ್ಲಿಗೆ ಪ್ರಯಾಣಮಾಡಿದನು. ಹೀಗೆ ಸಾಮಾನ್ಯ ಜಮಾದಾರನಾಗಿ ಸೈನ್ಯವನ್ನು ಸೇರಿದ ಹೈದರಲ್ಲಿಯು ಸ್ವಾಮಿಕಾರ್ಯ ಸ್ವಕಾರ್ಯಗಳೆರಡನ್ನೂ ಸಾಧಿಸಿಕೊಂಡು, ನಾಲ್ಕಾರು ವರ್ಷಗಳ ಕಾಲದಲ್ಲೇ ಫೌಜುದಾರಿಯ ಅಧಿಕಾರಕ್ಕೆ ಪರಿ ಗಣ್ಯನಾಗಿ ಪರಿಣಮಿಸಿದನು.



## ಅಧ್ಯಾಯ ೩ "ಸಂಸ್ಥಾನ ಲಾಭ"

ಹೈದರನು ದಿಂಡಿಗಲ್ಲಿಗೆ ಹೊರಟುಹೋದ ತರುವಾಯವೂ, ದೇವರಾಜಯ್ಯ - ನಂಜರಾಜಯ್ಯನವರು, ಧೊರೆಗಳನ್ನು ಲೇಶಮಾತ್ರವೂ ಗಣನೆಗೆ ತಾರದೆ, ಸಂಸ್ಥಾನದ ಸಮಸ್ತ ವಿಚಾರಗಳನ್ನೂ ಸರ್ವತಂತ್ರ ಸ್ವತಂತ್ರತೆಯಿಂದ ನಡೆಯಿಸಲಾರಂಭಿಸಿದರು. ಇದನ್ನು ಸಹಿಸಿಕೊಂಡಿರುವುದು ಧೊರೆಗಳಿಗೆ ಅಸಾಧ್ಯವಾಯಿತು. ಆಪ್ತರಾದ ಕೆಲವರು, ಆ ಅಧಿಕಾರಿಗಳನ್ನು ಉದ್ಯೋಗದಿಂದ ತೊಲಗಿಸಿ ರಾಜ್ಯಾಧಿಪತ್ಯವನ್ನು ಸ್ವಂತವಾಗಿಯೇ ಪಳೆ ನಡೆಯಿಸಬಾರದು ಎಂದು ಧೊರೆಗಳನ್ನು ಪ್ರೇರಿಸಿದರು. ಅವರಿಗೂ ಅದು ಸಮಂಜಸವೆಂದು ತೋರಿತು. ಬಹುಮಟ್ಟಿಗೆ ಹೆಚ್ಚಿಹೋಗಿದ್ದ ಅವರ ಪ್ರಾಬಲ್ಯವನ್ನು ಅಣಗಿಸುವುದಕ್ಕಾಗಿ ಧೊರೆಗಳು ರಹಸ್ಯವಾಗಿ ಕೆಲವು ಪ್ರಯತ್ನಗಳನ್ನು ನಡೆಯಿಸಿದರು. ಆದರೆ, ಈ ಸಂಗತಿಯು, ಮಹಾ ತಂತ್ರ ಕುಶಲರಾದ ಅವರಿಗೆ ಬೇಗನೆ ತಿಳಿದುಹೋಯಿತು. ತಮ್ಮ ಮೇಲೆ ಕಾರ್ಯಭಾಗ ನಡೆಸುತ್ತಿರುವರೆಂಬ ವಾರ್ತೆಯನ್ನು ಕೇಳಿದೊಡನೆಯೇ ನಂಜರಾಜ

ಯ್ಯನು ಹೆಡೆಯನ್ನು ತುಳಿದ ಸರ್ಪದಂತೆ ರೇಗಿ, ರೋಷಾರುಣ ಲೋಚನನಾಗಿ, ಸಾಧು ಸ್ವಭಾವದ ದೊರೆಗಳಿಗೆ ದುರ್ಬೋಧನೆ ಮಾಡಿ ಮನಸ್ಸುಕೆಡಿಸಿ ತಮ್ಮ ಮೇಲೆ ದ್ವೇಷಭಾವವನ್ನು ಹುಟ್ಟಿಸಿದ ಅವರ ಆಪ್ತಜನರನ್ನು ಕ್ರೂರ ರೀತಿಯಿಂದ ದಂಡಿಸಬೇಕೆಂದು ಯೋಚಿಸಿದನು. ಆದರೆ ದೇವರಾಜಯ್ಯನು, ಪೂರ್ವದಲ್ಲಿ ಚಾಮರಾಜಒಡೆಯರಿಗೆ ತಾನು ಮಾಡಿದ ಅಪಕಾರದಿಂದ, ತನ್ನ ಮೇಲೆ ಬಂದ ದುರ್ಯಶವನ್ನು ಜ್ಞಾಪಿಸಿಕೊಂಡು, ನಂಜರಾಜಯ್ಯನ ಮಾತಿಗೆ ಒಪ್ಪಿಗೆಯನ್ನು ಕೊಡಲಿಲ್ಲ. ಆದರೂ ಆ ಛಲಗಾರನು ತನ್ನ ಹಟವನ್ನು ಸಾಧಿಸಕೊಳ್ಳಲೆಳಸಿ, ಅರಮನೆಯ ಬಾಗಿಲಲ್ಲಿ ನಾಲ್ಕು ತೋಪುಗಳನ್ನು ನಿಲ್ಲಿಸಿ, ತನ್ನ ಕಡೆಯ ಜನರನ್ನು ಕರೆದುಕೊಂಡು, ಒಳಕ್ಕೆ ನುಗ್ಗಿ, ಮಹಾರಾಜರನ್ನು ಬಲಾತ್ಕಾರದಿಂದ ಸಿಂಹಾಸನದ ಮೇಲೆ ಕೂರಿಸಿ, ಅವರ ಆಪ್ತಜನರನ್ನು ಹಿಡಿತರಿಸಿ ಅವರ ಕಣ್ಣೆದುರಿಗೇ ಕಿವಿ ಮೂಗುಗಳನ್ನು ಕೊಯಿಸಿಯೂ, ಕಣ್ಣುಗಳನ್ನು ಕೀಳಿಸಿಯೂ ಅರಮನೆಯಿಂದ ಹೊರಡಿಸಿ, ದೊರೆಗಳನ್ನ ಅತಿಶಯ ಅಪಮಾನಕ್ಕೀಡುಮಾಡಿದನು. ಈ ಮಹದನ್ಯಾಯವು ಸಹನೆಯಾಗದೆ ದೇವರಾಜಯ್ಯನು, ತನ್ನ ಅಧಿಕಾರವನ್ನು ತ್ಯಜಿಸಿ, ರಾಜಧಾನಿಯನ್ನು ಬಿಟ್ಟು ಹೊರಟು, ಗಾಜಲಹಟ್ಟಿ ಕಣಿವೆಯನ್ನಿಳಿದು ೧೭೫೭ನೆಯ ಸಂ|| ದಲ್ಲಿ ಸತ್ಯಮಂಗಲವನ್ನು ಸೇರಿ ಮುಂದೆ ಅಲ್ಲೇ ವಾಸಿಸತೊಡಗಿದನು. ಅಲ್ಲದೆ ತನ್ನ ಖರ್ಚು ವೆಚ್ಚಗಳಿಗೋಸ್ಕರ, ಆ ವರೆಗೆ ಹೈದರನಿಗೆ ಸಲ್ಲುತ್ತಿದ್ದ ಗಡಿಗಳ ಆದಾಯವನ್ನು ಮುಂದೆ ಅವನಿಗೆ ತಲುಪಿಸದಂತೆ ನಿಲ್ಲಿಸಿ, ಅದನ್ನು ತಾನೇ ವಸೂಲುಮಾಡಿಕೊಳ್ಳ ತೊಡಗಿದನು. ಈ ಸಂಗತಿಯನ್ನು ಹೈದರಲ್ಲಿಯ ಪ್ರತಿನಿಧಿಯಾಗಿದ್ದ ಖಂಡೇರಾಯನು ಅತನಿಗೆ ತಿಳಿಸಿ, ಒಡನೆ ಶ್ರೀರಂಗಪಟ್ಟಣಕ್ಕೆ ಬರಬೇಕೆಂದು ಬರೆದನು. ಆ ಸಂಗತಿಯನ್ನು ತಿಳಿದ ಹೈದರನು ಅತ್ಯಂತ ಆಶ್ಚರ್ಯಪಟ್ಟು, ಅಲ್ಲಿಯ ಆಡಳಿತಗಳನ್ನೆಲ್ಲ ಸರಿಗೊಳಿಸಿಟ್ಟು, ಹೊರಟು, ಪ್ರಯಾಣವಾಗಿ ಶ್ರೀರಂಗಪಟ್ಟಣಕ್ಕೆ ಬರುವುದರಲ್ಲಿದ್ದನು.

ಆದರೆ, ಇತ್ತ ಪೇಷ್ವೆ ಬಾಳಾಜೀ ಬಾಜೀರಾಯನು, ದೊಡ್ಡ ಮರಾಟೀ ದಂಡಿದೊಡನೆ ಬಂದು, ಏಕಾಏಕಿ ಶ್ರೀರಂಗಪಟ್ಟಣಕ್ಕೆ ಮುತ್ತಿಗೇ ಹಾಕಿದರು. ನಂಜರಾಜಯ್ಯನು ಅತನನ್ನು ಹೊರಡಿಸುವುದಕ್ಕೆ ಸರ್ವ ಪ್ರಯತ್ನವನ್ನೂ ಮಾಡಿ ನಿಷ್ಫಲವಾಗಲು ಹತಾಶನಾದನು. ಏರೋಪ್ಯರ ಮೇಲ್ವಿಚಾರ

ಣೆಯಿಂದ ನಡೆಯುತ್ತಿದ್ದ ಶತ್ರುದಳದ ಮುತ್ತಿಗೆಯು ದಿನದಿನಕ್ಕೆ ಭಯಂಕರ ಸ್ವರೂಪವನ್ನು ತೆಗೆದುಕೊಳ್ಳುತ್ತಿದ್ದಿತು. ನಂಜರಾಜಯ್ಯನು ಮುಂದೆ ಉಪಾಯ ಕಾಣದೆ ಮೂವತ್ತೆರಡು ಲಕ್ಷ ದ್ರವ್ಯವನ್ನು ಕೊಡುವುದಾಗಿ ಒಪ್ಪಿಕೊಂಡು, ಮುತ್ತಿಗೆಯನ್ನೆತ್ತಲು ಪ್ರಾರ್ಥಿಸಿದನು. ಆದರೆ ಭಂಡಾರದಲ್ಲಿದ್ದ ನಗದು ಹಣ, ರತ್ನಾಭರಣಗಳು ಮುಂತಾಗಿ ಎಲ್ಲವನ್ನೂ ವಿಕ್ರಯಿಸಿ ಒಟ್ಟು ಹಾಕಿದರೂ, ದ್ರವ್ಯವು ಐದಾರು ಲಕ್ಷವನ್ನು ಸಹ ಮೀರಲಿಲ್ಲ. ಆಗ, ಉಪಾಯವಿಲ್ಲದೆ, ಸಂಸ್ಥಾನಕ್ಕೆ ಸೇರಿದ್ದ, ನಾಗಮಂಗಲ, ಬೇಲೂರು, ಕಿಕ್ಕೇರಿ, ಚನ್ನರಾಯಪಟ್ಟಣ, ಕಡೂರು, ಬಾಣಾವರ, ಹಾರ್ನಹಳ್ಳಿ, ಹೊನ್ನವಳ್ಳಿ, ತುರುವೇಕೆರೆ, ಕಂಡಿಕೆರೆ, ಚಿಕ್ಕನಾಯಕನಹಳ್ಳಿ, ಕಡಬ. ಕಲ್ಲೂರು, ಹುಲಿಯೂರುದುರ್ಗ ಎಂಬೀ ಹದಿಮೂರು ಗಡಿಗಳನ್ನು ಮರಾಟೆಯವರಿಗೆ ಭೋಗ್ಯ ಮಾಡಿಕೊಟ್ಟನು. ಬಾಜೀರಾಯನು ಸುಪ್ರೀತನಾಗಿ, ತನಗೆ ಭೋಗ್ಯವಾದ ಆಯಾ ಸ್ಥಳಗಳಲ್ಲಿ ಹಣ ವಸೂಲಿಗಾಗಿ ತನ್ನ ಅಧಿಕಾರಿಗಳನ್ನೂ, ಐದು ಸಾವಿರ ಕುದುರೆ ಸವಾರರನ್ನೂ ಬಿಟ್ಟು ತನ್ನ ದೇಶಕ್ಕೆ ಹೊರಟು ನಡೆದನು. ಆತನು ಹಿಂದಿರುಗಿ ಹೋದ ಕೆಲವು ದಿನಗಳಲ್ಲೇ ಹಿಂದೆ ಹೇಳಿದಂತೆ, ಪ್ರಯಾಣವಾಗಿದ್ದ ಹೈದರಲ್ಲಿಯು ಶ್ರೀರಂಗಪಟ್ಟಣವನ್ನು ಸೇರಿ, ನಡೆದು ಹೋದ ವಿಚಾರಕ್ಕಾಗಿ ಪಶ್ಚಾತ್ತಾಪಪಟ್ಟು ಮರಾಟೆಯವರಿಗೆ ಆಯಾ ಗಡಿಗಳಿಂದ ಹಣವನ್ನು ಕೊಡದೆ, ಅವರ ಸೈನ್ಯವನ್ನು ಮಳೆಗಾಲವು ಪ್ರಾರಂಭವಾಗುವ ವೇಳೆಗೆ ಸರಿಯಾಗಿ ಹೊರಡಿಸಬೇಕೆಂದು ಸಲಹೆ ಕೊಟ್ಟನು. ಆತನ ಸಲಹೆಯಂತೆಯೇ ಮರಾಟೆ ಸೈನ್ಯವು ಹೊರಡಿಸಲ್ಪಟ್ಟಿತು. ಮುಂದೆ ಮಳೆಗಾಲವು ಕಳೆಯುವವರೆಗೂ ಅವರು ಪುನಃ ದಂಡೆತ್ತಲು ಅನುಕೂಲವಿರಲಿಲ್ಲವಾದುದರಿಂದ, ಮೈಸೂರು ಸೈನ್ಯವು ಸ್ವಲ್ಪ ಮಟ್ಟಿಗೆ ಸುಧಾರಿಸಿಕೊಳ್ಳುವಂತಾಯಿತು.

ಇತ್ತ ಹೈದರನು ತನ್ನ ಗಡಿಗಳಿಂದ ವಸೂಲಾಗಿದ್ದ ಹಣ ಕಾಸುಗಳ ವಿಚಾರವನ್ನು ಕುರಿತು ದೇವರಾಜಯ್ಯನೊಂದಿಗೆ ಮಾತುಕಥೆ ನಡೆಯಿಸಿದನು. ಆ ವರೆಗೆ ಆತನ ಗಡಿಗಳ ಮೂಲಕ ವಸೂಲಾಗಿದ್ದ ಮೂರು ಲಕ್ಷ ವರಹಗಳನ್ನು, ಪಾಲ್‌ಘಾಟಿನ ನಾಯರ್ ರಾಜನಿಗೆ ಮಾಡಿದ ಸೈನ್ಯ ಸಹಾಯಕ್ಕಾಗಿ ಆತನಿಗೆ ಸಲ್ಲಬೇಕಾಗಿದ್ದ ಹನ್ನೆರಡು ಲಕ್ಷ ವರಹಗಳನ್ನೂ ಕೊಡ

ತಕ್ಕದ್ದೆಂದು ತೀರ್ಮಾನವಾಯಿತು. ಮೂರು ಲಕ್ಷಕ್ಕೆ ದೇವರಾಜಯ್ಯನು ತನ್ನ ಕಡೆಯ ಸಾಹುಕಾರರನ್ನು ಜಾಮೀನು ಕೊಟ್ಟನು. ಮಿಕ್ಕ ಹನ್ನೆರಡು ಲಕ್ಷ ದ್ರವ್ಯವನ್ನೂ, ವಸೂಲು ಮಾಡಲು, ದೇವರಾಜಯ್ಯನ ಕಡೆಯುವನಾದ ರಜಪೂತರ ಹರಿಸಿಂಗ್ ಎಂಬ ವೀರನು ನಿಯಾಮಕನಾದನು. ಹೀಗೆ ಏರ್ಪಡಿಸಿ, ತನ್ನ ಸೀಮೆಯ ಮೇಲ್ವಿಚಾರಣೆಗಾಗಿಯೂ, ಮಧುರೆಯನ್ನು ಮುತ್ತಿ ಜಯಿಸಬೇಕೆಂದು ಇಷ್ಟಗೊಂಡೂ ಹೈದರನು ದಿಂಡಿಗಲ್ಲು ಪ್ರಾಂತಕ್ಕೆ ಪ್ರಯಾಣವಾದನು. ಇತ್ತ ದಂಡಿನ ಜನರ ಸಂಬಳವು ಬಾಕೀ ಬಿದ್ದು ಅವರು ನಂಜರಾಜಯ್ಯನ ಮನೆಯ ಬಾಗಿಲಲ್ಲೂ ಅರಮನೆಯ ಬಾಗಿಲಲ್ಲೂ ದಂಗೆ ಕುಳಿತು, ಒಳಕ್ಕೆ ನೀರನ್ನೇ ಆಗಲಿ ಬೇಕಾದ ಇತರ ಪದಾರ್ಥಗಳನ್ನೇ ಆಗಲಿ ಬಿಡದೆ ದೊಂಬಿ ಮಾಡಿದರು. ನಂಜರಾಜಯ್ಯನು ಖಜಾನೆಯಲ್ಲಿದ್ದ ದವಸ ಧಾನ್ಯಗಳನ್ನೆಲ್ಲ ಮಾರಿಸಿ ಒದಗಿಸಿದಾಗ್ಯೂ ಬಾಕಿ ಪೂರ್ತಿಯಾಗಿ ತೀರಲಿಲ್ಲ. ಆ ವೇಳೆಗೆ ಕಾರಣಾಂತರದಿಂದ ದಿಂಡಿಗಲ್ಲಿನಿಂದ ಬರುತ್ತಿದ್ದ ಹೈದರನು ಈ ವಾರ್ತೆಯನ್ನು ಕೇಳಿ, ಸತ್ಯಮಂಗಲಕ್ಕೆ ಹೋಗಿ ದೇವರಾಜಯ್ಯನನ್ನೂ ಜೊತೆಗೆ ಕರೆದುಕೊಂಡು ರಾಜಧಾನಿಗೆ ಬಂದನು. ನಂಜರಾಜಯ್ಯನು ದೊಡ್ಡ ಮೆರೆವಣಿಗೆಯನ್ನು ನಡೆಸಿ, ದೇವರಾಜಯ್ಯನನ್ನು ಬಹು ಗೌರವದಿಂದ ಪಟ್ಟಣದೊಳಕ್ಕೆ ಕರೆದೊಯ್ದನು. ಮುಂದೆ ಆತನು ಬಹು ದಿನ ಬದುಕಲಿಲ್ಲ. ಪಟ್ಟಣವನ್ನು ಹೊಕ್ಕ ಆರು ದಿನಗಳೊಳಗಾಗಿ ಶೋಭೆರೋಗದಿಂದ ಮೃತಪಟ್ಟನಾದರೂ, ಅವನ ಮರಣಕ್ಕೆ ನಂಜರಾಜಯ್ಯನೇ ಕಾರಣನೆಂದು ಜನಗಳು ಹೇಳಿಕೊಂಡರು. ತರುವಾಯ ಸೈನ್ಯದ ಜನರ ದಂಗೆಯನ್ನು ಅಡಗಿಸುವ ಕಾರ್ಯವೊಂದು ಉಳಿಯಿತಷ್ಟೆ! ನಂಜರಾಜಯ್ಯನು ಆ ಕಾರ್ಯಕ್ಕೆ ಹೈದರಲ್ಲಿಯನ್ನೂ ಖಂಡೇರಾಯನನ್ನೂ ನಿಯಮಿಸಿದನು. ಅವರು ನಯದಿಂದ ಕೆಲವರನ್ನೂ ಭಯದಿಂದ ಕೆಲವರನ್ನೂ ಒಡಂಬಡಿಸಿ, ಬಹು ಖಂಡಿತವಾಗಿ ಲೆಖ್ಖಾಚಾರ ನಡೆಸಿ ಬಾಕಿಯನ್ನೆಲ್ಲ ತೀರಿಸಿ, ಹಾಗೆ ದಂಗೆಗೆ ಕಾರಣರಾಗಿದ್ದವರನ್ನೆಲ್ಲ ಕೆಲಸದಿಂದ ನಿವೃತ್ತರನ್ನಾಗಿ ಮಾಡಿದರು. ಮಾತ್ರವಲ್ಲ-ಹೈದರನು ಅವರಲ್ಲಿ ವಿಶೇಷ ಧನವಂತರೂ ಪ್ರಬಲರೂ ಆಗಿದ್ದ ಮುಖಂಡರ ಮೇಲೆ, ತನ್ನ ಕಡೆಯ ಬೇಡರನ್ನು ಬಿಟ್ಟು, ಮಧ್ಯಮಾರ್ಗದಲ್ಲಿ ಹೋಗುವಾಗ್ಗೆ ಎಲ್ಲರನ್ನೂ ಸುಲಿಗೆ ಮಾಡಿಸಿ

ದನು. ದೇವರಾಜಯ್ಯನ ಕಾಲದಿಂದಲೂ ಪ್ರತಿಪಕ್ಷದಲ್ಲಿದ್ದು ತನಗೆ ವಿರೋಧವನ್ನೇ ಬಗೆಯುತ್ತಿದ್ದ ಹರಿಸಿಂಗ್ ಎಂಬುವನನ್ನು ಕೊಲ್ಲಿಸಿದನು. ಈ ಕಾರ್ಯದಿಂದಲೂ ಹೈದರಲ್ಲಿಗೆ ವಿಶೇಷ ಲಾಭವೇ ಆಯಿತು. ಸೈನ್ಯದಲ್ಲಿ ಎದ್ದ ದಂಗೆಯನ್ನು ಅಡಗಿಸಿದ ಉಪಕಾರಕ್ಕಾಗಿ, ಬೆಂಗಳೂರು ಕೋಟೆಯೂ ಅದಕ್ಕೆ ಸೇರಿದ ಸೀಮೆಯೂ ಆತನಿಗೆ ಜಹಗೀರಾಗಿ ಕೊಡಲ್ಪಟ್ಟುವು.—

ಹಿಂದೆ ಹೇಳಿದಂತೆ ಮರಾಟೆಯವರಿಗೆ ಭೋಗ್ಯವಾಗಿದ್ದ ಹದಿಮೂರು ಗಡಿಗಳೂ ಅವರ ಕೈ ತಪ್ಪಿ ಹೋಗಿದ್ದುವಲ್ಲವೆ? ಅವುಗಳನ್ನು ಪುನಃ ಸ್ವಾಧೀನ ಮಾಡಿಕೊಳ್ಳಬೇಕೆಂದು, ೧೭೫೯ ರಲ್ಲಿ ಒಂದು ಮರಾಟೆಯವರ ದಂಡು ಬಂದು ಬೆಂಗಳೂರನ್ನು ಮುತ್ತಿತು-ಸ್ವಲ್ಪ ಸೈನ್ಯವನ್ನು ಕಳುಹಿಸಿ, ಚನ್ನಪಟ್ಟಣವನ್ನೂ ಸ್ವಾಧೀನಪಡಿಸಿಕೊಂಡಿತು. ನಂಜರಾಜನು ಅವರನ್ನು ಅಲ್ಲಿಂದ ಹೊರಡಿಸಲು ಯೋಚಿಸಿ, ತನ್ನ ಸೈನ್ಯಕ್ಕೆ ಆಜ್ಞೆಮಾಡಲು, ಅವರು ತಮ್ಮ ಸಂಬಳಗಳನ್ನು ಪೂರ್ತಿಯಾಗಿ ಪಾವತಿಮಾಡದಿದ್ದರೆ ಹೊರಡುವುದಿಲ್ಲವೆಂದು ಮುಷ್ಕರ ಹಿಡಿದರು. ಆಗ ಹೈದರಲ್ಲಿಯು ಅವರ ಸಂಬಳಗಳನ್ನು ತಾನು ತೀರಿಸುವುದಾಗಿ ಒಪ್ಪಿಕೊಂಡು, ಅವರನ್ನು ಸಮಾಧಾನ ಪಡಿಸಿ, ತನ್ನ ಸೈನ್ಯವನ್ನೂ ಅವರೊಂದಿಗೆ ಕೊಟ್ಟು ಮರಾಟೆಯವರ ಮೇಲೆ ಕಳುಹಿಸಿದನು. ಮೈಸೂರು ಸೈನ್ಯವು, ಮರಾಟೆಯವರನ್ನು ಬೆಂಗಳೂರು ಮುತ್ತಿಗೆಯನ್ನು ಬಿಟ್ಟು ಹಿಂದಿರುಗುವಂತೆ ಓಡಿಸಿತು. ತರುವಾಯ ಮರಾಟೆಯವರು ತಮ್ಮ ಸ್ವಾಧೀನಗಲ್ಲೇ ಇದ್ದ ಚನ್ನಪಟ್ಟಣದ ಬಳಿಗೆ ಬಂದರು. ಹೈದರನ ಸೈನ್ಯವು ಅಲ್ಲಿಗೂ ಅವರ ಬೆನ್ನಟ್ಟಿ ಬಂದು, ಮೇಲೆಮೇಲೆ ಯುದ್ಧಮಾಡಿ, ಮೂರುತಿಂಗಳು ಕಾಲದೊಳಗಾಗಿ ಅವರನ್ನು ದಣಿಸಿ ಹಣ್ಣುಮಾಡಿತು. ಆಗ ಮರಾಟೆ ಸೈನ್ಯಾಧಿಕಾರಿಯಾದ ಗೋಪಾಲಹರಿಯು ಹಿಂದೆ ಒಪ್ಪಿಕೊಂಡಿದ್ದಂತೆ ಮೂವತ್ತೆರಡು ಲಕ್ಷ ದ್ರವ್ಯ ಕೊಟ್ಟರೆ, ಹಿಂದಿರುಗಿ ಹೊರಟು ಹೋಗುವುದಾಗಿ ತಿಳಿಸಿದನು. ಒಡನೆ ಹೈದರನು ಅರ್ಧ ದ್ರವ್ಯವನ್ನು ನಗದಾಗಿ ಸಲ್ಲಿಸಿದನು ಮಿಕ್ಕ ಅರ್ಧಕ್ಕೆ ಹೈದರನ ನಂಬಿಕೆಯಮೇಲೆ, ಮರಾಟೆ ದಂಡಿನ ಸಾಹುಕಾರರೇ ಜಾಮೀನಾದರು. ಇಂತು ಮರಾಟೆಯವರ ಕಾಟವು ತಪ್ಪಿ ಅವರು ಹಿಂದಿರುಗಿದರು. ಇದರಿಂದ ಹೈದರಲ್ಲಿಗೆ ಆ ಹದಿಮೂರು ಗಡಿಗಳೂ ಸ್ವಾಧೀನವಾಗಿ ಆತನ ಸ್ವಂತ ಅಧಿಕಾರಕ್ಕೆ ಒಳಪಟ್ಟುವು.

ಹೈದರಲ್ಲಿಯು ಜಯಭೇರಿಯನ್ನು ಹೊಡೆಯಿಸಿಕೊಳ್ಳುತ್ತ ರಾಜಧಾನಿಯನ್ನು ಹೊಗುತ್ತಿರಲು, ನಂಜಯ್ಯನು ಆತನ ಸಾಹಸಕ್ಕೆ ಮೆಚ್ಚಿ, ಚಿಕ್ಕದೇವರಾಜ ಒಡೆಯರ ಕಾಲದಿಂದ ಈಚೆಗೆ ಎಂದೂ ನಡೆಯದಿದ್ದಂತಹ ಒಂದು ಮಹಾ ಸಭೆಯನ್ನು ನೆರೆಯಿಸಿ, ಅದಕ್ಕೆ ಆತನನ್ನು ಬರಮಾಡಿಕೊಂಡು, ಆತನು ಸಭಾಪ್ರವೇಶ ಮಾಡುತ್ತಲೇ ಪರಿವಾರದೊಂದಿಗೆ ಇದಿರೆದ್ದು ಗೌರವಿಸಿ, ಆ ಲಂಗಿಸಿಕೊಂಡು, 'ನವಾಬ್ ಫತ್ತೇ ಹೈದರಲ್ಲೀಖಾ಼ ಬಹದ್ದೂರ್' ಎಂಬ ಬಿರುದಿನಿಂದ ಸಂಬೋಧಿಸಿ, ಆನೆ ಕುದುರೆ ನೌಬತ್ತುಗಳನ್ನೂ ಅಲ್ಲದೆ ಆತ ನು ಸಭೆಗೆ ಬಂದಾಗ್ಗೆ ಎಲ್ಲರೂ ಎದ್ದು ಗೌರವಿಸುವಂತಹ ತಃಜಿಂ ಎಂಬ ಮರ್ಯಾದೆಯನ್ನೂ ಕೊಟ್ಟು ಮನ್ನಿಸಿದನು.

ದಿನದಿನಕ್ಕೆ ಹೆಚ್ಚಿಹೋಗುತ್ತ ಮನಬಂದಂತೆ ಕಾರ್ಯಭಾರ ಮಾಡು ತ್ತಿದ್ದ ನಂಜರಾಜಯ್ಯನ ಉಪದ್ರವದಿಂದ ಪಾರಾಗಬೇಕಾದುದು ರಾಜ ಮನೆ ತನದವರಿಗೆ ಅನಿವಾರ್ಯವೆನ್ನಿಸಿತು. ಅದಕ್ಕಾಗಿ ಆತನನ್ನು ಹೇಗಾದರೂ ರಾ ಜಧಾನಿಯಿಂದ ಹೊರಡಿಸಿದರೆ ಸಾಕೆಂದು ಆಲೋಚಿಸಿ, ಖಂಡೇರಾಯನ ಮೂಲಕ ಹೈದರಲ್ಲಿಯ ಸಹಾಯವನ್ನು ಅಪೇಕ್ಷಿಸಿದರು. ಇತ್ತ ನಂಜರಾ ಜಯ್ಯನಿಗೆ ಪುನಃ ಸೈನಿಕರ ಸಂಬಳದ ತಗಾದೆಯು ಬಲವಾಯಿತು. ಅಲ್ಲದೆ ಅವರು, ಖಂಡೇರಾಯ ಮುಂತಾದವರ ಪ್ರೇರಣೆಯಿಂದ ಆತನ ಮನೆ ಬಾಗಿ ಲಲ್ಲಿ ಕುಳಿತು ದಂಗೆ ಮಾಡಿದರು. ಎಂದಿನಂತೆ ಹೈದರನು ಸಹಾಯ ಮಾಡ ದೆ, ಖಂಡೇರಾಯನಿಂದ ಪ್ರೇರಿತನಾಗಿ ತಾಟಸ್ಥ್ಯಭಾವವನ್ನು ವಹಿಸಿದನು. ನಂಜರಾಜಯ್ಯನು ಬಹು ಬೇಸರಪಟ್ಟು, ಅಷ್ಟು ಕಿರುಕುಳಗಳಿಂದ ಕೂಡಿದ ಆ ಅಧಿಕಾರದಲ್ಲಿರಲು ಇಚ್ಛಿಸದೆ, ಮೂರು ಲಕ್ಷದ ಸೀಮೆ, ಮೂರುಸಾವಿರ ಕಾಲಾಳು ಒಂದು ಸಾವಿರ ಕುದುರೆಸೈನ್ಯ ಇಷ್ಟನ್ನು ಮಾತ್ರ ತನ್ನ ಸ್ವಾಧೀನ ದಲ್ಲಿಟ್ಟುಕೊಳ್ಳಲು ಒಪ್ಪಿ ಅಧಿಕಾರದಿಂದ ನಿವೃತ್ತನಾದನು. ಆದರೂ ಇಪ್ಪ ತ್ತು ವರ್ಷಕಾಲ ನಿರಂಕುಶಾಧಿಕಾರ ನಡೆಸಿದ ಆ ಸ್ಥಳವನ್ನು ಬಿಟ್ಟು ಹೋಗ ಲು ಮನಸ್ಸೊಪ್ಪದೆ, ಲೋಭವು ಬಾಧಿಸಲು, ನಂಜನಗೂಡಿನ ಶ್ರೀಕಂಠೇ ಶ್ವರನ ಸೇವೆಗಾಗಿ ಎಂಬ ನೆಪದಿಂದ ಇನ್ನೂ ರಾಜಧಾನಿಯಲ್ಲೇ ವಾಸಮಾಡಿ ದ್ದನು. ಅವನನ್ನು ಅಲ್ಲಿಂದ ಹೊರಡಿಸದಿದ್ದರೆ ಪರಿಣಾಮವಿಲ್ಲವೆಂದು ಯೋ ಚಿಸಿ ಹೈದರನು, ತನ್ನ ಸೈನ್ಯವನ್ನು ತರಿಸಿ, ರಾಜಧಾನಿಯನ್ನು ಮುತ್ತಿ, ಬಲ

ವಂತದಿಂದ ಆತನನ್ನು ಅಲ್ಲಿಂದ ಹೊರಡಿಸಿದರು. ನಂಜರಾಜಯ್ಯನು ಉಪಾಯವಿಲ್ಲದೆ ರಾಜಧಾನಿಯಿಂದ ಹೊರಬಿದ್ದು ಕೊಣನೂರು ಎಂಬಸ್ಥಳಕ್ಕೆ ಹೋಗಿ ಸೇರಿಕೊಂಡನು. ತರುವಾಯ ಖಂಡೇರಾಯನು ಪ್ರಧಾನಿಯಾಗಿ ನೇಮಕವಾದನು.

ಮನುಷ್ಯನಿಗೆ ಸುಯೋಗವು ಒದಗುವ ಕಾಲದಲ್ಲಿ, ಅಚಿಂತನೀಯ ಸ್ಥಳಗಳೂ ಮಹದೈಶ್ವರ್ಯವನ್ನು ಪ್ರಸಾದಿಸುವುವು. ಹೈದರನಿಗೆ ಶುಕ್ರ ಮಹರ್ದಸೆಯು ನಡೆಯುತ್ತಿದ್ದ ಈ ಕಾಲದಲ್ಲಿ, ಆತನು ಮಣ್ಣು ಮುಟ್ಟಿದರೆ ಹೊನ್ನಾಗುತಿತ್ತು. ೧೭೬೦ನೆಯ ಸಂ|| ದ ಮಧ್ಯ ಕಾಲದಲ್ಲಿ ಇಂಗ್ಲೀಷರಿಗೂ ಫ್ರೆಂಚರಿಗೂ ಪುನಃ ಕದನವು ಕೈ ಗಟ್ಟಿತು. ಫ್ರೆಂಚರ ಕಡೆಯ ಒಬ್ಬ ರಾಯಭಾರಿಯು ಹೈದರನ ಬಳಿಗೆ ಬಂದು, ಇಂಗ್ಲೀಷರನ್ನು ಆರ್ಕಾಟಿನಿಂದ ಓಡಿಸುವುದರಲ್ಲಿ ತಮಗೆ ಸಹಾಯಮಾಡಬೇಕೆಂದು ಕೇಳಿಕೊಂಡನು. ಹೈದರನು ೫೦೦೦ ಸಿಪಾಯಿ ಮತ್ತು ೧೦೦೦ ಕುದುರೆ ದಳದೊಂದಿಗೆ ಬೆಂಬಲವಾಗಿ ಬರಬೇಕೆಂದೂ, ಯುದ್ಧಾಂತ್ಯದಲ್ಲಿ ಜಯವಾದರೆ, ತಿರುಚನಾಪಳ್ಳಿ, ಮಧುರೆ ಮತ್ತು ತಿನ್ನವೆಲ್ಲಿ ಜಿಲ್ಲಾಗಳು ಪ್ರತಿಫಲವಾಗಿ ಕೊಡಲ್ಪಡಬೇಕೆಂದೂ ತೀರ್ಮಾನವಾಯಿತು. ಮೈಸೂರು ಸೀಮೆಯಿಂದ ಆರ್ಕಾಟಿನ ವರೆಗಿನ ಮಾರ್ಗವು ತಮ್ಮ ಸ್ವಾಧೀನದಲ್ಲಿರುವುದು ಅನುಕೂಲವೆಂದು ಯೋಚಿಸಿ ಹೈದರಲ್ಲಿಯು, ಕೃಷ್ಣಗಿರಿ, ತಿರುಪತ್ತೂರು, ವಾನಿಯಂಬಾಡಿ, ಜಗದೇವಗಡ, ಕಪಿಲೇಗಡ, ರಾಯಕೋಟೆ ಮುಂತಾಗಿ ಬಾರಾಮಹಲ್ ಎಂದು ಪ್ರಸಿದ್ಧವಾದ ಪ್ರಾಂತಗಳನ್ನು ಆಕ್ರಮಿಸಿ ಸ್ವಾಧೀನಗೊಂಡನು. ಅಲ್ಲದೆ ಆನೇಕಲ್ಲು ಪಾಳ್ಯಗಾರನನ್ನು ಜಯಿಸಿ ಆ ಕೋಟೆಯನ್ನೂ ಹಿಡಿದನು. ಮತ್ತು ಫ್ರೆಂಚರಿಗೆ ಬೆಂಬಲವಾಗಿ ತನ್ನ ಭಾವಮೈದುನನಾದ ಮಖದುಂ ಆಲಿಯೊಂದಿಗೆ ಸೈನ್ಯವನ್ನು ಕಳುಹಿಸಿದನು. ತಿರುವಾಡಿ ಎಂಬಲ್ಲಿ, ಇಂಗ್ಲೀಷರ ಸೈನ್ಯಕ್ಕೂ ಮೈಸೂರು ಸೈನ್ಯಕ್ಕೂ ಯುದ್ಧನಡೆದು ಇಂಗ್ಲೀಷರಿಗೇ ಅಪಜಯವಾಯಿತು. ಆದರೆ ಈ ಜಯದಿಂದ ಪ್ರಾಪ್ತವಾದ ಸಂತೋಷವು ಹೈದರಲ್ಲಿಗೆ ಬಹು ದಿನ ಉಳಿಯಲಿಲ್ಲ. ನವಾಬನ ಸೈನ್ಯವು, ಮುಂದೆ ಎಲ್ಲದ್ದ ಕಾರ್ಯವನ್ನು ಅಲ್ಲೇ ಬಿಟ್ಟು ಶ್ರೀರಂಗಪಟ್ಟಣಕ್ಕೆ ಹಿಂದಿರುಗಬೇಕಾದ ಅಗತ್ಯವಾದ ಕಾರ್ಯವೊಂದು ಒದಗಿತು.

ಮೈಸೂರು ರಾಜಮನೆತನದವರ ಸ್ಥಿತಿಯು, ನಂಜರಾಜಯ್ಯನನ್ನು ಹೊರಡಿಸಿ, ಹೈದರಲ್ಲೀ ನವಾಬನ ಸರ್ವಾಧಿಕಾರಕ್ಕೆ ಒಳಪಟ್ಟುದರಿಂದ, ಯಾವ ಭಾಗದಲ್ಲೂ ಸುಖವಾಗಲಿಲ್ಲ. ಇಲಿಯ ಬಾಧೆಯನ್ನು ತಪ್ಪಿಸಿಕೊಳ್ಳಲು ಪ್ರಯತ್ನಿಸಿ, ಹುಲಿಯ ಬಾಯಿಗೆ ಬಿದ್ದಂತೆ ಆಯಿತು - ಕಪ್ಪೆಯು ಸುರಕ್ಷಣೆಯನ್ನು ಅಪೇಕ್ಷಿಸಿ ಹಾವಿನ ಹೆಡೆಯ ನೆಳಲನ್ನು ಆಶ್ರಯಿಸಿದಂತಾಯಿತು. ದೇವರಾಜಮ್ಮಣ್ಣಿಯವರು, ಈ ಸಂಕಟದಿಂದ ಪಾರಾಗುವ ಮಾರ್ಗವನ್ನು ಯೋಚಿಸಿ, ಖಂಡೇರಾಯ ವೆಂಕಟಪತಯ್ಯ ಮತ್ತು ಕೊಳ್ಳೇಗಾಲದ ವೀರಣ್ಣಶೆಟ್ಟಿ ಇವರೊಂದಿಗೆ ಮಸಲತ್ತು ನಡೆಸಿ, ದಿನದಿನಕ್ಕೆ ಮಹಾ ಪ್ರಬಲನಾಗುತ್ತಿರುವ ಈತನನ್ನು ಹೊರಗಿನ ಸಹಾಯವಿಲ್ಲದೆ, ಹೊರಡಿಸುವುದು ಅಸಾಧ್ಯವೆಂದೆಣಿಸಿ, ದೇವನಹಳ್ಳಿ ಬಳಿ ಬಂದಿಳಿದಿದ್ದ ವೀಸಾಜೀಪಂತ್ ಎಂಬ ಮಾರಾಟೀ ಸರದಾರನನ್ನು ತಮ್ಮ ಸಹಾಯಕ್ಕೆ ಬರಬೇಕೆಂದು ಕೇಳಿಕೊಂಡರು.

೧೭೬೦ನೆಯ ಸಂವತ್ಸರದ ಆಗಸ್ಟು ತಿಂಗಳು. ಕಾವೇರಿನದಿಯು ಪೂರ್ಣ ಪ್ರವಾಹದಿಂದ ಹರಿಯುತ್ತಿದೆ. ಖಂಡೇರಾಯನು ಧೊರೆಗಳ ಸೈನ್ಯಕ್ಕೆ ಅಜ್ಞಾಪಿಸಿ, ಈಗಿನ ದರಿಯಾದೌಲತ್ ಅರಮನೆಯಿರುವ ಸ್ಥಳದಲ್ಲಿ ತಂಗಿದ್ದ ಹೈದರನ ಸೈನ್ಯದ ಮೇಲೆ, ಕೋಟೆಯಿಂದ ಫಿರಂಗಿಗಳನ್ನು ಹೊಡೆಯಿಸಲು ಆರಂಭಿಸಿದನು. ಏಕಾಏಕಿ ಪ್ರಾಪ್ತವಾದ ಈ ಪರಿಸ್ಥಿತಿಯನ್ನು ಕಂಡು ನವಾಬನು, ಇದು ಖಂಡೇರಾಯನ ಕೃತ್ರಿಮದಿಂದ ನಡೆದಿರುವ ಕೃತ್ಯವೆಂದು ತೀರ್ಮಾನಿಸಿ, ಆದರೂ ಧೈರ್ಯಗೆಡದೆ, ಸದ್ಯಃ ತನ್ನ ಬಳಿಯಿದ್ದ ನಗದುಹಣ ಜವಾಹಿರಿ ಇವುಗಳನ್ನು ಮಾತ್ರ ತೆಗೆದುಕೊಂಡು ಆ ಸಮಯಕ್ಕೆ ದೊರೆತ ಒಂದೇ ಒಂದು ಹಳೆಯ ಹರಿಗೋಲನ್ನು ಆಶ್ರಯಿಸಿ, ಕೆಲವುಮಂದಿ ಆಪ್ತ ಜನರೊಡನೆ ನದಿಯನ್ನು ದಾಟಿ ಪರಾರಿಯಾದನು. ಮಾರನೆಯ ಪ್ರಾತಃಕಾಲ ನವಾಬನು ತಲೆ ತಪ್ಪಿಸಿಕೊಂಡನೆಂಬ ವರ್ತಮಾನವನ್ನು ಕೇಳಿ ಖಂಡೇರಾಯನು, ಆತನ ಹೆಂಡಿರುಮಕ್ಕಳನ್ನು ಸೆರೆಗೊಳಿಸಿ ಕೋಟೆಯಲ್ಲಿ ಕೈದಿನಲ್ಲಿಡಿಸಿದನು. ಮತ್ತು ಓಡಿಹೋಗಿದ್ದ ಹೈದರನನ್ನು ಹಿಡಿದುಕೊಟ್ಟವರಿಗೆ ಬಹುಮಾನ ಕೊಡುವುದಾಗಿ ಎಲ್ಲಾ ಗಡಿಗಳವರಿಗೂ ಬರೆದು ಕಳುಹಿಸಿದನು.

ಹೈದರನು ಎಲ್ಲೂ ನಿಲ್ಲದೆ ಆ ರಾತ್ರಿಯೇ ಪ್ರಯಾಣಮಾಡಿ, ಎಪ್ಪತ್ತೈ

ದು ಮೈಲು ದೂರ ಮಾರ್ಗವನ್ನು ಒಂದೇ ಕುದುರೆಯ ಬೆನ್ನಮೇಲೆ ಕಳೆದು ಮೂರನೆಯ ದಿನವೇ ಆನೆಕಲ್ಲಿಗೆ ಬಂದುಸೇರಿದನು. ಬೆಂಗಳೂರು ಕಿಲ್ಲೇದಾರ ಕಬೀರಬೇಗನು ತನ್ನ ಪಕ್ಷದಲ್ಲೇ ಇದ್ದಾನೆಂಬ ವರ್ತಮಾನವು ತಿಳಿದು ಆತನಿಗೆ ಸಂತೋಷವನ್ನುಂಟುಮಾಡಿತು. ಆ ಸಮಯದಲ್ಲಿ ಆತನಿಗೆ ಇತರ ಸ್ಥಳಗಳೆಲ್ಲಾ ತಪ್ಪಿಹೋಗಿ, ಬೆಂಗಳೂರು ದಿಂಡಿಗಲ್ಲು ಆನೆಕಲ್ಲು ಬಾರಾಮಹಲ್ ಇಷ್ಟು ಸ್ಥಳಗಳು ಮಾತ್ರ ಸೇರಿದ್ದುವು. ಆದರೂ ಧೀರನಾದ ಆತನು ಎದೆಗೆಡದೆ, ಪುದುಚೇರಿಗೆ ಹೋಗಿದ್ದ ತನ್ನ ಸೈನ್ಯಕ್ಕೆ ಒಡನೆ ಹಿಂದಿರುಗುವಂತೆ ಹೇಳಿಕಳುಹಿಸಿ, ಬೆಂಗಳೂರಿನ ಕೆಲವುಂದಿ ವರ್ತಕರನ್ನು ಕರೆಯಿಸಿಕೊಂಡು, ಅವರಲ್ಲಿ ನಾಲ್ಕು ಲಕ್ಷ ವರಹಗಳ ಸಾಲವನ್ನೆತ್ತಿ ಪುನಃ ದಂಡು ಸೇರಿಸಿದನು. ಆ ವೇಳೆಗೆ ಅಲ್ಲಲ್ಲಿ ಚದರಿದ್ದ ಆತನ ಇತರ ಸೈನಿಕರೂ ಬಂದು ಸೇರಿದರು. ಉತ್ತರದೇಶದಲ್ಲಿ ಅಹಮ್ಮದ್‌ಷಹ ಅಬ್ದಾಲಿಯೊಂದಿಗೆ ಮರಾಟೆಯ ಸೈನ್ಯಕ್ಕೆ ನಡೆದ ಯುದ್ಧದಲ್ಲಿ, ಮರಾಟೆಯವರಿಗೆ ಪ್ರಾಪ್ತವಾದ ಸಂಪೂರ್ಣ ಅಪಜಯದ ವೃತ್ತಾಂತವು ಖಂಡೇರಾಯನ ಚಿತಾವಣೆಯ ಮೇಲೆ ಬಂದಿದ್ದ ವಿಸಾಜಿಪಂತನಿಗೆ, ತಿಳಿದು ಆತನು ಒಡನೆ ಹಿಂದಿರುಗಿ ಹೋಗಲು ಮನಸ್ಸುಮಾಡಿದನು. ಮಾರ್ಗದಲ್ಲಿ ಆರ್ಕಾಟಿನ ನವಾಬನಾದ ಮಹಮ್ಮದಲ್ಲಿಯು ಕಾರಣಾಂತರದಿಂದ ಒಪ್ಪಿಸಿದ ಇಪ್ಪತ್ತು ಲಕ್ಷ ದ್ರವ್ಯವನ್ನೂ, ಹೈದರನು ಕೊಟ್ಟ ಮೂರುಲಕ್ಷ ದ್ರವ್ಯವನ್ನೂ ತೆಗೆದುಕೊಂಡು ತೃಪ್ತನಾಗಿ, ಥೊರೆಗಳೊಂದಿಗೆ ಮಾಡಿದ್ದ ಕರಾರನ್ನು ಮಾನಸಿಕಮಾಡಿ ಹೊರಟುಹೋದನು. ಆ ವೇಳೆಗೆ, ಬಂದು ಸೇರಿದ್ದ ತನ್ನ ಸೈನ್ಯವನ್ನೆಲ್ಲಾ ಒಂದೆಡೆ ಸೇರಿಸಿಕೊಂಡು ಹೊರಟು, ಹೈದರನು ಸೋಸಲೆಯ ಬಳಿ ಕಾವೇರೀನದಿಯನ್ನು ದಾಟಿ ನಂಜನಗೂಡಿನ ಒಳಿಗೆ ಬಂದನು. ಈ ಸಂಗತಿಯನ್ನು ತಿಳಿದ ಖಂಡೇರಾಯನು ಸೈನ್ಯಸಮೇತನಾಗಿ ಬಂದು ಅಡ್ಡಗಟ್ಟಿ ಘೋರ ಯುದ್ಧಮಾಡಲು, ಅಲ್ಲಿ ಹೈದರನ ಸೈನ್ಯವು ಪರಾಜಯಹೊಂದಿತು. ಒಡನೆ ಹೈದರನು ಉಪಾಯವನ್ನು ಯೋಚಿಸಿ, ಮಿತಪರಿವಾರದೊಂದಿಗೆ ಕೋಣನೂರಿಗೆ ಹೋಗಿ, ನಂಜರಾಜಯ್ಯನನ್ನು ಕಂಡು-ತಾನು ಆತನಿಗೆ ಮಾಡಿದ ವಿಶ್ವಾಸಘಾತುಕತನವನ್ನು ಒಪ್ಪಿಕೊಂಡು ಕ್ಷಮಾಪಣೆಬೇಡಿ, ಈಗ ತನ್ನನ್ನು ದಯವಿಟ್ಟು ಕಾಪಾಡಬೇಕೆಂದು ಬಹು ವಿನಯದಿಂದ ಕೇಳಿಕೊಂಡನು. ಉಪಾಯ

ಚತುರನಾದ ಹೈದರನ ಉದ್ದೇಶವು ಸಿದ್ಧಿಸಿತು. ಆತನ ಮಾತುಗಳಿಗೆ ಮರು ಳಾಗಿ ನಂಜರಾಜಯ್ಯನು ಖಂಡೇರಾಯನನ್ನು ಎದುರಿಸಲು ಸೈನ್ಯದೊಂದಿಗೆ ಹೊರಟು, ಕಟ್ಟೇ ಮಳಲುವಾಡಿಯ ಬಳಿಗೆ ಬಂದನು. ಆತನೂ ಶ್ರೀರಂಗ ಪಟ್ಟಣದ ಸೈನ್ಯವನ್ನು ಶೀಘ್ರವಾಗಿ ಅಲ್ಲಿಗೆ ತಂದು ಎದುರಿಸಿದುದರಿಂದ, ನಂಜನಗೂಡಿನ ಬಳಿ ತಂಗಿದ್ದ ಹೈದರನ ಸೈನ್ಯವು, ಆ ವೇಳೆಗೆ ಅಲ್ಲಿಗೆ ಬಂ ದೊದಗಲು ಅನುಕೂಲವಾಗಲಿಲ್ಲ. ಹೈದರನು ಕಣ್ಣುಕಣ್ಣು ಬಿಡುವಂತೆ ಆಯಿತು. ಆಗ ನವಾಬನು - ಈಗ ದಂಡೋಪಾಯಕ್ಕೆ ಕಾಲವಲ್ಲವೆಂದು ಯೋಚಿಸಿ, ಭೇದೋಪಾಯವನ್ನು ನೆನೆದು, ನಂಜರಾಜಯ್ಯನ ಹೆಸರಿನಲ್ಲಿ, ಖಂಡೇರಾಯನ ಕಡೆಯ ಪ್ರಮುಖ ಜನರಿಗೆ ಪಿತೂರಿ ಕಾಗದಗಳನ್ನು ಬರೆಸಿ, ಅವು ಆತನ ಜೋರಪಹರೆಯವರ ಕೈಗೆ ಸಿಕ್ಕುವಂತೆ ಏರ್ಪಡಿಸಿದನು. ಖಂ ಡೇರಾಯನು ಹಾಗೆ ಸಿಕ್ಕ ಕಾಗದಗಳನ್ನು ನೋಡಲು, ಅವುಗಳಲ್ಲಿ ತನ್ನ ಕಡೆ ಯ ಸರದಾರರು, ನಂಜರಾಜಯ್ಯನಿಂದ ಲಂಚತಿಂದು, ತನ್ನನ್ನು ಹಿಡಿದು ಕೊಡುವ ವಿಷಯದಲ್ಲಿ ಪ್ರೇರಿತರಾಗಿದ್ದಾರೆಂದು ಬೋಧವಾಗುವಂತಿದ್ದುವು. ಒಡನೆ ಆತನು ಗಾಬರಿಯಾಗಿ ಪ್ರಾಣಭಯದಿಂದ ಎಲ್ಲವನ್ನೂ ಹಾಗೆಯೇ ಬಿಟ್ಟು ಶ್ರೀರಂಗಪಟ್ಟಣಕ್ಕೆ ಓಡಿಹೋದನು.

ಮುಂದೆ ಕೇಳುವುದೇನು? ಹೈದರಲ್ಲಿಯು ಆ ಸೈನ್ಯದ ಮೇಲೆ ಬಿದ್ದು ಲೂಟಿಮಾಡಿ, ತೋಪು ಗುಂಡು ಮುಂತಾದ ಅನೇಕ ಯುದ್ಧಸಾಮಗ್ರಿಗಳ ನ್ನು ಕೈವಶಮಾಡಿಕೊಂಡನು. ತರುವಾಯ ಕಣಿವೆ ಕೆಳಗೆ ದಂಡೆತ್ತಿ ನಡೆದು ಕೈತಪ್ಪಿಹೋಗಿದ್ದ ಸತ್ಯಮಂಗಲ ಮುಂತಾದ ಪ್ರಾಂತಗಳನ್ನು ಸ್ವಾಧೀನಪಡಿಸಿ ಕೊಂಡನು. ನಂತರ ಶ್ರೀರಂಗಪಟ್ಟಣಕ್ಕೆ ಬಂದು-ತನ್ನ ಚಾಕರನಾಗಿ ದ್ದು ತನಗೇ ದ್ರೋಹಮಾಡಿದ ಖಂಡೇರಾಯನನ್ನು ತನ್ನ ವಶಕ್ಕೆ ಕೊಟ್ಟು, ತನ್ನ ಹಿಂದಿನ ಬಾಕಿಯನ್ನೆಲ್ಲಾ ತೀರಿಸಿಬಿಟ್ಟರೆ ಮುಂದೆ ತಾನು ಎಲ್ಲಾದರೂ ಹೊರಟುಹೋಗುವುದಾಗಿ ಧೊರೆಗಳಿಗೆ ಹೇಳಿ ಕಳುಹಿಸಿದನು. ಧೊರೆಗಳು ಆ ಸಂದರ್ಭದಲ್ಲಿ ಏನುಮಾಡಬಹುದೆಂದು ತಮ್ಮ ಆಪ್ತರೊಂದಿಗೆ ಯೋಚಿಸಿ ದರು. - ಈಗ ಹೈದರನನ್ನು ಬಿಟ್ಟರೆ ಆತನು ಮರಾಟೆಯವರೊಂದಿಗೆ ಸೇರಿ, ಮುಂದೆ ತಮ್ಮ ಪ್ರಾಣಕ್ಕೇ ಉರುಳಾಗಿ ಪರಿಣಮಿಸಬಹುದೆಂದೂ, ಆತನನ್ನು ಹೊರಕ್ಕೆ ಹೋಗಬಿಡಕೂಡದೆಂಗೂ ಸಲಹೆಬಂದಿತು. ಆಗ ಧೊರೆಗಳೂ,

ಅಂತಃಪುರ ಸ್ತ್ರೀ ಜನರೂ ತಮಗೆ ಉಪಕಾರವಾಗಬೇಕೆಂದು ಪಿತೂರಿಯನ್ನೆಬ್ಬಿಸಿದ ಖಂಡೇರಾಯನಿಗೆ ಪ್ರಾಪ್ತವಾದ ದುಸ್ಥಿತಿಗಾಗಿ ಚಿಂತಿಸಿ-'ಖಂಡೇರಾಯನ ಪ್ರಾಣರಕ್ಷಣೆ ಮಾಡುವುದಾಗಿ ಮಾತುಕೊಟ್ಟರೆ ನವಾಬನ ಕರಾರಿಗೆ ಸಮ್ಮತಿಸುವೆವೆಂದು ತಿಳಿಸಿದರು. ಹೈದರನು - 'ಖಂಡೇರಾಯನನ್ನು ಗಿಣಿಯನ್ನು ಸಾಕುವಂತೆ ಸಾಕುತ್ತೇನೆ-ಸಂಶಯಬೇಡ' ಎಂದು ಮಾತುಕೊಟ್ಟು ಅವನನ್ನು ತನ್ನ ಸ್ವಾಧೀನಕ್ಕೆ ಪಡೆದನು. ತರುವಾಯು-ತನಗೆ ಸಲ್ಲಬೇಕಾಗಿದ್ದ ಹಣಕ್ಕಾಗಿ ತಗಾದೆ ನಡೆಯಿತು. ಹೈದರಲ್ಲಿಯ ನೌಕರರೂ, ಸೈನಿಕರೂ, ಕೋಟೆಯ ಒಳ ಹೊರ ಪ್ರಾಂತಗಳನ್ನೂ ಅರಮನೆಯನ್ನೂ ಆಕ್ರಮಿಸಿ ಅತ್ಯಂತ ಆರ್ಭಟ ಮಾಡತೊಡಗಿದರು. ಹೈದರನ ಆ ಕಾಟವನ್ನು ಸಹಿಸಲಾರದೆ, ಧೊರೆಗಳು ಅರಮನೆಯ ಖರ್ಚಿಗೆಂದು ಮೂರುಲಕ್ಷ ವರಹಗಳ ಸೀಮೆಯನ್ನು ಎಂಗಡಿಸಿಕೊಂಡು, ಮಿಕ್ಕ ಸೀಮೆಯನ್ನೆಲ್ಲ ಆತನಿಗೆ ವಹಿಸಿಕೊಟ್ಟುಬಿಟ್ಟರು. ಹೈದರಲ್ಲಿಯು ಖಂಡೇರಾಯನನ್ನು ಒಂದು ಕಬ್ಬಿಣದ ಪಂಜರದಲ್ಲಿ ಕೂಡಿ, ಬೆಂಗಳೂರಿಗೆ ಕಳುಹಿಸಿ, ಅಲ್ಲಿ ತಾನು ಮಾತುಕೊಟ್ಟಿದ್ದಂತೆ ಒರೀ ಅನ್ನವನ್ನೂ ಹಾಲನ್ನೂ ಕೊಡಿಸುತ್ತಾ ಬಂದನು. ಇದರಿಂದ ಆ ದುರ್ದೈವಿಯು ಮುಂದೆ ಕೆಲವು ದಿನಗಳಲ್ಲೇ ಮೃತನಾದನು. ಹೈದರನು ಶ್ರೀರಂಗಪಟ್ಟಣದ ಕೋಟೆಯ ಕೆಲಸಕ್ಕೆ ತನ್ನ ಭಾವಮೈದುನ ಮಖದುಂ ಅಲ್ಲಿಯನ್ನೇ ನೇಮಿಸಿ, ಎಲ್ಲವನ್ನೂ ಸುವ್ಯವಸ್ಥೆಯಲ್ಲಿಟ್ಟು ಬೆಂಗಳೂರಿಗೆ ನಡೆದನು. ಹೀಗೆ ೧೭೪೯ನೆಯ ಸಂ|| ದಲ್ಲಿ ಕೇವಲ ಒಬ್ಬ ಸೈನಿಕನಾಗಿ, ಜನರ ದೃಷ್ಟಿಗೆ ಬಿದ್ದ ಹೈದರಲ್ಲಿಯು, ಮುಂದೆ ಹನ್ನೆರಡು ವರ್ಷಗಳೊಳಗಾಗಿ ಒಂದು ಸಂಸ್ಥಾನವನ್ನೇ ಗಳಿಸಿ ನವಾಬನೆನಿಸಿಕೊಂಡನು. ಈ ಲಾಭವು ಆಚಿಂತ್ಯವಲ್ಲವೆ?



## ಅಧ್ಯಾಯ ೪ "ರಾಜ್ಯವಿಸ್ತಾರ"

ರಾಜ್ಯಾಧಿಪತ್ಯವು ಕೇವಲ ಕ್ಲೇಶಮಯವಾದುದು. ರಾಜರ ಅಧಿಕಾರಿಗಳ ಅಥವ ಐಶ್ವರ್ಯವಂತರ ಬಾಹ್ಯಾಡಂಬರ, ವಸ್ತ್ರಭೂಷಣಾದಿ ಅಲಂ

ಕಾರ. ಸುಖದ ತೋರಿಕೆಯಿಂದ ಇರುವ ಅವರ ಸಂಪತ್ತು ಸೌಭಾಗ್ಯಗಳು, ಹಲವುವೇಳೆ ಬಹು ಮೋಹಕವಾಗಿ ತೋರುವ ಅವರ ಕೃತ್ರಿಮ ದೇಹ ಸೌಂದರ್ಯ, ಅವರಿಗಿರುವ ವಾಹನಾದಿಗಳ ಅನುಕೂಲತೆ ಮುಂತಾದುವು ಗಳನ್ನು ನೋಡಿದರೆ ಯಾವನಾದರೂ “ಅಂತಹ ಸಂಪತ್ತು ಸೌಭಾಗ್ಯಗಳು ನನಗೂ ಇದ್ದರೆ ನಾನೂ ಸುಖವಾಗಿರುತ್ತಿದ್ದೆನಲ್ಲವೆ! ಹತವಿಧಿಯು ನನ್ನನ್ನು ದರಿದ್ರನನ್ನಾಗಿ ಸೃಷ್ಟಿಸಿತು” ಎಂದು ಮರುಗದಿರಲು ಸಾಧ್ಯವೇ! ಆದರೆ ಪ್ರಪಂಚದ ನಿಶ್ಚಯ ತತ್ತ್ವವನ್ನು ಕುರಿತು ವಿಚಾರಿಸುವ ಮನುಷ್ಯನಿಗೆ, ಬಾಹ್ಯಕ್ಕೆ ಅತಿಶಯ ಆಡಂಬರವಾಗಿ ಕಾಣಿಸುವ ಐಶ್ವರ್ಯ ಅಧಿಕಾರ ಮುಂ ದುವುಗಳ ಒಳಗಡೆ ಎಷ್ಟು ಬಗೆಯ-ಎಂತಹ ಅಗಾಧ ಕ್ಲೇಶಪರ್ವತವು ಅಡಗಿ ದೃಷ್ಟಿ ಗೋಚರವಾಗದೆ ಇದೆ ಎಂಬುದು ತೋರದಿರದು. ‘ಬಾಹ್ಯದರೂಪೂ ವೈಭವವೂ ನೇತ್ರಾನಂದಕರವಾಗಿ ಹೊಳೆಯುತ್ತಿರಲು, ಒಳಗೆ ಅಡಗಿರುವ ಹೊಲಸನ್ನೇ ಜ್ಞಾಪಿಸಿಗೊಂಡು ಸಂಕಟಪಡುವುದೇಕೆ? ಉತ್ಸಾಹಗೊಳ್ಳ ದೆ-ಸಂತೋಷಪಡದೆ ಇರಲೇಕೆ?’ ಎಂದು ಕೆಲವರು ಭಾವಿಸಬಹುದು. ಆದರೆ ಲೋಕದಲ್ಲಿ ಐಶ್ವರ್ಯವೇ ಮುಖ್ಯವಾದುದಲ್ಲ. ಅದನ್ನು ಗಳಿಸುವು ದೊಂದೇ ಜೀವನದ ಧ್ಯೇಯವಲ್ಲ. ಯೋಚಿಸ ಬೇಕಾದ ಇತರ ವಿಚಾರಗಳೂ ಇವೆ. ಲೋಕದ ಐಶ್ವರ್ಯಸ್ವಭಾವವು ವಿಚಿತ್ರವಾಗಿದೆ. ಒಂದು ಸ್ಥಳ ದಲ್ಲಿ ಮಣ್ಣು ರಾಸಿಯಾಗಿ ಬಿದ್ದಿದೆಯೆಂದು ಭಾವಿಸೋಣ? ಹಾಗೆ ಆ ಸ್ಥಳ ದಲ್ಲಿ ರಾಸಿಯಾಗಿ ಬಿದ್ದಿರಲು, ಅದಕ್ಕೆ ಬೇಕಾದ ಮಣ್ಣು ಎರಡು ಬಗೆ ಯಿಂದ ಬಂದಿರಬೇಕಲ್ಲವೆ! ಒಂದನೆಯದಾಗಿ, ಸುತ್ತಲೂ ಸಮತಳವಾಗಿರುವ ಸ್ಥಳದಿಂದ ಒಂದೇ ಸಮನಾಗಿ ಬಾಚಿ ಒಂದೆಡೆ ಗುಡ್ಡೆ ಮಾಡಿದ್ದಾಗಿರಬೇಕು. ಹಾಗಲ್ಲದಿದ್ದರೆ, ಒಂದೆಡೆ ಆಳಕ್ಕೆ ತೋಡಿ, ಹಳ್ಳಮಾಡಿ ಅದನ್ನು ತಂದು ಗುಡ್ಡೆಯಾಗಿ ಹಾಕಿದ್ದಾಗಿರಬೇಕು. ಅಲ್ಲವೆ? ಹಾಗೆಯೇ ಮನುಷ್ಯನೂ ಐಶ್ವರ್ಯವಂತನಾಗಲು, ಒಂದನೆಯದಾಗಿ ಸುತ್ತುಮುತ್ತಲಿನವರ ಬಾಯ್ಬ ಡಿದು ಅವರಿಗೆ ಕಂಡಂತೆ ಕಾಣದಂತೆ, ಲಂಚ ಮೋಸ ದುರ್ವ್ಯಾಜ್ಯ ಇವು ಗಳ ಮೂಲಕ ಹಣವನ್ನು ಬಾಚಿಕೊಂಡು, ತನ್ನ ಮನೆಯನ್ನು ತುಂಬಿ ಕೊಂಡಿರಬೇಕು. ಅಥವ ಒಬ್ಬನ ಇಲ್ಲವೆ ಹಲವರ ಜೀವನವನ್ನೇ ಮುಳು ಗಿಸಿ, ತೊಡೆದು ಬಾಚಿಕೊಂಡು ತಂದು ತನ್ನ ಮನೆಯನ್ನು ತುಂಬಿಕೊಂಡಿರ

ಬೇಕು. ಎಂತೂ ಒಂದು ಕಡೆ ಗುಂಡಿ ಬಿದ್ದಲ್ಲದೆ ಮತ್ತೊಂದೆಡೆ ಗುಡ್ಡೆ ಬೀಳದು. ಒಂದು ಕಡೆ ಗುಡ್ಡೆ ಬಿದ್ದುದು ದೃಷ್ಟಿಗೋಚರವಾಯಿತೆಂದರ ಮತ್ತೆಲ್ಲೋ ಒಂದೆಡೆಯಲ್ಲಿ, ಗುಂಡಿ ಬಿದ್ದಿದೆಯೆಂಬುದು ಸ್ವತಃಸಿದ್ಧ !

ಹಾಗೆ ಸಂಪಾದಿಸುವ ಐಶ್ವರ್ಯವು, ಸಂಪಾದನೆಯ ಕಾಲದಲ್ಲಿ ಅವನಿಗೂ ಇತರರಿಗೂ ಎಷ್ಟು ಬಗೆಯ ಕ್ಲೇಶವನ್ನು ಉಂಟುಮಾಡಿರಬಹುದೆಂಬುದನ್ನು ವಿವರಿಸಬೇಕೇ ? ದಂಭದರ್ಪಗಳಿಂದ ಸಂಪತ್ತನ್ನು ಗಳಿಸಬೇಕೆಂದು ಧಾಳಿಮಾಡುವ ಮದಾಂಧರ ಕಾಲ್ತುಳಿತಕ್ಕೆ ಸಿಕ್ಕಿ ಬಾಯಿಲ್ಲದ ಬಡವರೂ ಶಕ್ತಿಹೀನರೂ ಎಷ್ಟುಬಗೆಯ ವಿಚಿತ್ರಸಂಕಟಕ್ಕೆ ಒಳಪಟ್ಟು ನರಳಿ ನಿಟ್ಟುಸಿರು ಬಿಡುವರೆಂಬುದನ್ನು ತಿಳಿಸಬೇಕೇ ! ಆದಿಯಿಂದ ಈವರೆಗಿನ ಪ್ರಪಂಚ ಚರಿತ್ರೆಯು ಇದಕ್ಕೆ ಅಸಂಖ್ಯ ಉದಾಹರಣೆಗಳನ್ನು ಕೊಡುತ್ತಿದೆ. ಕೆಲ ಮಾತ್ರವೂ ಸತ್ಯಧರ್ಮನ್ಯಾಯಗಳನ್ನು ಗಮನಿಸದ ಇವರಿಗೆ ಶಿಕ್ಷೆಯೇ ಇಲ್ಲವೇ ! ಅವರ ಐಶ್ವರ್ಯ ಅಧಿಕಾರಗಳು ಅಪ್ರತಿಹತವಾಗಿ ಊರ್ಜಿತವಾಗುವುವೇ ಎಂದರೆ-ಸತ್ತ ದನದ ಚರ್ಮದಿಂದ ಮಾಡಲ್ಪಟ್ಟ ತಿದಿಯೇ, ತಾನು ಬಿಡುವ ಉಸಿರಿನಿಂದ ಕಬ್ಬಿಣದಂತಹ ಕಠಿಣ ಲೋಹವನ್ನಾದರೂ ಕರಗಿಸಿ ನೀರು ಮಾಡಲು ಶಕ್ತವಾಗಿರುವಲ್ಲಿ, ಅಂತಃಕರಣಪೂರ್ವಕವಾಗಿರುವ ಸಚೇತನ ಮನುಷ್ಯಪ್ರಾಣಿಯು ಅನ್ಯಾಯ ಅಸತ್ಯ ಮೋಸ ಕಾಪಟ್ಯ ದಬ್ಬಾಳಿಕೆ ಮುಂತಾದ ದಂಭ ದರ್ಪಗಳ ಉಪಟಳಕ್ಕೆ ಸಿಕ್ಕು ಮರುಗಿ ಬಿಡುತ್ತಿರುವ ನಿಟ್ಟುಸಿರು ಕಲ್ಲನ್ನಾದರೂ ಕರಗಿಸದೆ ಬಿಡುವುದೆ ? ಇಂದಲ್ಲ-ನಾಳೆ ! ಎಂತೂ ಮನಃಪೂರ್ವಕ ಮಾಡಿದ ಒಂದು ಕಾರ್ಯದ ಫಲವನ್ನು ಅನುಭವಿಸದಿದ್ದರೆ ವಿಧಿಯೇ ಇಲ್ಲ. ಕಣ್ಣಿದ್ದವರು ತಮ್ಮ ಸುತ್ತುಮುತ್ತಲಿರುವ ಪ್ರಪಂಚದ ವಿಚಾರವನ್ನು ಚೆನ್ನಾಗಿ ನೋಡಿ ಬುದ್ಧಿ ಕಲಿತುಕೊಳ್ಳಬೇಕು, ದಿವಾಂಧರು ಎದುರಿಗೇ ಇರುವ ಕೂಪದಲ್ಲಿ ಬಿದ್ದರೆ ಅದರಲ್ಲಿ ಆಶ್ಚರ್ಯವೇನಿದೆ ?

ಹೀಗೆ ಹೇಳಿದುದರಿಂದ-ಧರ್ಮಮಾರ್ಗ ನ್ಯಾಯಮಾರ್ಗಗಳಿಂದ ದ್ರವ್ಯವು ಲಭ್ಯವಾಗುವ ಮಾರ್ಗವೇ ಇಲ್ಲವೆ; ಪ್ರಪಂಚದಲ್ಲಿರುವ ಐಶ್ವರ್ಯವಂತರೆಲ್ಲರೂ ಪರರ ಮನೆಯನ್ನು ಮುಳುಗಿಸಿಯೇ ಆಸ್ತಿಯನ್ನು ಸಂಗ್ರಹಿಸಿದವರೇ-ಎಂದು ಯಾರಾದರೂ ಕೇಳಬಹುದು ! ಇದಕ್ಕೆ ಪ್ರತ್ಯುತ್ತರವಾಗಿ ನಾವೊಂದು ಮಾತನ್ನು ಹೇಳುತ್ತೇವೆ. ಐಶ್ವರ್ಯವು ಕೆಟ್ಟದಲ್ಲ. ಅದನ್ನು

ಗಳಿಸುವುದು ಅಪರಾಧವಲ್ಲ. ಪಾತಕವಲ್ಲ. ಮನುಷ್ಯನು ಲೋಭ ಮೋಹಗಳಿಂದ ಪೀಡಿತನಾಗದಿದ್ದರೆ ನ್ಯಾಯಮಾರ್ಗದಿಂದಲೇ - ಸ್ವಧರ್ಮಾನುವರ್ತನೆಯಿಂದಲೇ ದ್ರವ್ಯ ಸಂಗ್ರಹಣಮಾಡಲು ಅವಕಾಶವುಂಟು. ಆದರೆ, ಅರಿಷಡ್ವರ್ಗಗಳಿಗೆ ದಾಸನಾಗಿ, ಪರರಿಗೆ ಅಸಹನೀಯ ಕಿರುಕುಳಗಳನ್ನು ತಂದಿತ್ತು ಗಳಿಸುವ ಐಶ್ವರ್ಯವು ಮಾತ್ರ ಬಂಧಕಾರಿಯಾಗದಿರಲಾರದು. ಬರುವಾಗ ಪರರಿಗೆ ಅದು ಎಷ್ಟು ದುಃಖವನ್ನುಂಟುಮಾಡಿತೋ ಅದಕ್ಕಿಂತ ದಶಾಧಿಕ ದುಃಖ ಕೊಟ್ಟಲ್ಲದೆ ಹೊರಹೊರಡದು. ಯಾವ ಮಾರ್ಗದಿಂದ ಲಭ್ಯವಾಯಿತೋ ಅದೇ ಮಾರ್ಗದಿಂದಲೇ ನಾಶವಾಗುವುದೆಂಬುದೂ ಸಿದ್ಧ. ಯಾವ ಉಪಾಯಗಳಿಂದ ಗಳಿಸಲ್ಪಟ್ಟಿತೋ ಅದೇ ಉಪಾಯಗಳಿಂದಲೇ ವ್ಯಯಗೊಳ್ಳುವುದಾದರೂ ತಪ್ಪಿದ್ದಲ್ಲ. ಇದು ವೃಥಾಲಾಪವೆನ್ನಲಾಗದು. ಕ್ರಿಯೆಗೆ ತಕ್ಕ ಪ್ರತಿಕ್ರಿಯೆ. ಧ್ವನಿಗೆ ತಕ್ಕ ಪ್ರತಿಧ್ವನಿ. ಅಷ್ಟೇ!

ನಮ್ಮ ಕಥಾನಾಯಕನಿಗೆ ಮೇಲ್ಕಂಡಂತೆ ಶ್ರೀರಂಗಪಟ್ಟಣದಲ್ಲಿ ರಾಜ್ಯಲಾಭವಾಯಿತಷ್ಟೆ! ಆದರೆ ತೃಪ್ತಿಯುಂಟಾಯಿತೇನು? ಅಲ್ಲಿ ಉಂಟಾದ ಜಯಕ್ಕೆ ಪ್ರತಿಯಾಗಿ ಬೇರೊಂದೆಡೆಯಲ್ಲಿ ಭಯವು ಸಿದ್ಧವಾಗಿದ್ದಿತು. ದಖನಿನ ಸುಬೇದಾರನಾದ ಸಲಬತ್‌ಜಂಗನು ರಾಜ್ಯಲಾಭಾಕಾಂಕ್ಷಿಯಾಗಿ ಸೀರ್ಯವನ್ನು ಸಾಧಿಸಬೇಕೆಂದು ಫೌಜಿನೊಡನೆ ಬಂದನು. ಸೀರ್ಯವು ಆಗ ಮರಾಟೆಯವರಿಗೆ ಸೇರಿದ್ದಿತು. ಹಾಗೆ ಬಂದ ಸಲಬತ್‌ಜಂಗನ ದಂಡಿನಿಂದ ತನ್ನ ಬೆಂಗಳೂರಿಗೆ ಏನಾದರೂ ಅಪಾಯ ಸಂಭವಿಸೀತೋ ಎಂದು ಶಂಕಿಸಿ, ಹೈದರನು ಪೂರ್ವಾಧ್ಯಾಯದ ಕೊನೆಯಲ್ಲಿ ಹೇಳಿದಂತೆ ಬೆಂಗಳೂರಿಗೆ ಬಂದನು. ಜಂಗನ ಸೈನ್ಯವು ಆ ವೇಳೆಗೆ ನೇರವಾಗಿ, ಸೀರ್ಯದ ಮಾರ್ಗವಾಗಿ ಹೊಸಕೋಟೆಗೆ ಸಾಗಿರಲು, ಹೈದರಲ್ಲಿಯು ತನ್ನ ಕಡೆಯ ರಾಯಭಾರಿಯನ್ನು ಸಂಧಿಗಾಗಿ ಕಳುಹಿಸಿ ಎರಡು ಲಕ್ಷ ರೂಪಾಯಿಗಳನ್ನು ಕೊಟ್ಟು ಅವನ ಸ್ನೇಹಮಾಡಿಕೊಂಡನು. ಸುಪ್ರೀತನಾದ ಸಲಬತನು ಹೈದರನನ್ನು ಗೌರವಿಸಿ, ಆತನಿಗೆ ಸೀರ್ಯದ ನವಾಬ್‌ಗಿರಿಯನ್ನು ಕೊಟ್ಟು, ಧೊರೆಗಳು ಕೊಟ್ಟಿದ್ದ 'ನವಾಬ್ ಹೈದರಲ್ಲೀ ಖಾನ್ ಬಹದ್ದೂರ್' ಎಂಬ ಬಿರುದನ್ನು ಸ್ಥಿರಗೊಳಿಸಿದನು. ಸೀರ್ಯದ ನವಾಬ್‌ಗಿರಿಯನ್ನು ತನಗೆ ಕೊಡುವ ಅಧಿಕಾರವು ಜಂಗನಿಗೆ ಎಲ್ಲಿಯದೆಂಬ ಸಂಗತಿಯು ಹೈದರನಿಗೆ ತಿಳಿದಿದ್ದರೂ, ಸಮಯದಲ್ಲಿ

ಅನುಕೂಲಿಸ ಬಹುದೆಂದು ಮಂತ್ರ ಚತುರನಾದ ಆತನು ಅದನ್ನು ಅಂಗೀಕರಿಸದಿರಲಿಲ್ಲ. ತರುವಾಯ ಅವನ ಸಹಾಯಕ್ಕಾಗಿ ಹೊರಟು ಹೊಸಕೋಟೆಯನ್ನು ಜಯಿಸಿ ಸ್ವಾಧೀನಗೊಂಡನು. ಅನಂತರ ದೊಡ್ಡಬಳ್ಳಾಪುರದ ಮೇಲೆ ಕಣ್ಣುಬಿದ್ದಿತು. ಅಲ್ಲಿ ಪೂರ್ವದಲ್ಲಿ ಹೈದರನಿಗೂ ಆತನ ತಾಯಿ ಮತ್ತು ಅಣ್ಣನಿಗೂ ಚಿತ್ರಹಿಂಸೆಗೊಳಿಸಿದ್ದ ಅಬ್ಬಾಸ್‌ಕುಲಿಖಾನನಿದ್ದನಲ್ಲವೆ! ಅವನು ಹೈದರಲ್ಲಿಯು ಬರುತ್ತಾನೆಂಬ ವರ್ತಮಾನವನ್ನು ಕೇಳಿ, ಬೆದರಿ ಆರ್ಕಾಟಿಗೆ ಓಡಿಹೋದನು. ದೊಡ್ಡಬಳ್ಳಾಪುರವೂ ಹೈದರಲ್ಲಿಯ ಸ್ವಾಧೀನಕ್ಕೆ ಬಂದಿತು. ತರುವಾಯ ಆ ವರೆಗೆ ಸೀರ್ಯಕ್ಕೆ ನಾಮಮಾತ್ರ ನವಾಬನಾಗಿದ್ದ ಹೈದರಲ್ಲಿಯು ಆವೂರನ್ನು ೧೭೬೨ ರಲ್ಲಿ ಕ್ರಮವಾಗಿ ಜಯಿಸಿ, ಸ್ವಾಧೀನಗೊಳಿಸಿಗೊಂಡನು. ಹಾಗೆಯೇ ಚಿಕ್ಕಬಳ್ಳಾಪುರದ ಪಾಳೆಯಗಾರನನ್ನು ನಂದೀದುರ್ಗದಲ್ಲಿ ಮುತ್ತಿ ಜಯಿಸಿ, ಆ ಸ್ಥಳಗಳನ್ನೂ ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಸೀರ್ಯದ ಆಡಳಿತಕ್ಕೆ ಸೇರಿದ ಹರಪನಹಳ್ಳಿ ರಾಯದುರ್ಗ ಚಿತ್ರದುರ್ಗ ಮುಂತಾದುವುಗಳ ಪಾಳೆಯಗಾರರಿಂದ ಪೊಗದಿಯ ಹಣವನ್ನು ಸಂಗ್ರಹಿಸಿ ತಂದನು.

೧೭೬೩ ನೆಯ ಸಂ|| ದಲ್ಲಿ ನವಾಬ ಹೈದರಲ್ಲಿಗೆ ಬಿದನೂರು ಸಂಸ್ಥಾನದ ಮೇಲೆ ಗಮನ ಬಿದ್ದಿತು. ಬಿದನೂರಿನಲ್ಲಿ ಹಿಂದೆ ಶಿವಪ್ಪನಾಯಕನೆಂಬ ಮಹಾಶಕ್ತನಾದ ಧೊರೆಯೊಬ್ಬನು ರಾಜ್ಯವಾಳಿ ಹೆಸರುವಾಸಿಯಾಗಿದ್ದನು. ಆತನ ವಂಶದಲ್ಲೇ ಜನಿಸಿ ರಾಜನಾಗಿದ್ದ ಬಸವಪ್ಪನಾಯಕನೆಂಬುವನು ೧೭೫೫ ನೆಯ ಸಂ|| ದಲ್ಲಿ ತಾನು ಮೃತನಾಗುವ ವೇಳೆಯಲ್ಲಿ ಚನ್ನಬಸಪ್ಪನಾಯಕನೆಂಬಾತನನ್ನು ದತ್ತು ತೆಗೆದುಕೊಂಡಿದ್ದನು. ಈ ದತ್ತು ಮಗನು ಅವನ ರಾಣಿಯಾದ ವೀರಮ್ಮಾಜಿಗೆ ಸಮ್ಮತಿಯಿಲ್ಲದೆ, ಅವಳು ದುರ್ವ್ಯಾಪಾರಕ್ಕೆ ಬಿದ್ದು ನಂಜಯ್ಯನೆಂಬೊಬ್ಬನನ್ನು ಸ್ನೇಹಿಸಿ ಚನ್ನಬಸಪ್ಪನಾಯಕನಿಗೆ ಎಣ್ಣೆಯನ್ನೊತ್ತುತ್ತಿದ್ದ ಜಟ್ಟಿಗೆ ಲಂಚಕೊಟ್ಟು ಅವನ ಕುತ್ತಿಗೆಯನ್ನು ಮುರಿಸಿ ಕೊಲ್ಲಿಸಿದನು. ಆ ಸಮಯದಲ್ಲೇ ಮತ್ತೊಬ್ಬನು ತಾನೇ ಚನ್ನಬಸಪ್ಪನೆಂದು ಹೇಳಿಕೊಂಡು, ತನಗೆ ರಾಜ್ಯಕೊಡಿಸಬೇಕೆಂದು ಹೈದರನ ಮರೆಹೊಕ್ಕನು. ಮಹಾ ಮಂತ್ರದಕ್ಷನಾದ ಹೈದರನು ಈ ಪರಿಸ್ಥಿತಿಯ

ನ್ನೆಲ್ಲಾ ಯೋಚಿಸಿ ಚಿತ್ರದುರ್ಗದ ಮದಕರಿನಾಯಕನನ್ನು ಸಂಗಡ ಕರೆದು ಕೊಂಡು ಬಿದನೂರು ರಾಜ್ಯದಮೇಲೆ ಧಾಳಿಯಿಟ್ಟನು.

ಈ ಪ್ರಯಾಣದಲ್ಲೇ ಆತನಿಗೆ ಶಿವಮೊಗ್ಗೆಯೂ ಸ್ವಾಧೀನವಾಗಿ ಅಲ್ಲಿ ಒಂದುಲಕ್ಷ ವರಹಗಳ ಭಂಡಾರವು ಲಭ್ಯವಾಯಿತು. ಕುಂಸಿಯ ಬಳಿ ಇದ್ದಾಗ್ಗೆ ಹಿಂದೆ ಬಸಪ್ಪನಾಯಕನ ಕಾಲದಲ್ಲಿ ಬಿದನೂರಿನಲ್ಲಿ ಸರ್ವಾಧಿಕಾರಿಯಾಗಿದ್ದ ಲಿಂಗಣ್ಣಯ್ಯನೆಂಬವನು ಬಂದು ನವಾಬನನ್ನು ಕಂಡು, ತಾನು ಮೈಸೂರು ಸೈನ್ಯವನ್ನು ಕಳ್ಳದಾರಿಯಿಂದ ಬಿದನೂರಿನೊಳಕ್ಕೆ ಕರೆದುಕೊಂಡು ಹೋಗಿ ಸುಲಭ ರೀತಿಯಿಂದ ಆ ಊರನ್ನು ಸ್ವಾಧೀನಗೊಳಿಸುವನೆಂದು ಭರವಸೆ ಕೊಟ್ಟನು. ಹೈದರನು ಆ ಸಹಾಯವೂ ಕೆಲಸಕ್ಕೆ ಬಂದೀತೆಂದು ಅವನನ್ನೂ ಕರೆದುಕೊಂಡು ಮುಂದರಿಸಿದನು. ನವಾಬನ ಪ್ರಚಂಡಸೈನ್ಯವು ತನ್ನ ರಾಜ್ಯದಮೇಲೆ ದಂಡೆತ್ತಿ ಬರುತ್ತಿದೆಯೆಂಬವಾರ್ತೆಯು ತಿಳಿದೊಡನೆಯೇ ರಾಣಿವೀರಮ್ಮಾಜಿಯು ನಡನಡುಗಿ, ಎಪ್ಪತ್ತೆರಡು ಲಕ್ಷ ದ್ರವ್ಯವನ್ನು ಸಮರ್ಪಿಸುವುದಾಗಿಯೂ ತನ್ನ ರಾಜ್ಯದ ಗೋಜಿಗೆ ಬಾರದೆ ಹಿಂದಿರುಗ ಬೇಕೆಂದೂ ಹೇಳಿಕಳುಹಿಸಿದಳು. ಆದರೆ ಆ ಮಾತು ಹೈದರನಿಗೆ ಸಮ್ಮತವಾಗಲಿಲ್ಲ. ಒಡನೆ ವೀರಮ್ಮಾಜಿಯು ಊರಿನಲ್ಲಿದ್ದವರಿಗೆಲ್ಲರಿಗೂ ಕಾಡಿಗೆ ಹೋಗಿ ವಾಸಿಸುವಂತೆ ಹೇಳಿ, ತನ್ನ ಅರಮನೆಗೆ ಬೆಂಕೀ ಹಾಕಿಸಿ ಕೈಗೆ ಸಿಕ್ಕಿದಷ್ಟನ್ನು ದೋಚಿಕೊಂಡು ತನ್ನಪ್ರಿಯನಾದ ನಂಜಯ್ಯನೊಂದಿಗೆ ಬಳ್ಳಾಳರಾಯನ ದುರ್ಗಕ್ಕೆ ಓಡಿಹೋದಳು. ಇತ್ತ ನವಾಬನು ಲಿಂಗಣ್ಣಯ್ಯನ ಸಹಾಯದಿಂದ ಸುಲಭವಾಗಿ ದುರ್ಗ ಪ್ರವೇಶಮಾಡಿ, ಜನಗಳಾರೂ ಇಲ್ಲದೆ ಖಾಲಿಯಾಗಿದ್ದ ಆ ಊರನ್ನು ಲೂಟಿಮಾಡಿಸಲು ಬಿದನೂರು ರಾಜಧಾನಿಯೊಂದರಲ್ಲೇ ಹನ್ನೆರಡು ಕೋಟಿ ರೂಪಾಯಿಗಳಷ್ಟು ನಗದುಹಣವೂ ವಸ್ತ್ರ ಒಡವೆಗಳೂ ದವಸ ಧಾನ್ಯಗಳೂ ದೊರೆತುವು. ನಂತರ ಹೈದರನು ಮಂಗಳೂರು ಪ್ರಾಂತಕ್ಕೆ ಸೈನ್ಯದ ತುಕಡಿಯೊಂದನ್ನು ಕಳುಹಿಸಿ ಆ ಪ್ರಾಂತಗಳನ್ನೂ ಸಾಧಿಸಿದ್ದಲ್ಲದೆ, ವೀರಮ್ಮಾಜಿಯನ್ನು ಸೆರೆಹಿಡಿಸಿ ಅವಳನ್ನೂ, ಮೋಸಗಾರನೆಂದು ತಿಳಿದು ಬಂದ ಚನ್ನಬಸಪ್ಪನನ್ನೂ ಮಧುಗಿರಿಯ ಸೆರೆಮನೆಯಲ್ಲಿಡಿಸಿದನು.

ಬಿದನೂರು ತನ್ನ ಸ್ವಾಧೀನವಾದಮೇಲೆ, ಅದರ ಪೂರ್ವದ ಹೆಸರನ್ನು

ಮಾರ್ಪಡಿಸಿ ಅದಕ್ಕೆ ಹೈದರ್‌ನಗರವೆಂದು ಹೆಸರಿಟ್ಟನು. ಅಲ್ಲೊಂದು ಟಂಕಸಾಲೆಯನ್ನು ಸ್ಥಾಪಿಸಿ, ಆವರೆಗೆ ಪ್ರಚಾರದಲ್ಲಿದ್ದ ಇಕ್ಕೇರಿ ವರಹ ದುರ್ಗೀ ವರಹಗಳಿಗೆ ಪ್ರತಿಯಾಗಿ ಹೈದರಿ ಅಥವ ಬಹದ್ದರಿ ವರಹಗಳೆಂಬ ನಾಣ್ಯಗಳನ್ನು ಮುದ್ರಿಸಿ ದೇಶದಲ್ಲಿ ಅವೇ ಚಲಾವಣೆಯಾಗಬೇಕೆಂದು ಏರ್ಪಡಿಸಿದನು. ತಮ್ಮ ಪ್ರಾಂತವನ್ನು ಆಕ್ರಮಿಸಿ ಹೈದರನು ಅಲ್ಲೇ ನೆಲೆಯಾಗಿ ನಿಂತುದು ಲಿಂಗಣ್ಣಯ್ಯನೇ ಮುಂತಾದ ಅಭಿಮಾನಿಗಳಿಗೆ ಸಹನೆಯಾಗಲಿ ರಲು, ಅವನು ಆ ಪ್ರಾಂತ ದೊಡ್ಡ ದಂಗೆಯನ್ನೆಬ್ಬಿಸಿ ಹೈದರನನ್ನು ಕೊಂದು ರಾಜ್ಯವನ್ನು ಆಕ್ರಮಿಸಬೇಕೆಂದು ಯೋಚಿಸಿದನು. ಈ ಚಳವಳಿಯ ವೃತ್ತಾಂತವು ಪ್ರಧಾನ ವೆಂಕಪ್ಪಯ್ಯನ ಮೂಲಕ ಹೈದರನಿಗೆ ತಿಳಿದುಹೋಯಿತು. ಆತನು ಆ ಕಾಲದಲ್ಲಿ ಜ್ವರಪೀಡಿತನಾಗಿದ್ದುದರಿಂದ ಉಪಾಯದಿಂದ ಕೆಲದಿನಗಳು ಕಾಲಹರಣಮಾಡಿ, ತರುವಾಯ ದರಬಾರಿಗೆ ಬಂದು ಅವರನ್ನೆಲ್ಲಾ ತಾನೇ ಸ್ವತಃ ವಿಚಾರಣೆಮಾಡಿ, ತಪ್ಪಿತಸ್ಥರನ್ನು ಗಲ್ಲಿಗೆ ಹಾಕಿಸಿದ್ದಲ್ಲದೆ, ಗುಮಾನಿ ತೋರಿಬಂದ ಸುಮಾರು ಮುನ್ನೂರು ಜನರನ್ನು ಓಡಿಸಿ, ಊರುಬಾಗಿಲು ರಸ್ತೆ ಸಾಲುಮರ ಮುಂತಾದ ಸ್ಥಳಗಳಲ್ಲಿ ನೇಣುಹಾಕಿಸಿ ಕೊಲ್ಲಿಸಿದನು. ಹೀಗೆ ಜನಗಳಿಗೆ ಹೈದರನಲ್ಲಿ ಭಯಹುಟ್ಟಲು ದೊಂಬಿ ಮುಣಗಿ ಅಲ್ಲಿಯ ಅಧಿಕಾರವು ಸ್ಥಿರಪಡಲು ಅವಕಾಶವಾಯಿತು.

ಇಷ್ಟರಲ್ಲಿ ಇತ್ತ ಮರಾಟೆಯವರು ತಮಗೆ ಸೇರಿದ್ದ ಸೀರ್ಯವನ್ನೂ ಅದಕ್ಕೆ ಪಳಿತವಾದ ಸ್ಥಳಗಳನ್ನೂ ಹೈದರನು ಆಕ್ರಮಿಸಿದನೆಂದು ತಿಳಿದು, ಅವನಮೇಲೆ ದ್ವೇಷಗೊಂಡರು. ಈ ಸಂಗತಿಯನ್ನು ಕೇಳಿದ ಹೈದರನು ಸಂಧಿಗಾಗಿ, ಮಹಮ್ಮದಲ್ಲೀಖಾನನೆಂಬವನನ್ನು ಪುನಸೆಗೆ ಕಳುಹಿಸಿದನು. ಆದರೆ ಅಲ್ಲಿ ಅವನಿಗೆ ಸರಿಯಾದ ಮನ್ನಣೆಯೂ, ಅವನ ಮಾತಿಗೆ ಯೋಗ್ಯ ಪ್ರತ್ಯುತ್ತರವೂ ದೊರೆಯಲಿಲ್ಲವಾದುದರಿಂದ ಹೈದರನು ಮರಾಟೆಯವರ ಸೀಮೆಯಮೇಲೆ ದಂಡೆತ್ತಿದನು. ಕಡಪೆ ಕರ್ನೂಲುಗಳ ನವಾಬರು ಅವನಿಗೆ ಸಹಾಯಮಾಡಲು ಒಪ್ಪಿಕೊಂಡರು. ಮರಾಟೆಯವರ ಆಶ್ರಿತನಾದ ಸವಣೂರು ನವಾಬನು ಎರಡು ಲಕ್ಷ ರೂಪಾಯಿಗಳನ್ನು ಕೈಕೊಟ್ಟು ಆತನ ಧಾಳಿಯನ್ನು ತಪ್ಪಿಸಿಕೊಂಡನು. ಮಾರ್ಗದಲ್ಲೇ ಧಾರವಾಡವೂ ಸ್ವಾಧೀನವಾಯಿತು. ಈ ಸಂಗತಿಯನ್ನು ತಿಳಿದ ಪೇಶ್ವೆಯು ಕೋಪಗೊಂಡು

೧೭೬೪ರಲ್ಲಿ ಬಿದನೂರುಮೇಲೆ ದಂಡೆತ್ತಿದನು. ಆಗ ಹೈದರಲ್ಲಿಯು ಇನ್ನು ಮುಂದೆ ಸವಣೂರು ನವಾಬನನ್ನು ತೊಂದರೆಪಡಿಸುವುದಿಲ್ಲವೆಂದು ಮಾತು ಕೊಟ್ಟು ಮೂವತ್ತೆರಡು ಲಕ್ಷ ದ್ರವ್ಯವನ್ನು ಕಳುಹಿಸಿ ಸಂಧಿಮಾಡಿಕೊಂಡನು. ೧೭೬೬ರಲ್ಲಿ ಮಲೆಯಾಳ ಪ್ರಾಂತದಲ್ಲಿಯ ಕೆಲವು ಸ್ಥಳಗಳು ಹೈದರನ ಸ್ವಾಧೀನವಾದುವು. ನಾಯಮಾರರ ಪ್ರಭುವಾದ ಕಲ್ಲೀಕೋಟೆಯ ಮಾನವಿಕ್ರಮಸಂಬಾತನು ನವಾಬನಿಗೆ ನಾಲ್ಕು ಲಕ್ಷ ದ್ರವ್ಯವನ್ನು ಕೊಡುವುದಾಗಿ ಹೇಳಿದ್ದನು. ಆದರೆ ಹಣವು ಸಕಾಲಕ್ಕೆ ದೊರೆಯಲಿಲ್ಲವಾದುದರಿಂದ ಹೈದರನ ತಗಾದೆಯನ್ನು ಸಹಿಸಲಾರದೆ, ಅವನು ತನ್ನ ಅರಮನೆಗೇ ಬೆಂಕಿ ಹಚ್ಚಿಸಿ ಕುಟುಂಬಸಮೇತ ಅದರಲ್ಲಿ ಭಸ್ಮವಾಗಿಹೋದನು. ನವಾಬನಿಂದ ಕಲ್ಲೀಕೋಟೆಯೂ ಮೈಸೂರು ರಾಜ್ಯಕ್ಕೆ ಸೇರಿಸಿಕೊಳ್ಳಲ್ಪಟ್ಟಿತು. ಈ ಪರಿಸ್ಥಿತಿಯು ಅಲ್ಲಿಯ ನಾಯಮಾರ ಜನರಿಗೆ ಸಮಾಧಾನವಾಗದಿರಲು, ಮಳೆಗಾಲವು ಪ್ರಾರಂಭವಾದೊಡನೆಯೇ ಅವರು ನವಾಬನ ಸೈನಿಕರಿಗೆ ತೊಂದರೆ ಕೊಡಲಾರಂಭಿಸಿದರು. ಹೈದರನು ಆ ವರ್ತಮಾನವನ್ನು ತಿಳಿದು ಬಹುಮಂದಿ ನಾಯಮಾರ ಜನರನ್ನು ಹಿಡಿಸಿ ಗಲ್ಲಿಗೆ ಹಾಕಿಸಿದನು. ಮತ್ತು ಹದಿನೈದು ಸಹಸ್ರ ಜನರನ್ನು ಹಿಡಿಸಿ ಶ್ರೀರಂಗಪಟ್ಟಣಕ್ಕೆ ಕಳುಹಿಸಿದನು. ಅವರಲ್ಲಿ ಮಾರ್ಗಾಯಾಸದಿಂದಲೂ, ವಾಯುಗುಣವು ಒಗ್ಗದಿದ್ದುದರಿಂದಲೂ ಎಲ್ಲರೂ ಮಾರ್ಗದಲ್ಲೇ ಸತ್ತು, ಇನ್ನೂರು ಜನರು ಮಾತ್ರವೇ ಬಂದು ಪಟ್ಟಣವನ್ನು ಸೇರಿದರು. ಅಷ್ಟರಲ್ಲಿ ಇತ್ತ ಧೊರೆಗಳಾಗಿದ್ದ ಚಿಕ್ಕ ಕೃಷ್ಣರಾಜ ಒಡೆಯರು ಮೃತರಾದರೆಂಬ ವಾರ್ತೆಯು ತಲುಪಿತು. ಹೈದರಲ್ಲಿಯು ಅವರ ಎರಡನೆಯ ಮಗನಾದ ಹದಿನೆಂಟುವರ್ಷ ವಯಸ್ಸಿನ ನಂಜರಾಜನೆಂಬಾತನಿಗೆ ಪಟ್ಟಕಟ್ಟುವಂತೆ ಸಮಾಚಾರವನ್ನು ಕಳುಹಿಸಿದನು. ಆದರೆ ೧೭೬೭ನೆಯ ಸಂ|ದಲ್ಲಿ ರಾಜಧಾನಿಗೆ ಹಿಂದಿರುಗಿದಾಗ, ನಂಜರಾಜನು ತನಗೆ ವಿಧೇಯತೆಯಿಂದ ನಡೆದುಕೊಳ್ಳತಕ್ಕನಲ್ಲವೆಂದು ತೋರಿಬಂದುದರಿಂದ ಅವರಿಗೆ ರಾಜರಿಗಾಗಿ ಬಿಡಿಸಿಕೊಟ್ಟಿದ್ದ ಮೂರುಲಕ್ಷದ ಗಡಿಗಳನ್ನೂ ಆಕ್ರಮಿಸಿದ್ದಲ್ಲದೆ, ಅರಮನೆಯಲ್ಲಿ ರಾಜಸ್ತ್ರೀಯರ ಮೈಮೇಲಿದ್ದ ಆಭರಣಗಳನ್ನು ಮಾತ್ರ ಬಿಟ್ಟು, ಮಿಕ್ಕ ಬೆಲೆಬಾಳುವ ಸಮಸ್ತ ವಸ್ತುಗಳನ್ನೂ ಬಾಚಿಕೊಂಡು, ಅರಮನೆಯ ಹಿಂದೂ ಸೇವಕರನ್ನೂ ಪಹರೆಯವರನ್ನೂ ತಪ್ಪಿಸಿ ಆ ಉದ್ಯೋಗ

ಗಳಿಗೆ ತನ್ನ ಕಡೆಯ ಜನಗಳನ್ನೇ ನಿಯಮಿಸಿದನು. ರಾಜ್ಯವು ವಿವಿಧಮಾರ್ಗ ಗಳಿಂದ ವಿಸ್ತರಿಸಲ್ಪಟ್ಟಿತು. ಹೀಗೆಸಂಪಾದನೆಯ ಮಾರ್ಗವು ದೃಷ್ಟಿ ಗೋಚರವಾಗದೆ, ಸಂಪಾದಿತವಾದಮೇಲೆ ಕಾಣುವ ಐಶ್ವರ್ಯದ-ಆಡಂಬ ರದ ಹೊಳಪು ಮಾತ್ರ ಕಣ್ಣಿಗೆ ಬಿದ್ದರೆ, ಅದು ಮೋಹಕವಾಗದೆ ಇದ್ದೀತೆ ? ಸಂಪಾದನೆಯ ಸಮಯದಲ್ಲಿ ಪಡಬೇಕಾದ ಕಷ್ಟವೂ-ಮನಃಕ್ಲೇಶವೂ ಪರಿ ಚಯವಿಲ್ಲದಿದ್ದರೆ, ಅಂತಹ ಐಶ್ವರ್ಯವನ್ನು ಅನುಭವಿಸಿ ಸುಖಪಡುವ ವಿಷ ಯದಲ್ಲಿ ಯಾರಿಗೆ ತಾನೆ ಆಸೆಯುಂಟಾಗದೆ ಇದ್ದೀತು ?



## ಅಧ್ಯಾಯ ೫. "ಯುದ್ಧಜೀವನ"

ನವಾಬ್ ಹೈದರಲ್ಲೀಖಾನನು ರಾಜ್ಯವನ್ನು ವಿವಿಧ ಮುಖಗಳಿಂದ ಅಭಿವೃದ್ಧಿ ಪಡಿಸಿದನಷ್ಟೆ ! ಹೀಗೆ ದಿನದಿನಕ್ಕೆ ಆತನ ಪ್ರಾಬಲ್ಯವೂ ರಾಜ್ಯೈ ಶ್ವರ್ಯಗಳೂ ಹೆಚ್ಚುತ್ತಿದ್ದಂತೆ ಆತನ ಶತ್ರುವರ್ಗವಾದರೂ ಹೆಚ್ಚುತ್ತಿದ್ದಿತು. ಆತನು ಸೀರ್ಯವನ್ನು ಸ್ವಾಧೀನ ಪಡಿಸಿಕೊಂಡುದಕ್ಕಾಗಿ ಮರಾಟೆಯವರಿಗೆ ಅಸಮಾಧಾನವುಂಟಾಯಿತು. ಆತನು ತಮ್ಮ ದ್ವೇಷಿಗಳಾದ ಫ್ರೆಂಚರೊಂ ದಿಗೆ ಸ್ನೇಹಿಸಿದನೆಂದು ಇಂಗ್ಲೀಷರು ಕೋಪಗೊಂಡರು. ಹೈದರಾಬಾದಿನ ಸುಬೇದಾರಿಯು ತನಗಾಗದೆ ಸಲಬತ್‌ಜಂಗನಿಗಾದುದರಿಂದ ನಿಜಾಮನಿಗೂ ಹೈದರನಮೇಲೆ ರೋಷವುಂಟಾಗಿತ್ತು. ಒಡನೆ ಮೂವರೂ ಒಂದಾಗಿ ಆತನ ಮೇಲೆ ಬೀಳಲು ಹೊರಟರು. ಈ ಸಂಗತಿಯು ತಿಳಿದ ಒಡನೆಯೇ ಹೈದರನು, ಮರಾಟೆಯವರ ಸೈನ್ಯವು ಬರುವ ಮಾರ್ಗದಲ್ಲಿ ಮೇವು ನೀರು ಗಳೂ ಆಹಾರ ಸಾಮಗ್ರಿಗಳೂ ಸಿಕ್ಕದಂತೆ, ಗ್ರಾಮಸ್ಥರೆಲ್ಲ ಕಾಡಿನಲ್ಲಿ ವಾಸಿ ಸುವಂತೆ ಆಜ್ಞೆಮಾಡಿದ್ದನು. ಆದರೂ ಮರಾಟೆಸೈನ್ಯವು ಸೀರ್ಯದಒಳ ಬಂದಿ ಳಿಯಿತು. ಆಗ ಅಲ್ಲಿಯಕಿಲ್ಲೇದಾರನಾಗಿದ್ದ ಮೀರ್‌ಸಾಬನೆಂಬುವನು ಅದನ್ನು ಅವರ ಸ್ವಾಧೀನಪಡಿಸಿ ತನ್ನ ಜಹಗೀರಿಗೆ ಹೊರಟು ಹೋದನು. ಸೀರ್ಯವು ಕೈಬಿಟ್ಟು ಹೋಯಿತೆಂಬ ಸಂಗತಿಯು ಹೈದರನಿಗೆ ತಿಳಿದೊಡನೆಯೇ, ಹೈದ

ರನು, ಮರಾಟೆಯವರ ದಂಡು, ನಿಜಾಮನ ಸೈನ್ಯದೊಡನೆ ಸೇರುವುದಕ್ಕೆ ಮುಂಚಿತವಾಗಿಯೇ, ತನ್ನ ಕಡೆಯ ರಾಯಭಾರಿಯನ್ನು ಕಳುಹಿಸಿ ೩೫ ಲಕ್ಷ ರೂಪಾಯಿಗಳನ್ನು ಕೊಡಲೊಪ್ಪಿ ಮರಾಟೆಯವರೊಂದಿಗೆ ಸಂಧಿ ಮಾಡಿಕೊಂಡನು.

ಹೀಗೆ ದಾನೋಪಾಯದಿಂದ ಮರಾಟೆಯವರನ್ನು ಹೊರಡಿಸಿ, ಹೈದರಲ್ಲಿಯು ಭೇದೋಪಾಯವನ್ನವಲಂಬಿಸಿ, ನಿಜಾಮನನ್ನು ತನ್ನ ವಶಕ್ಕೆ ಒಲಿಸಿಕೊಳ್ಳಲು ಪ್ರಯತ್ನಿಸಿದನು. ಆ ಉಪಾಯವೂ ಸಿದ್ಧಿಸದಿರಲಿಲ್ಲ. ನಿಜಾಮರ ಮತ್ತು ಮೈಸೂರು ಸೈನ್ಯಗಳು ಒಂದಾಗಿ ಚಂಗವಾಸ್, ತಿರುವಣ್ಣಾಮಲೆ ಮುಂತಾದ ಸ್ಥಳಗಳಲ್ಲಿ ಇಂಗ್ಲೀಷರ ಸೈನ್ಯದೊಂದಿಗೆ ಯುದ್ಧಮಾಡಿದುವು. ಆದರೆ ಎರಡು ಯುದ್ಧಗಳಲ್ಲೂ ಜಯಲಭ್ಯವಾಗಲಿಲ್ಲ. ಅಲ್ಲದೆ, ಆ ವೇಳೆಗೆ ಇಂಗ್ಲೀಷರಿಗೆ ಬೊಂಬಾಯಿ ಕಡೆಯಿಂದ ಮತ್ತೊಂದು ಸೈನ್ಯವು ಸಹಾಯಕ್ಕೆ ಒಂದೊದಗುತ್ತಿದೆಯೆಂಬ ವರ್ತಮಾನ ಬಂತು. ಈ ವಾರ್ತೆಯನ್ನು ಕೇಳಿ ನಿಜಾಮನು ಬೆದರಿ, ಇಂಗ್ಲೀಷರೊಂದಿಗೆ ಸಂಧಿಮಾಡಿಕೊಂಡು ತನ್ನ ಸೀಮೆಗೆ ಹೊರಟುಹೋದನು. ಇತ್ತ ಬೊಂಬಾಯಿ ಕಡೆಯಿಂದ ಬಂದ ದಂಡು ಮೈಸೂರು ರಾಜ್ಯಕ್ಕೆ ಸೇರಿದ, ಮಂಗಳೂರು ಹೊನ್ನಾವರ ಮುಂತಾದ ಸ್ಥಳಗಳನ್ನು ಕೈವಶ ಮಾಡಿಕೊಂಡಿತು. ಈ ವರ್ತಮಾನವು ಬಂದೊಡನೆಯೇ ನವಾಬನು ಆ ಪ್ರಾಂತ ಹೊರಟು ಕೈ ತಪ್ಪಿ ಹೋಗಿದ್ದ ಆ ಸ್ಥಳಗಳನ್ನು ಪುನಃ ಸ್ವಾಧೀನ ಪಡಿಸಿಕೊಂಡನು. ಆ ವೇಳೆಗೆ ಈ ಕಡೆಯ ಇಂಗ್ಲೀಷರ ದಂಡು ಕೋಲಾರ ಮುಳುಬಾಗಿಲು ಹೊಸೂರು ಮುಂತಾದ ಸ್ಥಳಗಳನ್ನು ಆಕ್ರಮಿಸಿತೆಂಬ ಸಂಗತಿ ತಿಳಿಯಿತು. ಒಡನೆ ಅಲ್ಲಿಂದ ಹೊರಟು ಬೆಂಗಳೂರನ್ನು ಸೇರಿದನು. ಆಗಿನ ಸ್ಥಿತಿಯಲ್ಲಿ ಇಂಗ್ಲೀಷರೊಂದಿಗೆ ಸಂಧಿ ಮಾಡಿಕೊಳ್ಳುವುದು ಉಚಿತವೆಂದು, ಹತ್ತು ಲಕ್ಷ ರೂಪಾಯಿಗಳನ್ನು ಒಪ್ಪಿಸುವುದಾಗಿಯೂ, ತನ್ನ ದೇಶದ ಗಡಿಯನ್ನು ಬಿಟ್ಟು ಹೊರಟು ಹೋಗಬೇಕೆಂದೂ ಹೇಳಿ ಕಳುಹಿಸಿದನು. ಆದರೆ, ಇಂಗ್ಲೀಷ್ ಸೇನಾಧಿಪತಿಯು ಗರ್ವದಿಂದ ಆ ಮಾತಿಗೆ ಒಪ್ಪಲಿಲ್ಲ. ಒಡನೆ ಹೈದರನು ಸೈನ್ಯದೊಂದಿಗೆ ಹೊರಟು ಮುಳಬಾಗಿಲು ಮುಂತಾದ ಪ್ರಾಂತಗಳನ್ನು ಪುನಃ ಸ್ವಾಧೀನ ಪಡಿಸಿಕೊಂಡು, ತನ್ನ ಕಡೆಯ ಸೇನೆಯನ್ನು ಕಳುಹಿಸಿ, ಸತ್ಯ

ಮಂಗಲ ಕರೂರು ಈರೋಡು ಕೊಯಮುತ್ತೂರು ಮಧುರೆ ತಂಜಾವೂರು ಮುಂತಾದ ಪ್ರಾಂತಗಳನ್ನು ಸ್ವಾಧೀನ ಮಾಡಿಕೊಂಡನು. ತಂಜಾವೂರಿನ ದೊರೆಯು ೪ ಲಕ್ಷ ವರಹಗಳನ್ನು ಹೈದರನಿಗೆ ಕೊಟ್ಟು, ತನ್ನ ದೇಶವನ್ನು ಪುನಃ ಪಡೆದನು. ಹೈದರನು, ಇಂಗ್ಲೀಷರ ಮೇಲಿನ ರೋಷದಿಂದ ೬೦೦೦ ಕುದುರೆ ಸೈನ್ಯವನ್ನು ಸಂಗಡ ಕರೆದುಕೊಂಡು, ಪಕಾಪಕಿ ಮದ್ರಾಸಿನ ಬಳಿ ಬಂದಿಳಿದನು. ಈ ವಿಚಾರವೇ ತಿಳಿಯದೆ ಮೈಮರೆತಿದ್ದ ಮದರಾಸ್ ಸರ್ಕಾರದವರು ಇದನ್ನು ಕಂಡು ಗಾಬರಿಗೊಂಡು, ಆತನೊಂದಿಗೆ ಸಂಧಿಯ ಪ್ರಸ್ತಾಪವನ್ನು ತೆಗೆದರು. ೧೭೬೯ ನೆಯ ಸಂ|| ದಲ್ಲಿ ಹುಟ್ಟಿದ ಈ ಕರಾರಿನಿಂದ, ಯುದ್ಧಾರಂಭವಾಗುವುದಕ್ಕೆ ಮುಂಚೆ ಇದ್ದಂತೆ,ಅವರವರ ರಾಜ್ಯಗಳು ಅವರಿಗೇ ಇರತಕ್ಕದ್ದು, ಹೊರಗಿನ ಶತ್ರುಗಳೊಂದಿಗೆ ಯುದ್ಧ ಪ್ರಾರಂಭವಾದರೆ, ಆ ಕಾಲದಲ್ಲಿ ಪರಸ್ಪರಸಹಾಯ ಮಾಡಬೇಕು, ಎಂದು ತೀರ್ಮಾನವಾಯಿತು.

ಮದರಾಸಿನಿಂದ ರಾಜಧಾನಿಗೆ ಬಂದು ಸೇರಿದ ಕೆಲವು ದಿನಗಳೊಳಗಾಗಿಯೇ ನವಾಬನು ಪುನಃ ಕಡಪೆ ಕರ್ನೂಲುಗಳ ಕಡೆಗೆ ದಂಡೆತ್ತಿ ಹೊರಟು ಅಲ್ಲಿಯ ನವಾಬರಿಂದಲೂ, ಮಾರ್ಗದಲ್ಲಿದ್ದ ಇತರ ಅನೇಕ ದುರ್ಗಗಳ ಪಾಳೆಯಗಾರರಿಂದಲೂ ಕಪ್ಪ ಕಾಣಿಕೆಗಳನ್ನು ಸಂಗ್ರಹಿಸಿ ಬಳ್ಳಾರಿಗೆ ಬಂದನು. ಆಗ ಅಲ್ಲಿಯ ಪಾಳೆಯಗಾರನು ತೀರಿ ಹೋಗಿದ್ದುದರಿಂದ ಅವನ ರಾಣಿಯು, ತಾನು ಹೈದರನಿಗೆ ಜೆದರತಕ್ಕವಳಲ್ಲವೆಂದು ತಿಳಿಸುವುದಕ್ಕಾಗಿ ಬಳೆ ಅರಸಿನ ಕುಂಕುಮಗಳನ್ನು ಕಳುಹಿಸಿದಳು. ಈ ಸಂಗತಿಯು ಹೈದರನಿಗೆ ಅತಿಶಯ ರೋಷವನ್ನುಂಟುಮಾಡಿತು. ಒಡನೆ ಬಳ್ಳಾರಿಯ ಕೋಟೆಯನ್ನು ಮುತ್ತಿ, ಅವಳ ಗರ್ವವನ್ನು ಅಣಗಿಸಬೇಕೆಂದು ಯೋಚಿಸಿದನಾದರೂ ಅಷ್ಟರಲ್ಲಿ ಮತ್ತೊಂದು ಅತಿ ಜರೂರಾದ ರಾಜಕಾರ್ಯ ಒದಗಿದುದರಿಂದ ಆ ಪ್ರಯತ್ನವನ್ನು ಬಿಟ್ಟು ಹೈದರನು ರಾಜಧಾನಿಯ ಕಡೆಗೆ ಪ್ರಯಾಣ ಮಾಡಬೇಕಾಯಿತು.

ಹಿಂದೆ ಎರಡು ಮೂರು ಸಾರಿ ದಂಡೆತ್ತಿ ಬಂದಿದ್ದಾಗಲೂ, ಲಕ್ಷ ಲಕ್ಷವಾಗಿ ದ್ರವ್ಯವು ದೊರೆತುದರಿಂದ ದ್ರವ್ಯಾಸೆಯು ಮರಾಟೆಯವರನ್ನು ಪುನಃ ಆಕರ್ಷಿಸಿತು. ರೂಪಾಯಿ ಬೆಳೆಗೆ ಮೈಸೂರು ದೇಶವು ಬಹು ಫಲವ

ತ್ತಾದ ಸೀಮೆಯೆಂದು ಭಾವಿಸಿ, ಪೇಷ್ವೆ ಮಾಧವರಾಯನು, ಪುನಃ ದೊಡ್ಡ ದಂಡಿನೊಡನೆ ಹೊರಟು ಕೃಷ್ಣಾನದಿಯನ್ನು ದಾಟಿ, ಮೈಸೂರಿಗೆ ಸೇರಿದ್ದ ಪ್ರಾಂತಗಳಮೇಲೆ ಧಾಳಿಮಾಡುತ್ತ ಚೌಥಾಯವನ್ನು ವಸೂಲು ಮಾಡ ತೊಡಗಿದನು. ಮೇಲ್ಕಂಡಂತೆ ಬಳ್ಳಾರಿ ಪ್ರಾಂತದಲ್ಲಿದ್ದ ಹೈದರಲ್ಲಿಯು ಈ ವರ್ತಮಾನವನ್ನು ತಿಳಿದು ಒಡನೆ ಅಲ್ಲಿನ ತನ್ನ ಯುದ್ಧಪ್ರಯತ್ನವನ್ನು ನಿಲ್ಲಿಸಿ, ೧೭೭೦ ನೆಯ ಸಂ॥ದ ಸುಮಾರಿನಲ್ಲಿ ಹಿಂದಿರುಗಿ ರಾಜಧಾನಿಗೆ ಬಂದು ಸೇರಿದನು. ಹಿಂದಿನವರ್ಷದಲ್ಲಿ ತನಗೂ ಮದ್ರಾಸಿನಲ್ಲಿ ಇಂಗ್ಲೀಷನವರಿಗೂ ನಡೆದ ಕರಾರಿನಂತೆ, ಆ ಸಂದರ್ಭದಲ್ಲಿ ತನಗೆ ಸಹಾಯಕ್ಕೆ ಬರಬೇಕೆಂದು ಕೋರಿದನು. ಇಂಗ್ಲಿಷರು ತಮ್ಮ ವಾಗ್ದಾನವನ್ನು ಮಾನ್ಯಮಾಡಿ ಸಹಾಯಕ್ಕೆ ಬರಲಿಲ್ಲ. ಇತ್ತ ಮರಾಟೆಯವರ ಕಾಟವು ಬಲವಾಯಿತು. ಹೈದರನು ಉಪಾಯರಹಿತನಾಗಿ ಪೇಷ್ವೆ ಮಾಧವರಾಯನಿಗೆ ಸಂಧಿಗಾಗಿ ಹೇಳಿ ಕಳುಹಿಸಿದನು. ಆದರೆ ಆತನು ಒಂದು ಕೋಟಿ ರೂಪಾಯಿ ಕೊಟ್ಟ ಲ್ಲದೆ, ಆ ಸಾರಿ ಹಿಂದಿರುಗುದಿಲ್ಲವೆಂದು ತಿಳಿಸಲು, ಹೈದರನು ಅದಕ್ಕಿಂತಲೂ ಯುದ್ಧ ಮಾಡುವುದೇ ಲೇಸೆಂದು ನಿಶ್ಚಯಮಾಡಿದನು.

ಮರಾಟರೊಂದಿಗೆ ಯುದ್ಧಮಾಡಲು ಹೈದರನು ಸಿದ್ಧಪಡಿಸುವುದ ಕ್ಕಾಗಿ ಸಾವನದುರ್ಗ ಮುಂತಾದ ಪ್ರಾಂತಕ್ಕೆ ಹೋಗಿರಲು, ಮಾಧವರಾ ಯನು, ಚಿತ್ರದುರ್ಗದ ಮದಕರಿನಾಯಕನ ಸಹಾಯದಿಂದ ಶ್ರೀರಂಗಪಟ್ಟ ಣದ ಕೋಟೆಗೆ ಹಲ್ಲಾಹತ್ತಿ ಅದನ್ನು ಸ್ವಾಧೀನಮಾಡಿಕೊಂಡು, ಅಲ್ಲಿ ತ್ರಿಯಂಬಕಮಾಮನೆಂಬ ತನ್ನ ಕಡೆಯ ಅಧಿಕಾರಿಯನ್ನು ನಿಯಮಿಸಿ, ಪೂ ನಾಕ್ಕೆ ಹೊರಟುಹೋದನು. ಈ ಮರಾಟಾ ಅಧಿಕಾರಿಯು, ಒಡನೆ ಅಲ್ಲಿಂದ ಹೊರಟು ಸಾವನದುರ್ಗದ ಬಳಿಯಿದ್ದ ಹೈದರನನ್ನು ಬೆನ್ನಟ್ಟಿ ಹೊರಟನು. ಹೈದರನು ಅಲ್ಲಿಂದ ರಾಜಧಾನಿಯನ್ನು ಸೇರಲು ಸೈನ್ಯದೊಂದಿಗೆ ಪ್ರಯಾಣ ಮಾಡುತ್ತ ಮೇಲುಕೋಟೆಯ ಬಳಿಗೆ ಬಂದಿದ್ದನು. ಆ ವೇಳೆಗೆ ಮರಾಟಾ ಸೈನ್ಯವು ಬಹು ಸಮೀಪಕ್ಕೆ ಬಂದು ಬಿಟ್ಟಿದ್ದುದರಿಂದ, ಹೈದರನು ಉಪಾಯ ತೋರದೆ ರಾತ್ರಿಯೇ ಹೊರಟು, ರಾಜಧಾನಿಯನ್ನು ಕುರಿತು ಪ್ರಯಾಣ ಮಾಡಿದನು. ಕತ್ತಲೆಯಲ್ಲಿ ದಾರಿ ತಪ್ಪಿಹೋಗಲು, ಅವನ ಸೈನಿಕರು ಭ್ರ ಮಿಸಿ ಗುಂಡುಗಳನ್ನು ಹಾರಿಸಿದರು. ಆ ಶಬ್ದವು, ಹೈದರನು ಪರಾರಿಯಾಗು

ತ್ರಿದ್ದ ಸಂಗತಿಯನ್ನು ಮರಾಟರಿಗೆ ತಿಳಿಸಿಬಿಟ್ಟಿತು. ಒಡನೆ ಆತನು, ತನ್ನ ದಂಡಿನೊಂದಿಗೆ ಹೊರಟು, ಚಿನಕುರಳಿ ಎಂಬಲ್ಲಿ ಹೈದರನ ಸೈನ್ಯವನ್ನು ಸಂಧಿಸಿ ಎದುರಿಸಿದನು. ಒಡನೆ ಹೈದರನು ತಲೆಮರಸಿಕೊಂಡು, ಹತ್ತಿರದಲ್ಲೇ ಇದ್ದ ಒಂದು ಗುಡ್ಡವನ್ನು ಹತ್ತಿ ಮತ್ತೊಂದು ಕಡೆಯಿಂದ ಇಳಿದು ಹಳ್ಳಕೊಳ್ಳಗಳಲ್ಲಿ ಬಿದ್ದೆದ್ದು ರಾಜಧಾನಿಯನ್ನು ಸೇರಿಕೊಂಡನು. ಅವನ ಮಗನಾದ ಟೀಪ್ಪೂವು ಫಕೀರನವೇಷ ಹಾಕಿಕೊಂಡು, ರೂಪು ಮರೆಸಿ ಶ್ರೀರಂಗಪಟ್ಟಣಕ್ಕೆ ಬಂದು ಸೇರಿದನು. ತ್ರಿಯಂಬಕಮಾಮನ ಸೈನ್ಯವು ಒಡನೆ ಬಂದು ರಾಜಧಾನಿಯನ್ನು ಮುತ್ತಿತ್ತು. ಹೈದರನು ಎಷ್ಟು ಪ್ರಯತ್ನ ಮಾಡಿದರೂ ಅವರನ್ನು ಹೊರಡಿಸಲಾಗಲಿಲ್ಲ. ಕೊನೆಗೆ ೧೭೭೨ ನೆಯ ಜೂನ್ ತಿಂಗಳಲ್ಲಿ ಮೂವತ್ತು ಲಕ್ಷ ದ್ರವ್ಯವನ್ನು ಕೊಡುವಂತೆ ಕರಾರುಮಾಡಿಕೊಂಡು, ಹಣ ಸಂದಾಯವಾಗುವವರೆಗೆ ಕೋಲಾರ ಮುಂತಾದ ಸ್ಥಳಗಳನ್ನು ಭೋಗ್ಯಮಾಡಿ, ಎಂತೂ ಮರಾಟೆಯವರನ್ನು ರಾಜಧಾನಿಯಿಂದ ಸಾಗಕಳುಹಿಸಿದನು.

ಹೈದರನ ರಾಜನೀತಿಯು ವಿಚಿತ್ರವಾಗಿದ್ದಿತು. ತಾನು ತನ್ನ ಶತ್ರುಗಳೊಂದಿಗೆ ಮಾಡಿಕೊಂಡಿದ್ದ ಕರಾರಿಗೆ ಒಳಪಟ್ಟು ನಡೆಯಲೇಬೇಕೆಂಬ ನಿಬಂಧನೆಯು ಆತನನ್ನು ಎಂದೂ ನಿರ್ಬಂಧಿಸಿದುದಿಲ್ಲ. ಶತ್ರುವು ಪ್ರಬಲನೆಂದು ತೋರಿದಾಗ ತಗ್ಗಿ ಸಂಧಿಗಾಗಿ ಪ್ರಸ್ತಾಪಿಸುವನು. ಅವನು ದುರ್ಬಲನಾದನೆಂದು ತೋರಿದೊಡನೆಯೇ ಅವನ ಮೇಲೆ ಬಿದ್ದು, ಸಂಧಿಯ ಕರಾರುಗಳನ್ನೆಲ್ಲಾ ಮುರಿದು ಸೀಮೆಯನ್ನು ಆಕ್ರಮಿಸುವನು. ಪೂನೆಯಲ್ಲಿ ಮರಾಟೆಯವರ ಪೇಷ್ವೆ ಮಾಧವರಾಯನು ಮೃತನಾದನೆಂಬ ಸಂಗತಿ ತಿಳಿದೊಡನೆಯೇ ಮರಾಟೆಯವರ ಹಣಕ್ಕಾಗಿ ಭೋಗ್ಯವಾಗಿದ್ದ ಕೋಲಾರ ಮುಂತಾದ ಸ್ಥಳಗಳನ್ನು ಪುನಃ ಆಕ್ರಮಿಸಿದನು. ತರುವಾಯ, ಕೊಡಗು ದೇಶದ ಮೇಲೆ ದೃಷ್ಟಿ ಬಿದ್ದಿತು. ತ್ರಿಯಾಂಬಕಮಾಮನು ಶ್ರೀರಂಗಪಟ್ಟಣವನ್ನು ಮುತ್ತಿದ್ದಾಗ್ಗೆ ಕೊಡಗುದೇಶದ ರಾಜನು ಹಿಂದಿನ ಕರಾರಿನಂತೆ ತನಗೆ ಸಹಾಯ ಮಾಡಲಿಲ್ಲವೆಂದು ೧೭೭೩ ನೆಯ ಸಂ|| ದಲ್ಲಿ ಆ ದೇಶದಮೇಲೆ ದಂಡೆತ್ತಿದನು. ಕೊಡಗರು ಬೆದರಿ ಬೆಟ್ಟಗುಡ್ಡಗಳಿಗೆ ಓಡಿಹೋಗಿ ತಲೆ ಮರಸಿಕೊಂಡರು. ಆಗ ಕೊಡಗರ ತಲೆಯೊಂದಕ್ಕೆ ೫ ರೂ. ನಂತೆ ಬಹುಮಾನ

ಕೊಡುತ್ತೇನೆಂದು ತನ್ನ ಸೈನಿಕರಲ್ಲಿ ಪ್ರಕಟಿಸಿದನು. ಈ ಚಲ್ಲಾಟಕ್ಕೆ ತುತ್ತಾಗಿ ೭೦೦ ಮಂದಿ ಕೊಡಗರು ಅಸುವನ್ನು ನೀಗಿದರು. ತಮಗೆ ಭೋಗ್ಯವಾಗಿದ್ದ ಕೋಲಾರ ಮುಂತಾದ ಸ್ಥಳಗಳನ್ನು ಹೈದರನು ಸ್ವಾಧೀನ ಪಡಿಸಿಕೊಂಡನೆಂಬ ಸಂಗತಿ ತಿಳಿದೊಡನೆಯೇ ಪೇಷ್ವೆ ರಘುನಾಥರಾಯನು ಪುನಃ ದಂಡೆತ್ತಿ ಬಂದನು. ಆಗ ಹೈದರನು ಆರು ಲಕ್ಷ ರೂಪಾಯಿಗಳನ್ನು ಕೊಡುವಂತೆ ಮಾತು ಮಾಡಿಕೊಂಡು ಆತನನ್ನು ಹಿಂದಕ್ಕೆ ಸಾಗಿಸಿದನು.

ಹೈದರನು ಮೈಸೂರು ರಾಜ್ಯವನ್ನು ಆಕ್ರಮಿಸಿದ್ದನಾದರೂ ರಾಜಮನೆತನವನ್ನು ಸಂಪೂರ್ಣವಾಗಿ ಕೈಬಿಟ್ಟಿರಲಿಲ್ಲ. ಅವರು ನಾಮಮಾತ್ರ ರಾಜರಾಗಿಯೇ ಇದ್ದರು. ರಾಜ್ಯದ ಸರ್ವಾಧಿಕಾರ ಮಾತ್ರವಲ್ಲ-ನಿರಂಕುಶಾಧಿಕಾರವೂ ತನ್ನ ಕೈಯಲ್ಲೇ ಇದ್ದರೂ, ಅವರನ್ನು ಪದ್ಧತಿಯಂತೆ ಸಿಂಹಾಸನದ ಮೇಲೆ ಕೂರಿಸುತ್ತಿದ್ದನು, ಪಳಿಸುತ್ತಿದ್ದನು. ಒಬ್ಬರು ಮೃತರಾದರೆಂದರೆ ಮತ್ತೊಬ್ಬರನ್ನು ಪಟ್ಟಕ್ಕೆ ತರುತ್ತಿದ್ದನು. ಇಲ್ಲಿಯೂ ಒಂದು ಬಗೆಯ ವಿನೋದ ರಹಸ್ಯವಾಗಿ ನಡೆಯುತ್ತಿದ್ದಿತು. ೭೭೦ರಲ್ಲಿ ಪಟ್ಟದ ಚಾಮರಾಜ ಒಡೆಯರು ಸಂತಾನವಿಲ್ಲದೆ ತೀರಿಕೊಂಡರು. ಇಮ್ಮಡಿ ಕೃಷ್ಣರಾಜ ಒಡೆಯರ ಪತ್ನಿ ಲಕ್ಷ್ಮಮ್ಮಣ್ಣಿಯವರು ತಮಗೆ ಬೇಕಾದ ಒಬ್ಬ ಹುಡುಗನನ್ನು ದತ್ತು ಮಾಡಿಕೊಳ್ಳಬೇಕೆಂದಿದ್ದರು. ಆದರೆ ನವಾಬನು ಅದಕ್ಕೊಪ್ಪದೆ, ದತ್ತು ಸ್ವೀಕಾರಕ್ಕೆ ಒಂದು ವಿಚಿತ್ರವಾದ ಮಾರ್ಗವನ್ನು ಏರ್ಪಡಿಸಿದನು. ರಾಜ ಬಂಧುಗಳಾದ ಹಲವು ಚಿಕ್ಕ ಚಿಕ್ಕ ಮಕ್ಕಳನ್ನು ರಾಜಧಾನಿಗೆ ಕರೆಸಿ, ತನ್ನ ಮನೆಯಲ್ಲೊಂದು ಸಭೆಯನ್ನು ನೆರೆಯಿಸಿ, ಸಭಾಸ್ಥಾನದಲ್ಲಿ ಒಂದೆಡೆ ಖರ್ಜೂರ ದ್ರಾಕ್ಷಿ ಕಲ್ಲುಸಕ್ಕರೆಗಳು, ಮಾವು ಹಲಸು ಮುಂತಾದ ರುಚಿಕರ ಫಲಗಳು, ದಿವ್ಯಭಕ್ಷ್ಯ ಭೋಜ್ಯಗಳು ಇವುಗಳನ್ನೂ, ಮತ್ತೊಂದೆಡೆ ಬಗೆಬಗೆಯ ವಸ್ತ್ರಾಭರಣಗಳನ್ನೂ, ಬೇರೊಂದೆಡೆಯಲ್ಲಿ ಹುಡುಗರಾಡುವ ಹಲವು ಬಗೆಯ ಆಟದ ಸಾಮಾನುಗಳನ್ನೂ, ಇನ್ನೊಂದೆಡೆಯಲ್ಲಿ ಒಂದು ಕತ್ತಿ ಮತ್ತು ಕಠಾರಿಯನ್ನೂ ಇಡಿಸಿದನು. ಅವುಗಳಲ್ಲಿ ತಮಗೆ ಇಷ್ಟವಿದ್ದ ಪದಾರ್ಥಗಳನ್ನು ತೆಗೆದುಕೊಳ್ಳಬಹುದೆಂದು ಆ ಮಕ್ಕಳೆಲ್ಲರೂ ಸಭೆಯೊಳಕ್ಕೆ ಬಿಡಲ್ಪಟ್ಟರು. ಹಲವರು ತಮಗೆ ಬೇಕೆನ್ನಿಸಿದ ಹಲವು ಪದಾರ್ಥಗಳನ್ನು ತೆಗೆದುಕೊಂಡರು. ಆದರೆ, ಅರಿಕೋಠಾರದ (ಈಗಿನ ಚಾಮರಾಜ

ನಗರದ) ದೇವರಾಜ ಅರಸಿನವರ ಮಗ ಮೂರುವರ್ಷ ವಯಸ್ಸಿನ ಚಾಮ ರಾಜನೆಂಬ ರಾಜಪುತ್ರನು ಕನ್ನಡಿಯನ್ನೂ ಕಠಾರಿಯನ್ನೂ ಕೈಗೆತ್ತಿಕೊಂಡ ನು. ಹೈದರನು ಆ ಮಗುವೇ ಸಿಂಹಾಸನಕ್ಕೆ ಯೋಗ್ಯನೆಂದು ಸಭೆಯಲ್ಲಿ ನೆರೆದ ಎಲ್ಲರನ್ನೂ ಒಪ್ಪಿಸಿ ಆ ಮಗುವಿಗೇ ಪಟ್ಟಕಟ್ಟಿದನು.

ಹಿಂದೆ ಬಳ್ಳಾರಿಯ ಪಾಳೆಯಗಾರನ ಹೆಂಡತಿಯು ಹೈದರನಿಗೆ ಬಳೆ ಮತ್ತು ಅರಸಿನ ಕುಂಕುಮವನ್ನು ಕಳುಹಿಸಿ ನಾಚಿಸಿದ್ದಳಲ್ಲವೆ! ಈಗ ಒಂ ದು ಸಮಯ ಒದಗಿತು. ಹೈದರಾಬಾದಿನ ಬಸಲತ್‌ಜಂಗನು ಬಳ್ಳಾರಿಯ ಮೇಲೆ ದಂಡೆತ್ತಿದನು. ಆಗ ಆಕೆಯು ಉಪಾಯತೋರದೆ ಹೈದರನ ಸಹಾ ಯವನ್ನು ಬೇಡಿದಳು. ಸಮಯಸಾಧನೆಯಲ್ಲಿದ್ದ ಹೈದರನು ಹೈದರಾಬಾ ದಿನ ಸೈನ್ಯವನ್ನು ಬಡಿದೋಡಿಸಿದನು. ಆದರೇನು-ತರುವಾಯ ಬಳ್ಳಾರಿಯ ನ್ನು ತಾನೇ ಆಕ್ರಮಿಸಿದನು. ಮಾರ್ಗದಲ್ಲೇ ಇದ್ದ ಗುತ್ತಿ ದುರ್ಗವನ್ನೂ ಮುತ್ತಿ, ಆ ದುರ್ಗಾಧಿಪತಿ ಮುರಾರಿರಾಯನು ಹನ್ನೆರಡು ಲಕ್ಷ ರೂಪಾಯಿ ಗಳನ್ನು ಒಪ್ಪಿಸುವೆನೆಂದರೂ ಸಮ್ಮತಿಸದೆ, ಆ ದುರ್ಗವನ್ನು ಸ್ವಾಧೀನಪಡಿಸಿ ಕೊಂಡು, ಅಲ್ಲಿದ್ದ ಹೆಂಗಸರು ಮಕ್ಕಳ ಮೈಮೇಲಿದ್ದ ಆಭರಣಗಳನ್ನೂ ಬಿ ಡದೆ ಸುಲಿಗೆಮಾಡಿಸಿದನು. ಪುನಃ ಮತ್ತೊಂದುವೇಳೆ ಮರಾಟೆಯವರ ಸೈನ್ಯ ದೊಂದಿಗೆ ಯುದ್ಧ ಕಾರ್ಯವೇರ್ಪಟ್ಟು, ಹೈದರನಿಗೇ ಜಯವಾಯಿತು. ಆ ಸಂದರ್ಭದಲ್ಲಿ ತನಗೆ ಹಿಂದಿನ ವಾಗ್ದಾನದಂತೆ ಸಹಾಯಕ್ಕೆ ಬರಲಿಲ್ಲವೆಂದು, ಚಿತ್ರದುರ್ಗದ ಮದಕರಿನಾಯಕನಮೇಲೆ ಹೊರಟು ಯುದ್ಧಮಾಡುತ್ತಿರ ಲು, ನಾಯಕನ ದಂಡಿನಲ್ಲಿದ್ದ ಮುಸಲ್ಮಾನಜನಗಳು ಹೈದರನ ಲಂಚಕ್ಕೆ ಒಳಪಟ್ಟು ಸ್ವಾಮಿ ದ್ರೋಹಿಗಳಾದುದರಿಂದ, ೧೭೭೯ನೆಯ ಸಂ॥ದಲ್ಲಿ ಮದ ಕರಿನಾಯಕನು ಹೈದರನಿಗೆ ಶರಣಾಗತನಾದನು. ಚಿತ್ರದುರ್ಗವು ಮೈಸೂ ರು ರಾಜ್ಯಕ್ಕೆ ಸೇರಿಹೋಯಿತು. ಹೈದರನು ಚಿತ್ರದುರ್ಗದಿಂದ ೨೦,೦೦೦ ಮಂದಿ ಬೇಡರನ್ನು ಶ್ರೀರಂಗಪಟ್ಟಣಕ್ಕೆ ಕಳುಹಿಸಿ, ಅಲ್ಲಿ ಅವರನ್ನು ಮಹ ಮ್ಮದೀಯಮತಕ್ಕೆ ಸೇರಿಸಿ, ಅವರದೇ ಒಂದು ಸೈನ್ಯವನ್ನಾಗಿ ಏರ್ಪಡಿಸಿ ದನು. ತರುವಾಯ ಕಡಪೆಯ ನವಾಬನೊಂದಿಗೆ ಯುದ್ಧಪ್ರಾಪ್ತವಾಯಿತು. ಈ ಯುದ್ಧದಲ್ಲಿ ಆತನ ಬಳಿಯಿದ್ದ ಪಠಾಣರು ಕೆಲವರು ರಾತ್ರಿವೇಳೆಯಲ್ಲಿ ಹೈದರನ ಡೇರೆಯೊಳಗೆ ನುಗ್ಗಿ ಪಹರೆಯವರನ್ನು ಕೊಂದು, ಹೈದರನನ್ನು

ಹುಡುಕಿ ಕೊಲ್ಲಬಯಸಿದ್ದರು. ಆದರೆ, ಅಷ್ಟರಲ್ಲಿ ಎಚ್ಚತ್ತ ಹೈದರನು ತನ್ನ ಹಾಸಿಗೆಯಮೇಲೆ ತಾನು ಮಲಗಿದ್ದಂತೆಯೇ ತಲೆದಿಂಬನ್ನು ಇಟ್ಟು ಅಚ್ಚೀಕಾಬನ್ನು ಹೊದ್ದಿಸಿ ಬೇರೆಮಾರ್ಗದಿಂದ ಹೊರಬಿದ್ದು ನಡೆದು, ತನ್ನ ಕಡೆಯ ಸೈನಿಕರನ್ನು ಎಚ್ಚರಿಸಿದನು. ಅವರೊಂದಿಗೆ ಡೇರೆಯನ್ನು ಹೊಕ್ಕು ನೋಡುವಲ್ಲಿ, ಅವರು ಹಾಸಿಗೆಯಮೇಲಿದ್ದ ಆ ದಿಂಬನ್ನೇ ಹೈದರನೆಂದು ಭಾವಿಸಿ, ಕತ್ತಿಯಿಂದ ಕೊಚ್ಚುತ್ತಿದ್ದರು. ಹೈದರನು ಅವರನ್ನೆಲ್ಲ ಹಿಡಿಸಿ, ಕೆಲವರ ಕೈಕಾಲುಗಳನ್ನು ಕಡಿಸಿ ಮರಳಲ್ಲಿ ಹೂಳಿಸಿ, ಮತ್ತೆ ಕೆಲವರನ್ನು ಆನೆಯ ಕಾಲುಗಳಿಂದ ತುಳಿಸಿ, ಚಿತ್ರಹಿಂಸೆಮಾಡಿಸಿ ಕೊಲ್ಲಿಸಿದನು. ಕಡಪೆಯ ನವಾಬನು ಸಂಪೂರ್ಣ ಪರಾಜಿತನಾಗಿ ಶರಣುಬೇಡಿದನು. ೧೭೭೯ನೇ ಸಂ|| ದಲ್ಲಿ ಕಡಪೆಯೂ ಮೈಸೂರು ಸಂಸ್ಥಾನದ ಆಡಳಿತಕ್ಕೆ ಒಳಪಟ್ಟಿತು. ಹೀಗೆ ಹಲವು ವರ್ಷಕಾಲ ಹೈದರನು ಸಂವತ್ಸರದ ಮುನ್ನೂರರವತ್ತು ದಿನವನ್ನೂ ಯುದ್ಧದಲ್ಲೇ ಕಾಲಕಳೆಯುತ್ತಾ, ಕೇವಲ ಯುದ್ಧ ಜೀವಿಯಾಗಿದ್ದು, ವಿಶಾಲವಾದ ರಾಜ್ಯ-ಐಶ್ವರ್ಯಗಳನ್ನು ಗಳಿಸಿದನು.



## ಅಧ್ಯಾಯ ೬ — "ಮೃತ್ಯು"

೧೭೬೯ನೆಯ ಸಂ|| ದಲ್ಲಿ ಹೈದರನಿಗೂ ಇಂಗ್ಲೀಷರಿಗೂ ಪರರಾಯರೊಂದಿಗೆ ಯುದ್ಧಕಾಲವೊದಗಿದಾಗ ಪರಸ್ಪರ ಸಹಾಯಮಾಡತಕ್ಕದ್ದೆಂದು ಕರಾರಾಗಿದ್ದಿತಲ್ಲವೆ! ೧೭೭೦ನೆಯ ಸಂ|| ದಲ್ಲಿ ಮರಾಟಿ ಸೈನ್ಯವು ಬಂದು ಮುತ್ತಿದಾಗ ಕಳೆದ ಸಂವತ್ಸರದ ಆ ಕರಾರಿನ ಮೇರೆಗೆ ತನಗೆ ಸಹಾಯಮಾಡೆಂದು ಮದ್ರಾಸ್ ಗೌರ್ನರನ್ನು ಕೇಳಿದನು. ಅವನು ಕಾರಣಾಂತರವನ್ನು ಹೇಳಿ ಸಹಾಯಮಾಡದಿದ್ದುದು, ಹೈದರನನ್ನು ಕೋಪಗೊಳಿಸಿದ್ದಿತು. ನಂಬಿಕೆಗೆ ಅನರ್ಹರಾದ ಅವರಿಂದ ತನಗೇನೂ ಪ್ರಯೋಜನವಾಗಲಾರದೆಂದು ನವಾಬನು, ಫ್ರೆಂಚಿನವರನ್ನು ಪ್ರೋತ್ಸಾಹಪಡಿಸಿ. ಅವರನ್ನು ತನ್ನ ಬಳಿ ಇಟ್ಟುಕೊಂಡು, ತನ್ನ ಸೈನ್ಯವನ್ನು ಅವರಿಂದಲೇ ತರಪೇತು ಮಾಡಿಸತೊಡಗಿದನು.

ಹೈದರನಂತೆಯೇ, ಹೈದರಾಬಾದಿನ ನಿಜಾಮನಿಗೂ ಮರಾಟಾ ಪೇಶ್ವೆ ಗಳಿಗೂ ಬೇರೆಬೇರೆ ಕಾರಣಗಳಿಂದ ಇಂಗ್ಲೀಷರಮೇಲೆ ದ್ವೇಷಭಾವವೇರ್ಪ ಟ್ಟಿತು. ಹೈದರಲ್ಲಿಯು ಈ ಸಂದರ್ಭವನ್ನು ತಿಳಿದು ಅವರಿಬ್ಬರನ್ನೂ ಸ್ನೇಹಿ ಸಿ, ಅವರ ಸಹಾಯದಿಂದ ಇಂಗ್ಲೀಷರನ್ನು ಹಿಂದೂಸ್ಥಾನದಿಂದಲೇ ಓಡಿಸ ಬೇಕೆಂದು ಯೋಚಿಸಿದನು. ಅವರೊಂದಿಗೆ ಸಾಕ್ಷಾತ್ತಾಗಿ ಯುದ್ಧಪ್ರಾಪ್ತ ವಾಗಲು ಒಂದು ಕಾರಣವೂ ಏರ್ಪಟ್ಟಿತು. ೧೭೭೮ನೆಯ ಸಂ|| ದಲ್ಲಿ ಯೂ ರೋಪಿನಲ್ಲಿ ಇಂಗ್ಲೀಷರಿಗೂ ಫ್ರೆಂಚರಿಗೂ ಯುದ್ಧ ಪ್ರಾರಂಭವಾದುದರಿಂದ, ಇಂಗ್ಲೀಷರು ಪಶ್ಚಿಮ ಕರಾವಳಿಯಲ್ಲಿದ್ದ ಮಾಹಿ ಎಂಬ ರೇವುಪಟ್ಟಣವನ್ನು ಆಕ್ರಮಿಸಿದರು. ಹೈದರನು ಮಾಹಿಯು ತನಗೆ ಸೇರಿದ್ದೆಂದು ತಿಳಿಸಿದನು. ಆದರೂ ಅದನ್ನು ಅವರು ಲಕ್ಷ್ಯಮಾಡಲಿಲ್ಲ. ಅಲ್ಲದೆ ಅವನ ಅನುಮತಿ ಯಿಲ್ಲದೆ ಒಂದುವೇಳೆ ಆತನಿಗೆ ಸೇರಿದ ಕಡಪೆಯ ಮಾರ್ಗವಾಗಿ ಸೈನ್ಯವನ್ನು ಕಳುಹಿಸಿದ್ದರು. ಈ ಕಾರಣಗಳಿಂದ ತನ್ನಮೇಲೆ ಹೈದರನಿಗೆ ಅಸಮಾಧಾ ನವುಂಟಾಗಿದೆಯೆಂಬ ಸಂಗತಿಯು ಅವರಿಗೆ ತೋರಿದೊಡನೆಯೇ ಶ್ವಾರ್ಟ್ಜ್ ಎಂಬೊಬ್ಬ ಜರ್ಮನ್ ಪಾದ್ರಿಯನ್ನು ಸಂಧಿಗಾಗಿ ಶ್ರೀರಂಗಪಟ್ಟಣಕ್ಕೆ ಕಳು ಹಿಸಿದರು. ಹೈದರನು, ಆತನೆದುರಿಗೆ ಇಂಗ್ಲೀಷರ ನಂಬಿಕೆದ್ರೋಹಗುಣ ವನ್ನು ಕುರಿತು ವಿಸ್ತಾರವಾಗಿ ಹೇಳಿ, ತನಗೆ ಅವರ ಸ್ನೇಹವು ಆವಶ್ಯಕವಿಲ್ಲ ವೆಂದು ಕಳುಹಿಸಿಬಿಟ್ಟನು.

೧೭೮೦ನೆಯ ಸಂ|| ದಲ್ಲಿ ಮಳೆಗಾಲವು ತೀರಿದೊಡನೆಯೇ ಹೈದರನು ಕಣಿವೆಕೆಳಗೆ ತನ್ನ ದಂಡನ್ನು ಹೊರಡಿಸಿದನು. ಮಾರ್ಗದಲ್ಲಿ ಅನೇಕ ಊರುಗಳು ಕೊಳ್ಳೆಯಾದುವು, ಪೈರು ನಾಶವಾಯಿತು. ದನಕರುಗಳು ಸತ್ತುವು. ಹಲವು ಜನರು ನಿಷ್ಕಾರಣ ಮರಣಕ್ಕೀಡಾದರು. ಪುಲಿಕಾಡಿ ನಿಂದ ಪುದುಚೇರಿಯವರೆಗಿನ ಐವತ್ತುಮೈಲು ಪ್ರದೇಶವು ನಿರ್ಜನಾರಣ್ಯದಂ ತಾಯಿತು. ಇದನ್ನು ಕಂಡು ಮದ್ರಾಸಿನಲ್ಲಿದ್ದ ಇಂಗ್ಲೀಷರು ಭಯಪಟ್ಟು ತಮ್ಮ ಸೈನ್ಯವನ್ನು ಹೊರಡಿಸಿದರು. ಸರ್ ಹೆಕ್ಟರ್ ಮನ್ರೋ ಎಂಬವನ ಕೈಕೆಳಗೆ ಬಂದ ಒಂದು ಸೈನ್ಯವು, ಕರ್ನಲ್ ಬೇಯ್ಲಿಯು ನಡೆಯಿಸುತ್ತಿದ್ದ ಇನ್ನೊಂದು ಸೈನ್ಯದೊಂದಿಗೆ ಬೆರೆಯುವುದಕ್ಕೆ ಮುಂಚಿತವಾಗಿಯೇ ಹೈದ ರನು ಪಾಲಿಲೂರ್ ಎಂಬಲ್ಲಿ ಬೇಯ್ಲಿಯನ್ನು ಎದುರಿಸಿ ಇಂಗ್ಲೀಷ್ ಸೈನ್ಯ

ವನ್ನು ಸಂಪೂರ್ಣವಾಗಿ ಸೋಲಿಸಿದನು. ಬೇಯ್ಲಿಯೇ ಮುಂತಾಗಿ ಮು
ನ್ನೂರು ಮಂದಿ ಹೈದರನಿಗೆ ಸೆರೆಯಾದರು. ಕಂಚಿಯ ಬಳಿಯಿದ್ದ ಮನ್ರೋವು
ಈ ಸಂಗತಿಯನ್ನು ಕೇಳಿ ಭೀತನಾಗಿ ಯುದ್ಧಸಾಮಗ್ರಿಗಳನ್ನೆಲ್ಲ ಅಲ್ಲೀ
ಬಿಟ್ಟು ಫಿರಂಗಿಗಳನ್ನು ಕೆರೆಯಲ್ಲಿ ಮುಳುಗಿಸಿ, ಮದ್ರಾಸಿಗೆ ಓಡಿಹೋದನು.
ಇಂಗ್ಲೀಷರ ಈ ಅಪಜಯವೃತ್ತಾಂತವನ್ನು ಕಲ್ಕತ್ತಾದಲ್ಲಿದ್ದ ಗೌರ್ನರ್
ಜನರಲ್ ಹೇಸ್ಟಿಂಗ್ಸ್ ಸಾಹೇಬನು ಕೇಳಿ, ಅಲ್ಲಿಂದ ಸರ್ ಐರ್‌ಕೂಟ್
ಎಂಬ ಪ್ರಸಿದ್ಧನಾದ ಸೇನಾಪತಿಯೊಂದಿಗೆ ದಂಡನ್ನು ಕಳುಹಿಸಿದನು.
೧೭೮೧ನೆಯ ಸಂ|| ದಲ್ಲಿ ಹೈದರನ ಸೇನೆಗೂ ಬಂಗಾಳದಿಂದ ಬಂದ ಈ
ಹೊಸ ಸೇನೆಗೂ ಪೋರ್ಟೋನೋವೋ ಎಂಬಲ್ಲಿ ಕದನ ನಡೆಯಿತು. ಈ
ಯುದ್ಧದಲ್ಲಿ ಹೈದರನು ತಲೆ ತಪ್ಪಿಸಿಕೊಳ್ಳುವುದೇ ಕಷ್ಟವಾಯಿತು. ಪುನಃ
ಪಾಲಿಲೂರಿನ ಬಳಿ ಎರಡನೆಯಾವರ್ತಿಯೂ ಯುದ್ಧವಾಗಿ ಅಲ್ಲಿಯೂ ಅವನಿಗೆ
ಅಪಜಯವೇ ಆಯಿತು. ತರುವಾಯ ಷೋಲಿಂಘರ್ ಎಂಬ ಊರಿನ ಬಳಿ
ನಡೆದ ಲಡಾಯಿಯಲ್ಲಿಯೂ ಮೈಸೂರು ಸೈನ್ಯಕ್ಕೆ ಜಯವಾಗಲಿಲ್ಲ.

ಈ ವೇಳೆಯಲ್ಲೀ ಗೌರ್ನರ್ ಜನರಲ್ ಸಾಹೇಬನು, ಉಪಾಯಮಾಡಿ
ಮರಾಟೆಯವರನ್ನೂ ನಿಜಾಮನನ್ನೂ ಹೈದರನ ಪಕ್ಷದಿಂದ ಬೇರೆಮಾಡಿ
ದನು. ಹೈದರನಿಗೆ ಸಕಾಲಕ್ಕೆ ಫ್ರೆಂಚಿನವರ ಸಹಾಯವು ಒದಗದೆ, ಇತ್ತ
ಎರಡುಮೂರು ಸ್ಥಳಗಳಲ್ಲಿ ಅಪಜಯವೂ ಆಗಲು ಅವನಿಗೆ ದಿಕ್ಕು ತೋರ
ದಂತೆ ಆಯಿತು. ಅಷ್ಟರಲ್ಲಿ ಫ್ರೆಂಚರು ಇಂಗ್ಲೀಷರಿಗೆ ಸೇರಿದ್ದ ಕಡಲೂ
ರನ್ನು ಸ್ವಾಧೀನಪಡಿಸಿಕೊಂಡರೆಂಬ ವಾರ್ತೆಯು ಬಂತು. ಒಡನೆ ಹೊರಟ
ಹೈದರನು, ಪರಮಕೋವಿಲ್ ಎಂಬ ಸ್ಥಳವನ್ನು ಮುತ್ತಿ ಸ್ವಾಧೀನಗೊಂಡ
ನಾದರೂ ಆರಣಿ ಬಳಿ ಇಂಗ್ಲೀಷ್ ಸೈನ್ಯದೊಂದಿಗೆ ಯುದ್ಧಮಾಡಿ, ಅಪ
ಜಯ ಹೊಂದಿದನು. ಇಂಗ್ಲೀಷರ ಮತ್ತೊಂದು ಸೈನ್ಯವು ಪಶ್ಚಿಮದಿಕ್ಕಿನ
ತಲಚೇರಿ ಮುಂತಾದ ಸ್ಥಳಗಳನ್ನು ಆಕ್ರಮಿಸಿತೆಂದು ವರ್ತಮಾನ ತಿಳಿದೊ
ಡನೆಯೇ ಟಿಪ್ಪೂ ಸುಲ್ತಾನನನ್ನು ದಂಡಿನೊಡನೆ ಆ ಪ್ರಾಂತ ಕಳುಹಿಸಿದನು.
ಪಾಣಿಯಾಣಿ ಎಂಬ ಸ್ಥಳದಲ್ಲಿ ಉಭಯಸೈನ್ಯಕ್ಕೂ ನಡೆದ ಯುದ್ಧದಲ್ಲಿ
ಅಲ್ಲೂ ಮೈಸೂರು ಸೈನ್ಯಕ್ಕೇ ಅಪಜಯವಾಯಿತು.

ಆರಣಿಯ ಯುದ್ಧವಾದಮೇಲೆ ಹೈದರನು ಆರ್ಕಾಡಿನ ಬಳಿ ಬಂದಿಳಿದು ಮುಂದೇನು ಮಾಡಬೇಕೆಂದು ಯೋಚಿಸುತ್ತಿದ್ದನು. ಅಷ್ಟರಲ್ಲಿ ಬೆನ್ನಿನಲ್ಲಿ ನವೆಯುಂಟಾಗಿ ಅದೇ ಬೆನ್ನುಫಣಿ ಜಾಡ್ಯವಾಗಿ ಪರಿಣಮಿಸಿತು. ಔಷಧೋಪಚಾರಗಳೆಲ್ಲವೂ ನಿರರ್ಥಕವಾದುವು. ಕೊನೆಗೆ ಅದೇ ಜಾಡ್ಯವೇ ಪ್ರಬಲವಾಗಿ ಹೈದರಲ್ಲೀ ನವಾಬನು ೧೭೮೨ನೆಯ ಡಿಸೆಂಬರು ೭ನೆಯ ತಾರೀಖಿನಲ್ಲಿ ಮೃತ್ಯುವಶನಾದನು.



# ಉ ಪ ಸಂ ಹಾ ರ

ರಾಜಧಾನಿಯಿಂದ ಬಹುದೂರದಲ್ಲಿ ಮೃತನಾದ್ದರಿಂದ, ಆ ವಾರ್ತೆಯು ಬಹಿರಂಗವಾದರೆ ಒಂದುವೇಳೆ ಸೈನ್ಯದ ಕಟ್ಟು ಒಡೆದು, ಜನರು ದಂಗೆ ಏಳಬಹುದೆಂದು ಶಂಕಿಸಿ, ಪೂರ್ಣಯ್ಯನವರು, ಮೀರ್‌ಸಾಧಕ್, ಅಬ್ಬಾ ಮಹಮದ್ ಮಿರ್ಜ, ತೋಷೀಖಾನೆ ಕೃಷ್ಣರಾಯರು, ಅಂಚೆ ಶಾಮಯ್ಯ ಮುಂತಾದ ಮುಖ್ಯಾಧಿಕಾರಿಗಳು, ಆರು ವಾರಗಳವರೆಗೆ ಹೈದರನು ಮೃತಪಟ್ಟ ಸಂಗತಿಯನ್ನು ಬಹು ಗೋಪ್ಯವಾಗಿಟ್ಟಿದ್ದರು. ಎಂದಿನಂತೆ ಪ್ರತಿದಿನವೂ ಆತನ ಗುಡಾರದೊಳಕ್ಕೆ ಹೋಗುವುದು, ವರದಿ ಹೇಳಿ ಅಪ್ಪಣೆ ಪಡೆಯುವುದು ಮುಂತಾದ ನಟನೆಯು ನಡೆಯುತ್ತಿದ್ದಿತು. ಮೃತನಾದ ಒಡನೆಯೇ ಶವವನ್ನು ಚೆನ್ನಾಗಿ ತೊಳೆಯಿಸಿ ಪೆಟ್ಟಿಗೆಯಲ್ಲಿಡಿಸಿ ಹೊರಕ್ಕೆ ದುರ್ವಾಸನೆ ಬರದಂತೆ ಪಚ್ಚಕರ್ಪೂರ, ಗಂಧ, ಪುನಗು, ಕಸ್ತೂರಿ ಮುಂತಾದ ಸುಗಂಧ ದ್ರವ್ಯಗಳನ್ನು ಅದರಲ್ಲಿ ತುಂಬಿ, ಆ ಪೆಟ್ಟಿಗೆಯನ್ನು ಕೋಲಾರಕ್ಕೆ ಕಳುಹಿಸಿದರು. ಇತ್ತ ಹಿರಿಯಮಗನಾದ ಟಿಪ್ಪೂ ಸುಲ್ತಾನನ ಬಳಿಗೂ ದೂತರು ಈ ಸಂಗತಿಯನ್ನು ಕೊಂಡೊಯ್ದು ತಿಳಿಸಿದರು. ಆತನು ಪಾಣಿಯಾಣಿಯಿಂದ ನೇರವಾಗಿ ಹೊರಟುಬಂದು, ಆ ಶವದ ಪೆಟ್ಟಿಗೆಯನ್ನು ಶ್ರೀರಂಗಪಟ್ಟಣಕ್ಕೆ ತರಿಸಿಕೊಂಡು ಅಲ್ಲಿ ಮಹಮ್ಮದೀಯ ಮತಪದ್ಧತಿಯ ಪ್ರಕಾರ ಊರ್ಧ್ವದೈಹಿಕಕಾರ್ಯಗಳನ್ನು ನೆರವೇರಿಸಿ ವಿಶೇಷ ದಾನಧರ್ಮಗಳನ್ನು ಮಾಡಿದನು.

ರಾಜ್ಯಾಧಿಪತಿಗಳು ಮಹಾಪಂಡಿತರಾಗಿಯೂ ಇದ್ದ ಉದಾಹರಣೆಗಳು ಪ್ರಪಂಚಚರಿತ್ರೆಯಲ್ಲಿ ಅಪೂರ್ವವಾಗಿ ಅಲ್ಲಲ್ಲೇ ದೊರೆವುವು. ಸಾಮಾನ್ಯವಾಗಿ ಸರ್ವರೂ ಸಾಧಾರಣಮಟ್ಟಿಗೆ ವಿದ್ಯಾಭ್ಯಾಸವನ್ನಾದರೂ ಮಾಡಿದವರಿರು ವರು. ಆದರೆ ನಮ್ಮ ಕಥಾನಾಯಕನಂತೆ ಶುದ್ಧನಿರಕ್ಷರರಾಗಿದ್ದು, ರಾಜ್ಯ ಭಾರವನ್ನು ಸಾಗಿಸಿದ ಪ್ರಭುಗಳ ಉದಾಹರಣೆಯು ಅತ್ಯಪೂರ್ವ. ಹೈದರ ನು ಹಿಂದೂಸ್ಥಾನಿ, ತೆಲುಗು, ತಮಿಳು, ಮಹಾರಾಷ್ಟ್ರ, ಕನ್ನಡಭಾಷೆಗಳಲ್ಲಿ ಧಾರಾಳವಾಗಿ ಮಾತನಾಡುತ್ತಿದ್ದನಾದರೂ ಯಾವ ಭಾಷೆಯ ಒಂದಕ್ಷರವೂ ಆತನಿಗೆ ಬರುತ್ತಿರಲಿಲ್ಲ. ಚಿತ್ರದಲ್ಲಿ ಕಾಣಿಸಿರುವ ಗುರುತೇ ಆತನ ಹೆಸರಿನ ಮೊದಲಕ್ಷರದ ಹಿಂದುಮುಂದು ರೂಪು; ಅದನ್ನೇ ಆತನು ಬಹುಮುಖ್ಯ ವಾದ ಕಾಗದಪತ್ರಗಳಿಗೆ ಹಸ್ತಾಕ್ಷರವನ್ನಾಗಿ ಗುರ್ತಿಸುತ್ತಿದ್ದನು. ಆದ ರೂ, ಈ ಲೋಪವನ್ನು ನಿವಾರಿಸುವಂತೆ, ಭಗವಂತನು ಆತನಿಗೆ ಅತಿಶಯ ಜ್ಞಾಪಕಶಕ್ತಿಯನ್ನು ಕೊಟ್ಟಿದ್ದನು. ಕೇಳಿದ್ದ ಮಾತನ್ನಾಗಲೀ, ನೋ ಡಿದ್ದ ಜನಗಳನ್ನಾಗಲೀ ಆತನು ಎಂದಿಗೂ ಮರೆಯುತ್ತಿರಲಿಲ್ಲ. ಹೀಗೆ ಅಕ್ಷರ ಶತ್ರುವಾಗಿದ್ದ ಆತನು ತನ್ನ ಹೃದಯದಲ್ಲಿ ಅಕ್ಷಯವಾಗಿದ್ದ ಧೈರ್ಯ ಸಾಹ ಸಗಳು, ಸೂಕ್ಷ್ಮಮತಿ, ಲೌಕಿಕಾನುಭವ ಮುಂತಾದುವುಗಳಿಂದ ತನ್ನ ಶತ್ರು ಗಳಿಗೆ ಸಕಲ ವಿಧಗಳಿಂದಲೂ ಪ್ರತೀಕಾರಮಾಡುತ್ತ ಅಭಿವೃದ್ಧಿಗೇರಿದನು. ಒಂದಾನೊಂದುಸಾರಿ, ಅಯಾಜ್ ಎಂಬಾತನನ್ನು ಚಿತ್ರದುರ್ಗದ ಸರ್ವಾಧಿ ಕಾರಿಯನ್ನಾಗಿ ನಿಯಮಿಸಿದಾಗ ಅವನು, ತನಗೆ ಓದುಬರಹಗಳು ಬಾರವೆಂ ದು ಹೇಳಲು-'ಓದುವುದನ್ನೂ ಬರೆಯುವುದನ್ನೂ ಮುತ್ಸದ್ದಿಯರಿಗೂ ಮುನ ಷಿಗಳಿಗೂ ಬಿಡು. ನನ್ನನ್ನು ನೋಡು. ಓದು ಬರಹವಿಲ್ಲದೆಯೇ ರಾಜ್ಯಾಧಿ ಕಾರ ಮಾಡುತ್ತಿಲ್ಲವೆ? ಕೈಯಲ್ಲಿ ಕೊರಡೆಯೂ ತಲೆಯಲ್ಲಿ ಬುದ್ಧಿಯೂ ಇದ್ದ ರೆ ಸಾಕು. ಎಲ್ಲಾ ಕೆಲಸವೂ ಸಾಗುವುದು' ಎಂದು ನುಡಿದನಂತೆ !

ಅವನಿಗೆ ದ್ರವ್ಯಾಸೆಯು ಅತಿಶಯವಾಗಿದ್ದಿತು. ದ್ರವ್ಯಾರ್ಜನೆಯಲ್ಲಿ ತನಗೆ ಉಪಕಾರಮಾಡಿದ ಆಪ್ತ ಸ್ನೇಹಿತರು ಬಂಧುಗಳು ಎಂಬ ವಿಚಾರಗಳ ನ್ನು ಸಹ ಗಮನಿಸಿದವನಲ್ಲ. ಹೊನ್ನು ಮಾತ್ರವಲ್ಲ. ಹೆಣ್ಣಿನ ವಿಷಯದ ಲ್ಲೂ ಅವನ ಆಸೆಗೆ ಅಂತ್ಯಪಾರವಿರಲಿಲ್ಲ. ರೂಪವತಿಯರಾದ ಸ್ತ್ರೀಯರು, ಎಲ್ಲಿದ್ದರೂ ಹಿಡಿತರಿಸಿ ತನ್ನ ಜನಾನಕ್ಕೆ ಸೇರಿಸಿಬಿಡುತ್ತಿದ್ದನು. ಅವನು

ಸಾಯುವ ವೇಳೆಯಲ್ಲಿ ಜನಾನಾದಲ್ಲಿ ನಾನಾಜಾತಿಯ ಆರುನೂರು ಮಂದಿ ಸ್ತ್ರೀಯರು ಇದ್ದರಂತೆ! ಇಷ್ಟು ಹೆಣ್ಣು ಎಂದರೆ ಭೂಮಿಯ ಸಂಪಾದನೆಯ ವಿಷಯದಲ್ಲಿದ್ದ ಆಸೆಯಂತೂ ಪೂರ್ಣವಾದುದೇ ಇಲ್ಲ. ಹೀಗೆ ಹೆಣ್ಣು ಹೊನ್ನು ಮಣ್ಣುಗಳ ಸಂಪಾದನೆಯಲ್ಲಿ ಸತ್ಯ ನ್ಯಾಯ ಧರ್ಮವೆಂಬುವುಗಳ ವಿಚಾರವೇ ಆತನ ಬಳಿ ಸುಳಿದುದಿಲ್ಲ. ತಾನು ಬಹು ಕಷ್ಟಪಟ್ಟು ಸಂಪಾದಿಸಿದ ರಾಜ್ಯವನ್ನು ತನ್ನ ಮಗ ಟಿಪ್ಪೂವು ತನ್ನ ಧೂರ್ತತನದಿಂದ ಕಳೆದುಬಿಡುತ್ತಾನೆಂದು ಆಗಾಗ ಮರುಗುತ್ತಿದ್ದನು. ಅದು ಕೊನೆಗೂ ನಿಶ್ಚಯವಾಯಿತು.

ಸಂಪೂರ್ಣವಾಗಿ ದುರ್ಗುಣಗಳೇ ಅಲ್ಲ-ಆತನಲ್ಲಿ ಹಲವು ಸದ್ಗುಣಗಳೂ ಇದ್ದುವು. ಹೈದರನಿಗೆ ಮತವೈರವಿರಲಿಲ್ಲ. ತನ್ನ ರಾಜ್ಯದಲ್ಲಿ ಹಿಂದೂ ಮುಹಮ್ಮದೀಯ, ಜೈನ, ಲಿಂಗಾಯಿತ, ಕ್ರೈಸ್ತ ಮುಂತಾದ ಎಲ್ಲಾ ಮತದವರನ್ನೂ ಒಂದೇ ರೀತಿಯಾಗಿ ಕಾಣುತ್ತಾ, ಅವರಿಗೆ ಬೇಕಾದ ಅನುಕೂಲತೆಗಳನ್ನು ಕಲ್ಪಿಸಿಕೊಡುತ್ತಿದ್ದನು. ಸಹಜವಾಗಿ ಆತನಿಗೆ ಲಭ್ಯವಾಗಿದ್ದ ಚಾತುರ್ಯ, ನಿರಾಲಸ್ಯ, ಸೂಕ್ಷ್ಮಮತಿ, ದರ್ಪ, ಧೈರ್ಯ ಶೌರ್ಯಗಳು ಮುಂತಾದುವುಗಳಿಂದ ಮೈಸೂರು ರಾಜ್ಯಾಧಿಪತ್ಯವನ್ನು ಅತ್ಯುನ್ನತಸ್ಥಿತಿಗೆ ತಂದು ಚರಿತ್ರ ಪ್ರಸಿದ್ಧವಾದುದನ್ನಾಗಿ ಮಾಡಿದನು.

ಹೀಗೆ ಮೈಸೂರು ಸಂಸ್ಥಾನವು ಕಾಲಕರ್ಮ ಸಂಯೋಗದಿಂದ ಹಿಂದೂ ಮುಹಮ್ಮದೀಯರಿಬ್ಬರಿಗೂ ವಾಸಸ್ಥಾನವಾಗಿ ಏರ್ಪಟ್ಟಿದೆ. ಎರಡು ಮತಗಳವರೂ ಇಲ್ಲಿ ಆಧಿಪತ್ಯ ಮಾಡಿ ನೆಲೆಗೊಂಡಿದ್ದಾರೆ. ಹೀಗಿರುವಲ್ಲಿ ಅವರು ಪರಸ್ಪರ ಸುಮನಸ್ಕತೆಯಿಂದ ಹೊಂದಿಕೊಂಡಿರದೆ ಬಡಿದಾಡುವುದು ಸರ್ವಥಾಯುಕ್ತವಲ್ಲ; ಅಲ್ಲವೆ! ಭಗವಾನನು, ಅವರವರಲ್ಲಿ ಕಾರಣಾಂತರಗಳಿಂದ ಪ್ರಾಪ್ತವಾಗಬಹುದಾದ ದ್ವೇಷಾಸೂಯೆಗಳನ್ನು ನಾಶಗೊಳಿಸಿ ಸ್ನೇಹ ಪ್ರೀತಿಗಳನ್ನು ದಿನದಿನಕ್ಕೆ ಹೆಚ್ಚಿಸುವುದರ ಮೂಲಕ, ಸಂಸ್ಥಾನದ ಜನತೆಯು ಶಾಂತತೆ ಸಮಾಧಾನಗಳಿಂದ ಏಕವಾಗಿ ಸುಖ ಸೌಭಾಗ್ಯಗಳನ್ನು ಅನುಭವಿಸುವಂತೆ ಅನುಗ್ರಹಿಸಲಿ

ಶೆ ಘಾ ಸ್ತ್ರ

+ ಶ್ರೀರಾಮ ಸಹಾಯಂ +

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ:—**

ಕ್ರಿ. ಶ. ಹದಿನೈದನೆಯ ಶತಮಾನದಲ್ಲಿ, ಭಾರತದೇಶದ ಉತ್ತರಭಾಗದಲ್ಲಿರುವ ಪಂಜಾಬ್ ದೇಶದಲ್ಲಿ ಜನಿಸಿ, ಜನಾಂಗಕ್ಕೆ ಧರ್ಮ ನೀತಿ ನ್ಯಾಯ ಭಗವದ್ಭಕ್ತಿ ಮುಂತಾದ ಸದ್ವಿಚಾರಗಳನ್ನು ಬೋಧಿಸಿ-ಏಕದೇವತಾರಾಧನೆಯನ್ನು ಪ್ರತಿಪಾದಿಸಿ ಚಿರಸ್ಮರಣೀಯನಾದ ಮಹಾತ್ಮನು ನಮ್ಮ ಪ್ರಕೃತ ಕಥಾನಾಯಕನಾದ **ಗುರು ನಾನಕ್** ಎಂಬಾತನು. ಈತನ ಬೋಧನೆಗೊಳಪಟ್ಟು, ತಮ್ಮ ಪೂರ್ವಪದ್ಧತಿ ಆಚಾರವ್ಯವಹಾರಗಳು ಭಗವದಾರಾಧನ ಕ್ರಮ ಮುಂತಾದುವುಗಳನ್ನು ಬದಲುಪಡಿಸಿಕೊಂಡವರು, ಆತನ ಶಿಷ್ಯರು ಅಥವ ಸಿಖ್ಖರು ಎಂದು ಕರೆಯಲ್ಪಟ್ಟರು. ಆತನ ನಿರ್ಯಾಣಾನಂತರ ಆ ಶಿಷ್ಯರದೇ ಒಂದು ಗುಂಪಾಗಿ ಅದು ದಿನದಿನಕ್ಕೆ ಬೆಳೆಯಲಾಗಿತು. ಹಾಗೆ ಬೆಳೆದು ಅಭಿವೃದ್ಧಿಯಾದ ಆ ಸಂಗಡವು, ಈಗ ಸಿಕ್ ಮತವೆಂದು ಪ್ರಸಿದ್ಧವಾದ ಜನಾಂಗವಾಗಿ, ಧೈರ್ಯಸಾಹಸಪರಾಕ್ರಮ ಕ್ಷಾತ್ರತೇಜ ಮುಂತಾದ ಸದ್ಗುಣಗಳಿಗೆ ನೆಲೆವೀಡೆನ್ನಿಸಿಕೊಂಡು ಭಾರತೀಯರಲ್ಲಿ ಬಹುಮಟ್ಟಿಗೆ ಗಣ್ಯಸ್ಥಾನವನ್ನು ಹೊಂದಿ, ಪರಕೀಯಜನಾಂಗದವರ ಗೌರವಾದರಗಳಿಗೂ ಪಾತ್ರವಾಗಿದೆ. ಈ ಸಿಕ್‌ಮತದ ಪ್ರಾರಂಭಪ್ರಚಾರ ಪ್ರಾದುರ್ಭಾವ ಮುಂತಾದ ವಿಚಾರಗಳನ್ನೂ, ಈ ಮತದ ಆದಿಗುರು ನಾನಕನ ತರುವಾಯ ಪೀಠಕ್ಕೆ ಬಂದ ಧರ್ಮಗುರುಗಳ ಚರಿತ್ರೆಯನ್ನೂ ಆಂಗ್ಲೇಯಭಾಷೆಯಲ್ಲಿ ಮ್ಯಾಕ್ಸ್ ಆರ್ಥರ್ ಮೆಕಾಲಿಫ್ ಎಂಬೊಬ್ಬ ಪಾಶ್ಚಾತ್ಯ ವಿದ್ವಾಂಸನು ಆರು ಬೃಹದ್ಗ್ರಂಥಗಳಲ್ಲಿ ವಿಪುಲವಾಗಿ ವರ್ಣಿಸಿ ಬರೆದಿದ್ದಾನೆ. ಈ ಚಿಕ್ಕ ಪುಸ್ತಕದಲ್ಲಿ ವಿಶೇಷ ವಿಸ್ತಾರಕ್ಕೆ ಅವಕಾಶವಿಲ್ಲವಾದರೂ ಗುರುನಾನಕನ ಜೀವಿತವೂ ಸಿಕ್‌ಮತದ ಅತಿ ಮುಖ್ಯ ಸಿದ್ಧಾಂತಗಳೂ ಮಾತ್ರ ವಿವರಿಸಲ್ಪಡುವುವು.

ಒಬ್ಬನು ತನ್ನ ಸ್ವಮತಸಿದ್ಧಾಂತವನ್ನಲ್ಲದೆ, ಇತರ ಮತವಿಚಾರಗ
ಳನ್ನು ಕುರಿತು ವಿವರಿಸುವ ಗ್ರಂಥಗಳನ್ನು ಓದುವುದು ಅಪಾಯಕಾರಿಯೆಂದು
ಹೇಳುವವರು ಕೆಲವರುಂಟು. ಹಾಗೆ ಓದುವುದರಿಂದ ಅವನಿಗೆ ತನ್ನ
ಮತದಲ್ಲೇ ಆಗಲಿ ಅಥವ ಇತರ ಯಾವ ಧರ್ಮದಲ್ಲೇ ಆಗಲಿ ದೃಢವಾದ
ನಂಬಿಕೆಯು ತಪ್ಪಿ ಅವನು ದೀಕ್ಷಾವಿಹೀನನಾಗುವನು ಎಂಬುದು ಅವರ
ಭಾವನೆ. 'ಲೋಕದಲ್ಲಿರುವ ಎಲ್ಲಾ ಮತಗಳೂ ಒಂದೊಂದು ದೃಷ್ಟಿ
ಯಿಂದ ಸತ್ಯವೇ ಇವೆ; ಅವು ಒಂದು ಅಂತಸ್ತಿನ ಜನಸಮೂಹಕ್ಕೆ
ಧರ್ಮಬೋಧಕವೇ ಆಗಿವೆ' ಎಂದು ಹೇಳತೊಡಗುವುದರಿಂದ-ಅವನಿಗೆ ತನ್ನ
ಮತದಲ್ಲೂ ಮತಸಿದ್ಧಾಂತಗಳಲ್ಲೂ ಸ್ಥಿರನಂಬಿಕೆಯಾಗಲೀ ಮತಾಚಾರ್ಯ
ರುಗಳಲ್ಲಿ ಭಕ್ತಿಗೌರವಗಳಾಗಲೀ ಇಲ್ಲದೆ, ಅವನು ಧರ್ಮಬಾಹ್ಯನಾಗು
ವನು-ಎಂದು ಅವರು ಯೋಚಿಸುವರು. ಅವರ ಈ ಯೋಚನೆಯಲ್ಲಿ ಅರ್ಥ
ವಿಲ್ಲದೆ ಇಲ್ಲ. ಆದರೆ ಆ ವಿಷಯದಲ್ಲಿ ಅಷ್ಟುಮಟ್ಟಿಗೆ ಭಯಪಡಬೇಕಾದ
ಕಾರಣವಿಲ್ಲವೆಂದು ತೋರುತ್ತದೆ. ಪರಧರ್ಮಗಳವರ ಗ್ರಂಥಗಳನ್ನು ಅವ
ಲೋಕಿಸುವುದರಿಂದ ತನ್ನ ಮತಕ್ಕೂ, ಸುತ್ತುಮುತ್ತಲೂ ವಾಸಿಸುವ ಇತ
ರರು ಅನುಸರಿಸುತ್ತಿರುವ ಧರ್ಮಗಳಿಗೂ ಯಾವಯಾವ ಭಾಗದಲ್ಲಿ ಸಾಮ್ಯ
ವಿದೆ-ಯಾವವಿಷಯದಲ್ಲಿ ಅವರು ನಮ್ಮಿಂದ ಬೇರೆಯಾಗುತ್ತಾರೆ, ಎಂಬ ಸಂ
ಗತಿಯು ತಿಳಿದು, ತನ್ಮೂಲಕ ಅವರ ಮತಧರ್ಮ ವಿಚಾರದಲ್ಲಿ ನಿಷ್ಕಾರಣ
ವಾಗಿ ನಮ್ಮ ಮನಸ್ಸಿನಲ್ಲಿ ನೆಲೆಸಿರುವ ಸಂಶಯ ದ್ವೇಷ ಭಾವಗಳು ದೂರ
ವಾಗಿ-ನಾಶವಾಗಿ, ಆ ಸ್ಥಾನದಲ್ಲಿ ಪ್ರೇಮಸೌಹಾರ್ದ ಭಾವಗಳು ಹುಟ್ಟಿ
ಬೆಳೆಯಲು ಅವಕಾಶವುಂಟಾಗುತ್ತದೆ. ಪರಧರ್ಮಗಳ ಆಚಾರ್ಯರು ಪರ್ಪ
ಡಿಸಿರುವ ಸಿದ್ಧಾಂತ ವಿಚಾರಗಳೇನೆಂಬುದನ್ನು ತಿಳಿದ ಮಾತ್ರಕ್ಕೇ ತನ್ನ
ಮತ ಧರ್ಮವನ್ನು ದ್ವೇಷಿಸಿ-ದೂಷಿಸಬೇಕೆಂದು ಅರ್ಥವಾಗುತ್ತದೆಯೋ?-
ಸದ್ಯಃಕಾಲದ ಲೋಕಸ್ಥಿತಿಯು ಬಹುಮಟ್ಟಿಗೆ ಬದಲಾಯಿಸಿದೆ. ನಮ್ಮ
ನಮ್ಮ ಮತಸಿದ್ಧಾಂತಗಳಲ್ಲೂ ಆಚಾರ್ಯರಲ್ಲೂ ಭಕ್ತಿ ಗೌರವಾದರಗಳ
ನ್ನು ನಾವು ಉಂಟಾಗಿರಬೇಕಾದುದು ಕರ್ತವ್ಯವೇ ಆದರೂ, ಹೊರಗೆ ಲೋ
ಕವು ಯಾವ ಮಾರ್ಗವನ್ನು ಅನುಸರಿಸಿ ಸಾಗುತ್ತಿದೆ ಎಂಬುದನ್ನು ತಿಳಿಯದಿ
ದ್ದರೆ ಸಹವಾಸಿಗಳಾದ ಇತರ ಧರ್ಮಗಳವರೊಂದಿಗೆ ಸಹಾನುಭೂತಿಯಿಂದ

ನಡೆಯಲು ಸಾಧ್ಯವಿಲ್ಲ. ಪ್ರೇಮ ಸೌಹಾರ್ದಗಳು ಧರ್ಮಮೂಲವಾಗಿ ಏರ್ಪಟ್ಟರೆ, ಆಗ ಅವು ಸ್ಥಿರವಾಗಿ ನಿಲ್ಲುವುವಲ್ಲದೆ, ಕೇವಲ ತಿಂಡಿ ತೀರ್ಥಗಳ ಮೂಲಕವೂ ಕನಕ ಕಾಮಿನಿಯರ ಮೂಲಕವೂ ಏರ್ಪಟ್ಟ ಸ್ನೇಹವು ಬಹು ಕಾಲ ಉಳಿಯಲಾರದು. ಕಾಲಕರ್ಮ ಸಂಯೋಗದಿಂದ ವಿವಿಧ ಧರ್ಮಗಳವರು ಏಕತ್ರ ವಾಸಿಸಿಯೇ ತೀರಬೇಕಾಗಿರುವ ಪರಿಸ್ಥಿತಿಯು ನಮ್ಮ ದೇಶದಲ್ಲಿ ಈಗ ಪ್ರಾಪ್ತವಾಗಿದೆ. ಇಂತಹ ಸಂದರ್ಭದಲ್ಲಿ ಕೂಪಸ್ಥ ಮಂಡೂಕದಂತೆ ನಾವು ಪ್ರತ್ಯೇಕ ಜೀವಿಸಿರುವುದು ಸಾಧ್ಯವಿಲ್ಲ. ಲೌಕಿಕ ಯಾತ್ರೆಯಲ್ಲಿ ಪತ್ತು ಜನರೊಂದಿಗೆ ಹೆಜ್ಜೆಯಿಟ್ಟು ಸಾಗಬೇಕಾಗಿರುವ ಈ ಕಾಲದಲ್ಲಿ ನಾವು ಏಕಾಂಗಿಗಳಾಗಿ ನಿಲ್ಲುವುದಾದರೂ ಶಕ್ಯವಿಲ್ಲ.

ಹೀಗೆಂದ ಮಾತ್ರದಿಂದ, ನಿನ್ನ ಮತ ಧರ್ಮವನ್ನೂ ಆಚಾರ ವಿಚಾರಗಳನ್ನೂ ತ್ಯಜಿಸಿ ಇಂದೊಂದು ನಾಳೆಯೊಂದರಂತೆ ಮತಗಳನ್ನು ಅನುಸರಿಸುತ್ತಾ ನಡೆಯಬೇಕೆಂದು ಹೇಳಿದಂತಾಗಲಿಲ್ಲವಷ್ಟೆ! ಅಧರ್ಮ ಅಸತ್ಯ ಮೋಸ ಕಾಪಟ್ಯ ದಂಭ ಅನ್ಯಾಯ ಮುಂತಾದುವು ಎಂದೂ ಯಾವ ಮತ ಕರ್ತರಿಗೂ ಧ್ಯೇಯಗಳಾಗಿದ್ದುದಿಲ್ಲವಾದುದರಿಂದ, ವಿವಿಧ ರುಚಿಗಳನ್ನುಂಟಾಗಿದ್ದ ಲೋಕದ ಜನ ಸಮುದಾಯಕ್ಕೆ ಸತ್ಯವನ್ನೇ ವಿವಿಧ ಮಾರ್ಗಗಳಿಂದ ಬೋಧಿಸಿರುವ ಹಲವು ಮಂದಿ ಸಾಧುಸಂತರ ಮತ್ತು ಮತಾಚಾರ್ಯರ ಆಶಯಗಳನ್ನು ತಿಳಿಯುವುದು ಯಾವನಿಗೂ ಬಾಧಕವಾಗಲಾರದು. ಪರರ ವಿಚಾರವ ತಿಳಿದಮಾತ್ರದಿಂದಲೇ ನಮ್ಮ ಮತದ ವಿಷಯದಲ್ಲಿ ನಮಗೆ ನಂಬಿಕೆಯು ತಪ್ಪುವಂತಿದ್ದರೆ, ಅಂತಹ ಕ್ಷುದ್ರನಂಬಿಕೆಯು ಇರುವುದಕ್ಕಿಂತಲೂ ಇಲ್ಲದಿರುವುದೇ ಮೇಲಲ್ಲವೆ? ಪರಪುರುಷನ ದರ್ಶನಮಾತ್ರದಿಂದಲೇ ತನ್ನ ಸತೀಧರ್ಮಕ್ಕೆ ಹಾನಿಯನ್ನುಂಟುಮಾಡಿಕೊಳ್ಳುವವಳ ಪಾತಿವ್ರತ್ಯವು ಎಷ್ಟುದೃಢವಾದುದೆನ್ನಬಹುದು? ಶೀನಿದಮಾತ್ರದಲ್ಲೇ ಉದುರಿಹೋಗುವಂತಹ ಮೂಗು ಎಷ್ಟುದಿನ ಮುಖದಮೇಲಿದ್ದು ಬಾಳಬಲ್ಲುದು! ಹಾಗಲ್ಲ-ಅಪನಂಬಿಕೆಪಡಬೇಕಾದುದಿಲ್ಲ. ಭಾರತದೇಶವು ಧರ್ಮಬಾಹ್ಯದೇಶವಲ್ಲ. ಇಲ್ಲಿಯ ಆಸ್ತಿಕತೆಗೆ ಎಂದೂ ಕುಂದುಂಟಾದುದಿಲ್ಲ. ರಾವಣ ಕೀಚಕ ಮುಂತಾದ ದುರುಳರ ನಿರ್ಬಂಧದಲ್ಲಿ ಸಿಕ್ಕಿದ್ದರೂ ತಮ್ಮ ಪಾವಿತ್ರ್ಯತೆಯನ್ನು ಕಾಯ್ದುಕೊಂಡಂತಹ ದಾರ್ಢ್ಯವನ್ನುಂಟಾಗಿದ್ದ ಮಹಾಪತಿವ್ರತೆಯರು ಜನ್ಮಿಸಿದ ದೇಶವಿದು.

ನಮ್ಮವರಲ್ಲಿ ನೆಲೆಸಿರುವ-ತ್ರಿಮತಾಚಾರ್ಯರಿಂದ ನಮ್ಮ ದೇಶದಲ್ಲಿ ಸ್ಥಾಪಿತ ವಾಗಿರುವ ಧರ್ಮವು 'ಉಫ್' ಎಂದಮಾತ್ರಕ್ಕೇ ಹಾರಿಹೋಗುವಂತಹುದಲ್ಲ. ಆದುದರಿಂದ ಅತ್ತಿತ್ತ ತಿರುಗಿನೋಡಿದಮಾತ್ರದಿಂದಲೇ ನಮ್ಮ ಧರ್ಮಕ್ಕೆ ಕುಂದುಂಟಾಗುವುದೆಂದು ಯಾರೂ ಬೆದರಬೇಕಾದುದಿಲ್ಲ ಲೌಕಿಕದ ನಮ್ಮ ಪ್ರೇಮಸೌಹಾರ್ದಭಾವಗಳು ದೃಢಪಟ್ಟು, ಲೋಕಯಾತ್ರೆಯು ಸುಪಥದಲ್ಲಿ ಸಾಗಬೇಕಾದುದು ಆವಶ್ಯಕವಾದುದರಿಂದ, ನಮ್ಮ ನೆರೆಯ ಹಲವರ ಧರ್ಮವೇನೆಂಬುದನ್ನು ತಿಳಿಯುವುದು ಅಪ್ರಕೃತಿವೆನ್ನಿಸಲಾರದು. ಮೇಲೂ ಕಮಲಪುಷ್ಪವು ಕೆಸರಿನಲ್ಲಿದ್ದರೂ ಅದನ್ನು ಸಂಗ್ರಹಿಸುವುದಿಲ್ಲ ವೇನು ? ಹಾಗೆಯೇ ಸತ್ಯ ಧರ್ಮ ನೀತಿನ್ಯಾಯಗಳು ಎಂತಹ ಸ್ಥಳದಲ್ಲಿ ದ್ದರೂ ಸಂಗ್ರಹಾರ್ಹವಲ್ಲವೆ? ಒಳ್ಳೆಯ ಮಾತನ್ನು ಎಂದು ಯಾರು ಹೇಳಿ ದ್ದರೂ ಕೇಳಿ-ಅದರಂತೆ ನಾವು ಇಂದು ನಡೆಯಬಾರದೇಕೆ ?—

ಈ ಧ್ಯೇಯವನ್ನು ಕಣ್ಣೆದುರಿನಲ್ಲಿಟ್ಟುಕೊಂಡು, ಸುಬೋಧ ಕುಸು ಮಾಂಜಲಿ ಗ್ರಂಥಮಾಲೆಯು, ವಿವಿಧಪ್ರದೇಶಗಳಿಂದ ಪುಷ್ಪಸಂಗ್ರಹಣ ಮಾಡಿ ಕರ್ಣಾಟಕಮಾತೃವಿನ ಅಡಿದಾವರೆಗಳಲ್ಲಿ ಒಪ್ಪಿಸಬೇಕೆಂದು ಪ್ರಯತ್ನಿ ಸುತ್ತಿದೆ. ಅದರ ಈ ಸೇವಾಕಾರ್ಯವು ಸಾರ್ಥಕಗೊಳ್ಳುವಂತೆ ಕರ್ಣಾಟಕ ಭಾಷಾಬಾಂಧವರು ಸ್ವಹಸ್ತ ಪರಹಸ್ತ ಸಹಕರಿಸಬೇಕಾಗಿ ಪ್ರಾರ್ಥಿಸು ತ್ತೇವೆ.

ಬೆಂಗಳೂರು,
ತಾ|| ೨೬-೫-೨೯.

ಇತಿ ಸುಜನ ವಿಧೇಯ,
ಯಂ. ರಾಮರಾವ್.

ಸುಬೋಧ ಕುಸುಮಾಂಜಲಿ ಗ್ರಂಥಮಾಲಾ



ಮಹಾತ್ಮಾ ಗುರು ನಾನಕ್

ಶ್ರೀರಾಮಸಹಾಯಂ

ಸಿಕ್‌ಮತಸ್ಥಾಪಕ-ಮಹಾತ್ಮಾ

# ಗುರು ನಾನಕ್

**ಅಧ್ಯಾಯ ೧** **"ಶಿಶುಜನನ"**

ನಮ್ಮ ಮಾತೃಭೂಮಿಯಾದ ಈ ಭಾರತದೇಶವನ್ನು ಅಖಿಳ ಧರ್ಮಗಳ ಸಮ್ಮೇಳನ ಕ್ಷೇತ್ರವೆಂದು ಕರೆಯಬಹುದು. ಆಕಾಶದಿಂದ ಬಿದ್ದ ಮಳೆಯ ನೀರು ವಿವಿಧ ಮಾರ್ಗಗಳಲ್ಲಿ ಹರಿದರೂ ಕೊನೆಗೆ ಅದು ಹೇಗೆ ಸಾಗರಕ್ಕೇ ಹೋಗಿ ಸೇರುವುದೋ, ಹಾಗೆಯೇ ಪೃಥ್ವಿಯ ವಿವಿಧ ಧರ್ಮಗಳೂ-ಪ್ರಪಂಚದ ಯಾವ ಭಾಗದಲ್ಲಿ ಹುಟ್ಟಿ ಬೆಳೆದರೂ - ಕೊನೆಯಲ್ಲಿ ಸಮಸ್ತ ತತ್ವ ರತ್ನಾಕರವೆಂಬಂತೆ ಶೋಭಿಸುತ್ತಿರುವ ವೇದ ಧರ್ಮವನ್ನು, ಅರ್ಥಾತ್ ಸನಾತನ ಹಿಂದೂ ಧರ್ಮವನ್ನೇ ಸೇರದಿದ್ದರೆ ಉಪಾಯವಿಲ್ಲ. ಇದು ಕೇವಲ ಅಭಿಮಾನವಶರಾಗಿ ನಾವು ಹೇಳಿಕೊಳ್ಳುವ ಆತ್ಮ ಪ್ರತಿಷ್ಠಾಪರ ಉದ್ಗಾರವೆಂದು ಯಾರೂ ಭಾವಿಸಬಾರದು. ಹಿಂದೂ ಮತದಲ್ಲಿ ಪೃಥ್ವಿಯ ಸಕಲ ಮತಗಳಿಗೆ ಆಧಾರಭೂತವಾದ ತತ್ವಗಳೂ ಬೀಜರೂಪದಿಂದ ನೆಲೆಸಿವೆ. ಸಗುಣೋಪಾಸನೆ, ನಿರ್ಗುಣೋಪಾಸನೆ, ಏಕದೇವತಾರಾಧನೆ, ಬಹುದೇವತಾರಾಧನೆ. ಶಿವಸರ್ವೋತ್ತಮತ್ವ, ವಿಷ್ಣುಸರ್ವೋತ್ತಮತ್ವ, ಗಣಪತಿ, ಶಕ್ತಿ, ಸೂರ್ಯ, ಅಗ್ನಿ ಮುಂತಾದ ಹಲವು ದೇವತಾ ಆರಾಧನೆ, ಜೀವ ಪರಮಾತ್ಮರ ಐಕ್ಯತೆ-ಭಿನ್ನತೆ, ಪ್ರಕೃತಿ ತತ್ವಪೂಜೆ, ಯಜ್ಞಾಚರಣೆ, ಅಹಿಂಸಾಧರ್ಮ ಮುಂತಾದ ಹಲವು ಧರ್ಮಗಳ ಐಕ್ಯತೆಯನ್ನು ಹಿಂದೂ ಧರ್ಮದಲ್ಲಿ ಕಾಣಬಹುದು. ಪೃಥ್ವಿಯಲ್ಲಿರುವ ಸಕಲ ಮತಗಳ ಆದಿಮೂಲತತ್ವಗಳೂ ಈ ಮತತತ್ವಗಳಲ್ಲಿ ಅಡಗಿರುವುದರಿಂದ, ಪರದೇಶದಿಂದ ಇಲ್ಲಿಗೆ ಬರುವ ಯಾವುದೊಂದು ಮತವನ್ನೂ ಧರ್ಮವನ್ನೂ ಇದು ತಿರಸ್ಕರಿಸದೆ-

ದ್ವೇಷಿಸದೆ ತನ್ನಲ್ಲೇ ಐಕ್ಯಹೊಂದಿಸಿಕೊಳ್ಳಲು ಶಕ್ತಿಯುಳ್ಳುದಾಗಿದೆ. ವಿಶಾಲವಾದ ಹಿಂದೂಧರ್ಮವೃಕ್ಷದ ನೆಳಲಿನಲ್ಲಿ ಪೃಥ್ವಿಯ ಯಾವ ದೇಶದ ಯಾವ ಧರ್ಮವಾದರೂ ಆಶ್ರಯಗೊಳ್ಳಲು ಶಂಕಿಸಬೇಕಾದುದಿಲ್ಲ.

ಹೀಗೆ ಹೇಳುವುದರಿಂದ, ತೋರಿಕೆಗೆ ಪರಸ್ಪರವಿರುದ್ಧಗಳೆಂಬಂತಿರುವ ಮೇಲ್ಕಂಡ ಹಲವು ಧರ್ಮಗಳು, ನಿಯಮನಿಬಂಧನೆಗಳಿಲ್ಲದೆ ಏಕತ್ರ ಬೆರೆದು ಹಿಂದೂಧರ್ಮವೆಂಬುದು ಹುಳಿ ಉಪ್ಪು ಕಾರ ಒಗರು ಕಹಿ ಸಿಹಿ ಮುಂತಾದ ಹಲವು ರುಚಿಗಳು ಒಂದಾಗಿ ಬೆರೆದ ಪದಾರ್ಥದಂತೆ-ಅದೊಂದು ವಿಜಾತೀಯಸ್ಥಿತಿಯನ್ನುಂಟಾಗಿದೆಯೆಂಬ ಭಾವನೆಯು ಹಲವರಿಗೆ ಬರಬಹುದು ; ಅಥವ ಬತ್ತ ಮೊಸರುಗಳನ್ನು ಕಲೆಸಿದಂತೆ-ಒಂದಕ್ಕೊಂದಕ್ಕೆ ಸಂಬಂಧವಿಲ್ಲವೆ ಸಕಲಬಗೆಯ ಹೊಲಸೂ ಏಕತ್ರ ಬೆರೆದು ಹಿಂದೂ ಧರ್ಮವೆಂಬುದು ಪರಸ್ಪರ ವಿರುದ್ಧಭಾವವುಳ್ಳುದಾಗಿದೆ, ಎಂದಾದರೂ ಕೆಲವರಿಗೆ ತೋರದಿರದು. ಏಕದೇವತಾರಾಧನೆಯೂ ಸರಿ, ಬಹುದೇವತಾರಾಧನೆಯೂ ಸರಿ; ಜೀವಪರಮಾತ್ಮರ ಐಕ್ಯತೆಯೂ ಸರಿ-ಭಿನ್ನತೆಯೂ ಸರಿ ; ಶಿವನೂ ಸರ್ವೋತ್ತಮದೇವತೆ-ವಿಷ್ಣುವೂ ಸರ್ವೋತ್ತಮದೇವತೆ ; ಹೀಗೆ ಅದೂ ಸರಿ -ಇದೂ ಸರಿ ಎಂದು ಹೇಳುತ್ತಿದ್ದರೆ ಯಾವುದನ್ನು ನಂಬುವುದು ? ಯಾವ ಮಾರ್ಗವನ್ನು ಅನುಸರಿಸುವುದು ? ಹೀಗೆ ನಿಶ್ಚಿತವಲ್ಲದ ವಿವಿಧಮಾರ್ಗಗಳನ್ನು ಅನುಸರಿಸಿ ಕೊನೆಗೆ ಗತಿಮುಟ್ಟುವುದೆಂದಿಗೆ ? ಎಂಬ ಯೋಚನೆಯು ಬರುವುದಾದರೂ ಸ್ವಾಭಾವಿಕ ! ಸಾಮಾನ್ಯ ಮನೋಭಾವವುಳ್ಳ ಯಾವನಿಗಾದರೂ ಇದು ಶುದ್ಧ ಅವ್ಯವಸ್ಥೆಯ ಕುರುಹೆಂದು ತೋರದಿರಲಾರದು. ಆದರೆ ಹಾಗಲ್ಲ. ಈ ವೈವಿಧ್ಯಕ್ಕೆ ಒಂದು ಪ್ರತ್ಯುತ್ತರವಿದೆ. ಹಿಂದೂಧರ್ಮವು ಆದಿಯಿಂದಲೂ ಪ್ರಕೃತಿನಿಯಮವನ್ನು ಅನುಸರಿಸಿ ಬಂದಿದೆಯಲ್ಲದೆ ಲೋಕವಿರುದ್ಧವಾಗಿಲ್ಲ. ಲೋಕದ ಪ್ರಕೃತಿಯು ಅರ್ಥಾತ್ ಜನತಾಸ್ವಭಾವವು ಯಾವ ಕಾಲದಲ್ಲೂ ಏಕಮುಖವಾಗಿದ್ದುದಿಲ್ಲ.—ಇರುವುದು ಸ್ವಾಭಾವಿಕವೂ ಅಲ್ಲ. ಏಕೆಂದರೆ ಲೋಕದಲ್ಲಿರುವ ಜನರೆಲ್ಲರೂ ಎರಡು ಕಣ್ಣು ಎರಡು ಕಾಲುಗಳುಳ್ಳ ಮನುಷ್ಯರೇ ಆದರೂ ಎಲ್ಲರ ಆತ್ಮಿಕ ಬೆಳವಣಿಗೆಯೂ ಒಂದೇ ಅಂತಸ್ತಿನಲ್ಲಿರಲಾರದು. ವ್ಯಕ್ತಿಯ ಮತಧರ್ಮಾಭಿಮಾನ, ಆಸ್ತಿಕತೆ, ಶ್ರದ್ಧಾ ಮುಂತಾದುವು ಅವನ ಆತ್ಮಿಕ ಬೆಳವಣಿಗೆ

ಯನ್ನು ಕುರಿತುದಲ್ಲದೆ, ಸಮಾನವರ್ಣದ ರಕ್ತವನ್ನಾಗಲೀ, ದೇಹಪುಷ್ಟಿಯನ್ನಾಗಲೀ ಅಂಗಸೌಷ್ಟವದ ಪ್ರಮಾಣವನ್ನಾಗಲೀ ಕುರಿತು ಏರ್ಪಟ್ಟುವಲ್ಲ. ಲೋಕದಲ್ಲಿರುವವರೆಲ್ಲರೂ ಸಿಹಿಯನ್ನೊಂದನ್ನೇ ಆಗಲಿ, ಹುಳಿಯನ್ನೊಂದನ್ನೇ ಆಗಲಿ ಅಥವ ಕಾರವನ್ನೊಂದನ್ನೇ ಆಗಲಿ ತಿನ್ನಬೇಕೆಂದು ವಿಧಿಸುವುದು ಹೇಗೆ ಪ್ರಕೃತಿ ವಿರುದ್ಧನಿಯಮವೋ ಹಾಗೆಯೇ ಲೋಕದಲ್ಲಿ ವಿವಿಧರುಚಿಗಳೂ ವಿವಿಧಭಾವನೆಗಳೂ ಇರತಕ್ಕುದಾದರೂ ಸ್ವಾಭಾವಿಕವು. ಹಾಗಲ್ಲದೆ, ಒಂದೇ ಒಂದು ನಿಯಮವನ್ನಿಟ್ಟು 'ಎಲ್ಲರೂ ಅದನ್ನೇ ಅನುಸರಿಸಬೇಕು' ಎಂದರೆ-ಕೆಲವರ ಸ್ವಭಾವಕ್ಕೆ ಅದು ವಿರುದ್ಧವಾಗಿರಬಹುದಾದುದರಿಂದ ಅವರು ಅದನ್ನು ಬಿಟ್ಟು ಬೇರೆಯಾಗಿ ನಿಲ್ಲುವುದು ತಪ್ಪದು. ಇದರಿಂದ ದಿನ ದಿನಕ್ಕೆ ಭಿನ್ನತೆಯು ವೃದ್ಧಿಯಾಗುತ್ತ ಹೋಗುವುದು-ಸಮಾಜದ ಕಟ್ಟು ಒಡೆಯುವುದು. ಅನೈಕಮತ್ಯವು ಹೆಚ್ಚಿ ಜನಾಂಗದ ಶಕ್ತಿಹರಣ ಮಾಡುವುದು. ಧರ್ಮದ್ವೇಷವು ಪರಸ್ಪರ ವ್ಯಕ್ತಿದ್ವೇಷ ಸಮಾಜದ್ವೇಷಗಳನ್ನು ಹುಟ್ಟಿಸಿ ಬೆಳಸಿ ಪೋಷಿಸುವುದು.

ಹೀಗಾಗದಂತೆ, ವಿವಿಧ ಭಾವಗಳನ್ನುಂಟಾಗಿದ್ದರೂ ವಿವಿಧ ವೃತ್ತಿಗಳನ್ನು ಅವಲಂಬಿಸಿದ್ದರೂ, ಒಬ್ಬನೇ ತಂದೆಯ ಆಶ್ರಯದಲ್ಲಿ-ಅವಿಭಕ್ತ ಕುಟುಂಬದಲ್ಲಿ ವಾಸಿಸುವ ಹತ್ತುಮಂದಿ ಮಕ್ಕಳಂತೆ, ಧರ್ಮ ವಿಚಾರದಲ್ಲೂ ವಿವಿಧ ರುಚಿ ಭೇದಗಳನ್ನು ಮೆಚ್ಚಿ ಅಪೇಕ್ಷಿಸುವ ಸಕಲರೂ ಏಕತ್ರ ವಾಸಿಸಲು ಅನುಕೂಲಿಸಲೆಂಬ ಮಹೋದ್ದೇಶದಿಂದ, ಮಹಾಮಹಿಮರಾದ ಆರ್ಯ ಮಹರ್ಷಿಗಳು ಧರ್ಮ ತತ್ವವನ್ನು ವಿವಿಧ ದೃಷ್ಟಿ ಕೋಣಗಳಿಂದ ವಿಚಾರಿಸಿ, ಆಯಾ ದೃಷ್ಟಿಯಿಂದ ವ್ಯಕ್ತವಾಗುವ ಧ್ಯೇಯವನ್ನು ಸಿದ್ಧಾಂತ ಸ್ವರೂಪಕ್ಕಿಳಿಸಿ, ಅವೆಲ್ಲಕ್ಕೂ ಈ ಹಿಂದೂಧರ್ಮ ವೃಕ್ಷದ ಅಡಿಯಲ್ಲಿ ಆಶ್ರಯ ಸಿಕ್ಕುವಂತೆ ಏರ್ಪಡಿಸಿದರು. ಹೀಗೆ ಸಕಲ ಧರ್ಮಗಳ ಸಮ್ಮಿಳಿತವಾಗಿ ಹಿಂದೂ ಧರ್ಮವೆಂಬುದೊಂದು ಬೃಹದ್ಧರ್ಮ ಗೃಹವಾಗಿದೆ. ಸಗುಣಾರಾಧಕನೂ ನಿರ್ಗುಣಾರಾಧಕನೂ, ಏಕದೇವತಾರಾಧಕನೂ, ಬಹುದೇವತಾರಾಧಕನೂ, ಯಜ್ಞ ಪಕ್ಷಪಾತಿಯೂ,-ಅಹಿಂಸಾ ಧರ್ಮಾಭಿಮಾನಿಯೂ, ಶೈವನೂ, ವೈಷ್ಣವನೂ, ಶಾಕ್ತೇಯನೂ, ಅಗ್ನ್ಯಾರಾಧಕನೂ, ಬ್ರಹ್ಮಚಾರಿ, ಗೃಹಸ್ಥ, ಸನ್ಯಾಸಿ, ಅವಧೂತರೂ ತಮತಮಗೆ ಇಷ್ಟವೆನ್ನಿಸುವ ಧರ್ಮವನ್ನು

ಅವಲಂಬಿಸಿದರೂ, ಈ ಸಮಸ್ತಕ್ಕೂ ಮೂಲಭೂತವಾದ ಒಂದೇ ಜಗದಾದಿ ತತ್ವಕ್ಕೆ ಸಂಬಂಧಿಸಿ ಇರಲು ಅವಕಾಶವುಂಟಾಗಿದೆ. ಹಿಂದೂಧರ್ಮವನ್ನು ಕುರಿತು ವಿಚಾರಿಸುವವರು, ಹೀಗೆ ವಿವಿಧ ದೃಷ್ಟಿಕೋಣಗಳಿಂದ ಅದು ಜನಾಂಗದ ಐಕ್ಯತೆಯನ್ನು ಸಾಧಿಸಲು ಆದಿಕಾಲದಿಂದಲೂ ಪ್ರಯತ್ನಿಸುತ್ತಾ ಬಂದಿದೆಯೆಂಬ ಅಂತರ್ಯ ತತ್ವದ ನಿಶ್ಚಯ ಸ್ವರೂಪವನ್ನು ಕುರಿತು ಚಿಂತಿಸಬೇಕಲ್ಲದೆ, ಒಂದೊಂದು ಶಾಖೆಯನ್ನೇ ನೋಡಿ, ಆ ದೃಷ್ಟಿಯಿಂದಲೇ ಮತ್ತೊಂದರ ಸ್ಥಿತಿಯನ್ನು ಕುರಿತು ವಿಮರ್ಶಿಸತೊಡಗಬಾರದು. ಹಿಂದೂ ಧರ್ಮವನ್ನು ಸೇವಿಸಬೇಕೆಂಬ ಇಚ್ಛೆಯುಳ್ಳವರಾದರೂ ಮೇಲ್ಕಂಡ ಸಕಲ ಧರ್ಮಗಳ ಮೂಲಭೂತವಾದ ಈ ಬೃಹದ್ಧರ್ಮವೃಕ್ಷದ ಪಾದಮೂಲದಲ್ಲಿ -ಬೇರಿನ ಬಳಿಯಲ್ಲಿ ತಮ್ಮ ಶ್ರದ್ಧಾಭಕ್ತಿಗಳೆಂಬ ನೀರನ್ನು ಸುರಿಯಬೇಕಲ್ಲದೆ ಎಲೆಗಳ-ಸುಳಿಗಳ ಬಳಿಯಲ್ಲಿ ಸುರಿಯತೊಡಗಬಾರದು. ಗಿಡವನ್ನು ಬೆಳೆಯಿಸಲು ಬುಡಕ್ಕಲ್ಲದೆ-ಸುಳಿಗೆ ಯಾವನಾದರೂ ನೀರನ್ನು ಹೊಯ್ಯುವನೇ ? ಹೀಗೆ ಅಸ್ವಾಭಾವಿಕ ರೀತಿಯ ಆಚರಣೆಯಿಂದ, ಸ್ವಾಭಾವಿಕವಾಗಿಯೇ ಮತ - ಧರ್ಮಾದಿಗಳಿಂದ ದೊರೆಯಬೇಕಾದ ಪ್ರತಿಫಲವು ಹೇಗೆ ದೊರೆತೀತು ?

ಆದರೆ ಇಷ್ಟು ಉದಾರಭಾವವಿದ್ದು ಸ್ಥಾಪಿತವಾದುದಾದರೆ, ವಿವಿಧ ಶಾಖೆಗಳಾಗಿರುವ ದ್ವೈತ ಅದ್ವೈತ ವಿಸಿಷ್ಟಾದ್ವೈತಗಳೂ, ಶೈವ ವೈಷ್ಣವ ಶಾಕ್ತೇಯ ಗಾಣಾಪತ್ಯ ಸೌರ ಕಾಪಾಲಿ ಮುಂತಾದ ಧರ್ಮಗಳೂ ವೀರಶೈವ-ಲಿಂಗವಂತ ಧರ್ಮವೂ ಆಧುನಿಕ ಕಾಲದಲ್ಲಿ ಪ್ರಾರಂಭವಾದ ಸಿಕ್, ಕಬೀರ್ ಪಂಥಿ, ವಲ್ಲಭಾಚಾರ್ಯಮತ ಮುಂತಾದುವೂ, ಈಚೆಗಿನ ಬ್ರಹ್ಮಸಮಾಜ ಆರ್ಯಸಮಾಜ ಮುಂತಾದ ಧರ್ಮಸಂಸ್ಥೆಗಳ ಒಂದೊಂದೂ ತನ್ನ ಸರ್ವೋತ್ತಮತ್ವವನ್ನೇ ಸ್ಥಾಪಿಸಿಕೊಳ್ಳಲೆಳೆಸಿ ಬಡಿದಾಡಲು ಕಾರಣವೇನೆಂದು ಯಾರಾದರೂ ಪ್ರಶ್ನಿಸಬಹುದು. ಇದಕ್ಕೆ ಒಂದು ಕಾರಣವಿದೆ. ಲೋಕದಲ್ಲಿರುವ ಹಲವು ಕೋಟಿಮಾನವರಲ್ಲಿ ಯಾರಿಬ್ಬರ ಮೂಗುಗಳು ಒಂದೇ ರೀತಿಯಾಗಿಲ್ಲವೆಂಬುದೂ ಸರ್ವರ ಮುಖಗಳೂ ಬೇರೆಬೇರೆ ಆಕಾರಗಳನ್ನುಂಟಾಗಿರುವುವೆಂಬುದೂ ಸರ್ವವಿದಿತ ವಿಷಯವಲ್ಲವೆ ? ಈ ಸರ್ವಸಾಮಾನ್ಯ ಪ್ರಕೃತಿಧರ್ಮವನ್ನನುಸರಿಸಿಯೇ ಹುಟ್ಟುವ ಸಮಸ್ತ ವಸ್ತುಗಳೂ

ವಿವಿಧನಾಮರೂಪಗಳಿಂದ ತನ್ನ ವ್ಯಕ್ತಿತ್ವಸ್ಥಾಪನೆಗಾಗಿಯೂ ಸ್ಥಿತಿಗಾಗಿ ಯೂ ಜೀವಿತಕ್ಕಾಗಿಯೂ ಹವಣಿಸತಕ್ಕುದಾದರೂ ಸ್ವಾಭಾವಿಕವಾಗಿಯೇ ಇದೆ. ಹಾಗೆಯೇ ಮೇಲೆ ಹೇಳಿದಂತೆ ಮೂಲತತ್ವಗಳು ಒಂದೇ ಆಗಿದ್ದರೂ ದೃಷ್ಟಿಭೇದದಿಂದ ಸಿದ್ಧವಾದಂತೆ ತೋರಿಕೆಗೆ ಮಾತ್ರ ಅಲ್ಪಸ್ವಲ್ಪ ಭೇದಗಳ ನ್ನುಂಟಾಗಿ ಸ್ಥಾಪಿತವಾದ ಮೇಲ್ಕಂಡ ಸಮಸ್ತ ಸಂಸ್ಥೆಗಳ ಧರ್ಮರಹಸ್ಯ ಗಳನ್ನೂ ವಿಚಾರಿಸಿದಲ್ಲಿ ಒಂದಕ್ಕೊಂದಕ್ಕೆ ಇರುವ ವ್ಯತ್ಯಾಸವು ಆಕಾಶಪಾ ತಾಳಗಳಷ್ಟಿಲ್ಲವೆಂಬುದೂ ಗೋಚರವಾಗದಿರಲಾರದು. ಮತವಿಚಾರವೆಂ ಬುದೊಂದು ಅಗಾಧವಿಷಯವು. ರತ್ನಲಾಭಾಕಾಂಕ್ಷಿಯಾಗಿ ರತ್ನಾಕರ ವನ್ನು ಪ್ರವೇಶಿಸತಕ್ಕವನು ತಳಕ್ಕೆ ಹೋಗಿ ಸೇರುವವರೆಗೂ ಧೈರ್ಯವಾಗಿ ಶಾಂತವಾಗಿ ಏಕಮನಸ್ಕತೆಯಿಂದ ಮುಳುಗಿದರಲ್ಲವೆ ರತ್ನಮಾಣಿಕ್ಯಾದಿಗಳು ದೊರೆಯುವುವು ? ಹಾಗಲ್ಲದೆ, ರತ್ನಾಕರ (ಸಮುದ್ರ)ದ ಮೇಲೆಮೇಲೆಯೇ ತೇಲಾಡುತ್ತಿದ್ದರೆ ಒಂದೆರಡು ಕಪ್ಪೆಗಳೂ ಏಡಿಗಳೂ ಮೀನುಗಳೂ-ಶಂಖು ಕಪ್ಪೆಯಚಿಪ್ಪುಗಳೂ ಅಲ್ಲದೆ ಮತ್ತೇನು ದೊರೆತಾವು! ಹಾಗೆಯೇ ಧರ್ಮ ವಿಚಾರದಲ್ಲೂ ದೀರ್ಘವಾಗಿ ವಿಚಾರ ನಡೆಸಿ-ಈ ಧರ್ಮರತ್ನಾಕರದ ಆಳಕ್ಕೆ ಪ್ರವೇಶಿಸಿ ಶಾಂತತೆ ಸಮಾಧಾನಗಳಿಂದ ಧರ್ಮಸೂಕ್ಷ್ಮಗಳನ್ನೂ ಆದಿಮೂಲ ತತ್ವಗಳನ್ನೂ ವಿಚಾರಿಸಿ, ಸಹಿಷ್ಣುತೆಯನ್ನುಂಟಾಗಿ ವಿಮರ್ಶಿಸಿದರೆ ಸಕಲ ಧ ರ್ಮಗಳಲ್ಲೂ ಅಡಗಿರುವ ತತ್ವರತ್ನಗಳು ದೊರೆವುವಲ್ಲದೆ, ಕೋಪತಾಪಗಳ ನ್ನುಂಟಾಗಿ ಮೇಲೆಮೇಲೆ ಎದ್ದು ಕಾಣಿಸುವ ನಾಮರೂಪ ಆಚಾರಾದಿಗಳನ್ನು ಮಾತ್ರವೇ ಗಮನಿಸಿಕೊಂಡು ಒಡಿದಾಡುತ್ತಿರುವವರೆಗೆ ದ್ವೇಷಾಸೂಯೆ ಗಳೂ ಭೇದಭಾವಗಳೂ ಅನೈಕಮತ್ಯವೂ ನಮ್ಮನ್ನು ಬಿಟ್ಟು ತೊಲಗಲಾರವು.

ಮಳೆಗಾಲ ಚಳಿಗಾಲ ಬೇಸಗೆಯ ಕಾಲಗಳ ಋತುಧರ್ಮಗಳನ್ನು ಅನುಸರಿಸಿ ವ್ಯತ್ಯಾಸವಾಗುವ ಸ್ಥಿತಿಗಳಿಗೆ ದೇಹಧರ್ಮವನ್ನು ಒಗ್ಗಿಸಿಕೊಳ್ಳು ವ ಸಾಮರ್ಥ್ಯವನ್ನು ಭಗವಾನನು ಮಾನುಷದೇಹಕ್ಕೆ ಕೊಟ್ಟಿರುವಂತೆಯೇ, ಲೋಕದಲ್ಲಿ ಯುಗಧರ್ಮವನ್ನು ಅನುಸರಿಸಿ ವ್ಯತ್ಯಾಸವಾಗುತ್ತಿರುವ ಧ ರ್ಮಾಧರ್ಮಗಳ ಹೆಚ್ಚು ಕುಂದುಗಳನ್ನು ಸರಿಗೊಳಿಸುವುದಕ್ಕಾಗಿಯೂ ಹಲವು ಸಾಧನಗಳನ್ನು ಆ ದೇವೇಶನು ಏರ್ಪಡಿಸಿದ್ದಾನೆ. ಧರ್ಮವ್ಯತ್ಯಾಸ ವಾಗಿ ಲೋಕವು ತಲ್ಲಣಗೊಳ್ಳತೊಡಗಿದಾಗ ಭಗವದಾಶಯವನ್ನು ಅನುಸರಿ

ಸಿದ ಮಹಾತ್ಮರಲ್ಲಿ ಒಬ್ಬಿಬ್ಬರು ಲೋಕದಲ್ಲಿ ಉದ್ಭವಿಸಿ, ಹಾಗೆ ವ್ಯಕ್ತಪ್ತವಾದ ಧರ್ಮಗಳು ಜನಸಾಮಾನ್ಯಕ್ಕೆ ಸುಲಭಗ್ರಾಹ್ಯವಾಗುವಂತೆ ಒಂದು ಸ್ಥಿಮಿತ ರೂಪಕ್ಕೆ ತಂದು ಸಿದ್ಧಾಂತೀಕರಿಸಿ ನಿತ್ಯದ ಆಚರಣೆಗೆ ಅನುಕೂಲವಾಗುವಂತೆ ಏರ್ಪಡಿಸುವುದು ಆದಿಯಿಂದಲೂ ನಡೆದುಬರುತ್ತಿರುವ ಪದ್ಧತಿಯಾಗಿದೆ.

ಕ್ರಿ. ಶ. ೧೪–೧೫ ನೆಯ ಶತಮಾನಗಳವೇಳೆಯಲ್ಲಿ ಭಾರತದೇಶದಲ್ಲಿ ಧರ್ಮವಿಚಾರವು ವಿಶೇಷ ಆಂದೋಲನವನ್ನು ಹೊಂದಿತು. ಹಿಂದೆ ಎರಡು ಮೂರು ಶತಮಾನಗಳಿಂದಲೂ ಅರಬ್ಬೀ ಪಾರ್ಶೀ ತುರ್ಕೀದೇಶಗಳಿಂದ ಮಹಮ್ಮದೀಯರು ತಂಡತಂಡವಾಗಿ ಈ ದೇಶವನ್ನು ಪ್ರವೇಶಿಸಿ ಕತ್ತಿಯ ಮೊನೆಯನ್ನು ಮುಂದುಮಾಡಿ ತಮ್ಮ ಧರ್ಮವನ್ನು ಪ್ರಚಾರಗೊಳಿಸತೊಡಗಿದ್ದರು. ದೇಶದಲ್ಲಿ ಧರ್ಮರಕ್ಷಣೆಮಾಡಿ ಹಿಂದೂಮತ ಧರ್ಮದ ವ್ಯಕ್ತಿತ್ವವನ್ನು ಕಾಪಾಡಬಲ್ಲ ಏಕಮಾತ್ರ ಪ್ರಭುವಿನ ಅಭಾವದಿಂದ ತಳಮಳವು ವಿಶೇಷವಾಗಿದ್ದಿತು. ಧರ್ಮಬದ್ಧಮನೋವೃತ್ತಿಯಿಂದ ಸರ್ವಸ್ವವನ್ನೂ ಸೂರೆಗೊಟ್ಟು ಹಿಂದೆ ಮುಂದೆ ನೋಡದೆ ಪ್ರಾಣವನ್ನಾದರೂ ಬಿಡಲೂ ಈ ದೇಶೀಯರನೇಕರು ಸಿದ್ಧರಾದರು. ಮತವಿಚಾರದ ಬಂಧನ, ಶೂಲಾರೋಹಣ ಅಂಗವಿಚ್ಛೇಧನ ಮುಂತಾದ ಹಲವು ಪ್ರತಿಬಂಧಕಗಳು ನಿತ್ಯಕೃತ್ಯಗಳೋ ಎಂಬಂತೆ ನಡೆಯತೊಡಗಿದ್ದುವು. ಪ್ರಜೆಗಳಾದರೋ ಒಂದುಕಡೆ ತಮ್ಮ ಆರ್ಷೇಯ ಧರ್ಮಗಳನ್ನು ಬಿಡಲಾರದೆ – ಮತ್ತೊಂದುಕಡೆ ಬಹು ಭಯಂಕರವೆಂದು ತೋರುತ್ತಿದ್ದ ಪರಕೀಯ ಧರ್ಮವನ್ನು ಅವಲಂಬಿಸಲಾರದೆ, ತಮ್ಮ ಮನಬಂದ ಧರ್ಮವನ್ನನುಸರಿಸಿ ಜೀವಿಸಲು ಸಾಧ್ಯವಿಲ್ಲದೆ, ಮಾರ್ಗವು ಗೋಚರಿಸದೆ ಅಸಹ್ಯವೇದನೆಗೊಳಗಾದರು. ಆ ದುರಂತಕಾಲದಲ್ಲಿ ಜನಾಂಗಕ್ಕೆ ಉಭಯಧರ್ಮಗಳಿಗೂ ಸಾಮಾನ್ಯವಾಗಿರುವಂತಹ ಒಂದು ಧರ್ಮಪಂಥವು ಅತ್ಯಾವಶ್ಯಕವಾಗಿದ್ದಿತು. ಆ ಕಾಲದಲ್ಲೇ ಕಬೀರ, ನಾನಕ್ ಮುಂತಾದ ಭಗದ್ಭಕ್ತಶಿರೋಮಣಿಗಳು ಜನ್ಮಿಸಿ, ಹಿಂದೂ ಮತ್ತು ಮಹಮ್ಮದೀಯಮತಗಳಲ್ಲಿ ಅಡಗಿದ್ದ ರಹಸ್ಯಧರ್ಮಗಳಿಂಥವೆಂಬುದನ್ನು ತಿಳಿದು ಅವುಗಳೆರಡಕ್ಕೂ ಸಮಾನವಾಗಿದ್ದ ಕೆಲವು ಧರ್ಮಸಿದ್ಧಾಂತಗಳನ್ನು ಏಕತ್ರ ಸಂಗ್ರಹಿಸಿ-ಧರ್ಮಸಾಮರಸ್ಯವನ್ನು ಹಲವು ಬಗೆಯಿಂದ ಜನಸಮಾಜಕ್ಕೆ ಬೋಧಿಸಿ

ಧರ್ಮಲುಬ್ಧತೆಗೆ ಈಡಾಗಿ ವೃಥಾ ಪ್ರಾಣಕೊಡದಂತೆ ಹಲವರನ್ನು ಬದುಕಿಸಿದರು. ಮಾತ್ರವಲ್ಲ-ನೂತನವಾಗಿ ಹಿಂದೂದೇಶವನ್ನು ಪ್ರವೇಶಿಸಿ ಕಾಲಕರ್ಮಸಂಯೋಗದಿಂದ ಇಲ್ಲೇ ರೂಢಮೂಲವಾಗಿ ನೆಲೆಸಿರಲು ಪ್ರಯತ್ನಿಸಿದ ಮುಹಮ್ಮದೀಯ ಮತವು ಆರ್ಯೇಯ ಹಿಂದೂ ಮತವನ್ನು ನುಂಗಿಬಿಡದಂತೆಯೂ ಸಂರಕ್ಷಿಸಿದರು. ಎರಡು ಮತಗಳಿಗೂ ಸಾಧ್ಯವಿದ್ದೆಡೆಗಳಲ್ಲಿ ಬಾಂಧವ್ಯವನ್ನು ಕಲ್ಪಿಸಿದರು. ಹೀಗೆ ನಾವು ಪ್ರಾರಂಭದಿಂದಲೂ ಹೇಳಿಕೊಂಡು ಬಂದಂತಹ ಹಿಂದೂಧರ್ಮದ ಐಕ್ಯತಾಸಾಧಕಸ್ವಭಾವವು ನೂತನವಾಗಿ ಬಂದ ಮುಹಮ್ಮದೀಯ ಧರ್ಮವನ್ನೂ ಆಕರ್ಷಿಸದೆ ಬಿಡಲಿಲ್ಲ. ಇದರಿಂದ ಹಿಂದೂಧರ್ಮಕ್ಕೂ ತನ್ಮೂಲಕ ಭಾರತದೇಶಕ್ಕೂ ಪ್ರಾಪ್ತವಾದ ಹಲವು ಪ್ರಯೋಜನಗಳನ್ನು ಕಥಾನುಸರಣೆಯಿಂದ ವಾಚಕಮಹಾಶಯರು ಗ್ರಹಿಸಬಹುದು. ಅಂತಹ ಸಂಧಿಕಾಲದಲ್ಲಿ ಜನ್ಮಿಸಿ, ಲೋಕಕಲ್ಯಾಣವನ್ನು ಚಿಂತಿಸಿ, ಹಿಂದೂ ಮುಹಮ್ಮದೀಯ ಉಭಯಧರ್ಮಗಳಿಗೂ ಐಕಮತ್ಯವನ್ನು ಕಲ್ಪಿಸಿದ ಭಗವತ್ಕಾರ್ಯಸಾಧಕನು ನಮ್ಮ ಕಥಾನಾಯಕನಾದ ಗುರು ನಾನಕನು. ಆತನ ಈ ಪವಿತ್ರಚರಿತ್ರೆಯೂ ಕರ್ಣಾಟಕ ವಾಚಕವೃಂದಕ್ಕೆ ಆನಂದದಾಯಕವಾಗಲಿ !

ಪಂಚನದಿಗಳ ಪಾವನಪ್ರವಾಹದಿಂದ ಫಲವಂತವಾದ ಪಂಜಾಬು ದೇಶದ ರಾಜಧಾನಿ ಲಾಹೋರ್ ನಗರದ ನೈರುತ್ಯದಿಕ್ಕಿಗೆ ಮೂವತ್ತು ಮೈಲು ದೂರದಲ್ಲಿ ಈಗಿನ ಗುಜರಾನ್‌ವಾಲಾ ಜಿಲ್ಲೆಯ ಸರಹದ್ದಿನಲ್ಲಿ ತಾಳ್ವಂದಿ ಎಂಬೊಂದು ಊರಿದೆ. ಇದರ ಸುತ್ತುಮುತ್ತಲೂ ವಿಶೇಷ ಗಿಡಗಂಟೆಗಳು ಬೆಳೆದು, ಅದು ಕಾಡಿನ ಮಧ್ಯದಲ್ಲಿರುವಂತೆಯೇ ತೋರುತ್ತದೆ. ಕಾಡು ಜಿಂಕೆ ಮೊಲ ಮುಂತಾದ ಸಾಧುಪ್ರಾಣಿಗಳ ವಾಸಕ್ಕೆ ಯೋಗ್ಯವಾಗಿದ್ದು, ಅದು ಆಶ್ರಮಪ್ರದೇಶವೋ ಎಂಬಂತಹ ಶಾಂತತೆಯನ್ನು ಪ್ರಸಾದಿಸುತ್ತದೆ.

ಆ ಊರಿನಲ್ಲಿ ಕ್ರಿ. ಶ. ಹದಿನೈದನೆಯ ಶತಮಾನದ ಪ್ರಾರಂಭದಲ್ಲಿ ಶಿವರಾಮನೆಂಬೊಬ್ಬ ಗೃಹಸ್ಥನು ತನ್ನ ಗೃಹಿಣಿಯಾದ ಸಾಧ್ವಿ ಬನಾರಸಿ ಎಂಬಾಕೆಯೊಂದಿಗೆ ಸಂಸಾರಮಾಡಿಕೊಂಡಿದ್ದನು. ಆ ದಂಪತಿಗಳಿಗೆ ಯುಕ್ತಕಾಲದಲ್ಲಿ ಕಾಳು ಲಾಲು ಎಂಬಿಬ್ಬರು ಮಕ್ಕಳು ಹುಟ್ಟಿದರು. ಅವರಲ್ಲಿ ಪ್ರಬುದ್ಧನಾದ ಕಾಳು ಎಂಬಾತನಿಗೆ, ತಂದೆಯು [illegible]

ಬೀಯಾಸ್ ನದಿಗಳ ಮಧ್ಯಪ್ರದೇಶವಾದ ಪಂಜಾಬ್ ಪ್ರಾಂತದಲ್ಲಿ ವಾಸವಾಗಿದ್ದ ಸ್ವಕುಲಸ್ಥ ರಾಮನೆಂಬಾತನ ಮಗಳು ತೃಪ್ತಾ ಎಂಬಾಕೆಯನ್ನು ತಂದು ಲಗ್ನಮಾಡಿದನು. ಈ ದಂಪತಿಗಳೇ ನಮ್ಮ ಕಥಾನಾಯಕನ ಮಾತಾಪಿತೃಗಳು.

ಸಾಧ್ವೀ ತೃಪ್ತೆಯು ಗರ್ಭಸುಧಾಂಬುಧಿಯಲ್ಲಿ ನಾನಕಿ ಎಂಬ ಕನ್ಯೆಯೂ, ನಾನಕ್ ಎಂಬ ಪುತ್ರನೂ ಜನಿಸಿದರು. ನಾನಕನ ಜನನಕಾಲ ವಿಚಾರವನ್ನು ವಿಚಿತ್ರರೀತಿಯಲ್ಲಿ ವಿವರಿಸುವ ಒಂದು ಕಥೆಯುಂಟು. ಕಾಳುವಿನ ಭಾರ್ಯೆಗೆ ಪ್ರಸವವೇದನೆಯುತ್ತಿದೊಡನೆಯೇ ದೌಲತಾಣ್ ಎಂಬೊಬ್ಬ ಸೂಲಗಿತ್ತಿಯು ಬಂದು ಸೇವೆಗೆ ನಿಂತು, ತೃಪ್ತಿಕರವಾಗಿ ಹೆರಿಗೆ ಮಾಡಿಸಿದಳು. (ವೈಶಾಖಮಾಸದಲ್ಲಿ ಒಂದು ಸುದಿನ, - ಏಪ್ರಿಲ್-ಮೇ ತಿಂಗಳು, ೧೪೬೯ನೆಯ ಸಂವತ್ಸರ) ಮಾರನೆಯ ಪ್ರಾತಃಕಾಲ ಶಿಶುವಿನ ಜಾತಕವನ್ನು ಬರೆಯುವುದಕ್ಕಾಗಿ, ಕಾಳುವು ಹರಿದಯಾಳನೆಂಬ ಜ್ಯೋತಿಷ್ಕನನ್ನು ಕರೆತರಲು, ಆತನು ಶಿಶುಜನನವಾದಾಗ ಅದು ಯಾವ ಬಗೆಯ ಶಬ್ದಮಾಡುತ್ತಿತ್ತು ಎಂದು ಪ್ರಶ್ನೆಮಾಡಿದನು. ಸೂಲಗಿತ್ತಿಯು ಶಿಶುವಿನ ಪ್ರಥಮ ಧ್ವನಿಯು-ದೊಡ್ಡದೊಂದು ಸಭೆಯನ್ನು ನೆರೆಯಿಸಿ, ನೆರೆದ ಜನಗಳಿಗೆ ಆನಂದೋದ್ರೇಕವುಂಟಾಗುವಂತೆ ಪ್ರಸಂಗಮಾಡಿ ಕೃತಕೃತ್ಯನಾದ ಒಬ್ಬ ಸುಶಿಕ್ಷಿತ ಗೃಹಸ್ಥನು ಸಂತೋಷಾಧಿಕ್ಯದಿಂದ ಗಹಗಹಿಸಿ ನಗುವ ನಗುವಿನಂತೆ ಇದ್ದಿತೆಂದು ಹೇಳಿದಳು. ಅದನ್ನು ಕೇಳಿದ ಜ್ಯೋತಿಷ್ಕನು ಸುಪ್ರೀತನಾಗಿ ತಾನು ಮಗುವನ್ನು ನೋಡಬೇಕೆಂದು ಬಯಸಿದನು ಆದರೆ ಆಗ ಹವೆಯು ಬಲು ಚಳಿಯಾಗಿದ್ದುದರಿಂದ ಮಗುವಿಗೆ ಶೀತವಾಗಬಹುದೆಂದು ಅದನ್ನು ಹೊರಕ್ಕೆ ಕಳುಹಿಸಲು ತಾಯಿಯು ಒಪ್ಪಲಿಲ್ಲ. ಆದರೂ ಜ್ಯೋತಿಷ್ಕನು ತಾನು ಶಿಶುವನ್ನು ನೋಡಿಯೇ ತೀರಬೇಕೆಂದು ಹಟ ಹಿಡಿದುದರಿಂದ ಸೂಲಗಿತ್ತಿಯು, ತುಂಬಾ ಬಟ್ಟೆಯನ್ನು ಹೊದ್ದಿಸಿಕೊಂಡು, ಶಿಶುವನ್ನು ತಂದು ತೋರಿಸಿದಳು. ಸಕಲ ಸಲ್ಲಕ್ಷಣಗಳಿಂದಲೂ ನೇತ್ರಾನಂದಕರವಾಗಿದ್ದ ಆ ತೇಜಸ್ವಿ ಶಿಶುವನ್ನು ಕಂಡು ಹರಿದಯಾಳನು ಎರಡು ಕೈಗಳನ್ನೂ ಜೋಡಿಸಿ ಭಕ್ತಿಭಾವದಿಂದ ಕೈಮುಗಿದು, ಈತನು ಜನಾಂಗದ ಭಕ್ತಿಗೌರವಾದಿಗಳಿಗೆ ಪಾತ್ರನಾಗಿ, ಮಹಾತ್ಮನೆನ್ನಿಸಿ ಶ್ವೇತಛತ್ರವನ್ನು ಹಿಡಿಸಿಕೊಂಡು ಸುಪ್ರ

ಸಿದ್ಧನಾಗಿ, ವಿಶೇಷ ಯಶಸ್ಸನ್ನು ಸಂಪಾದಿಸುವನು. ಕೇವಲ ಹಿಂದೂಗಳು ಮಾತ್ರವೇ ಅಲ್ಲದೆ, ಮುಹಮ್ಮದೀಯರೂ ಈತನ ವಿಷಯದಲ್ಲಿ ಭಕ್ತಿವಿಶ್ವಾಸಗಳನ್ನಿಟ್ಟು ಪೂಜಿಸುವರು. ಈತನು ಸರ್ವೋತ್ತಮನೂ ಪರಮಪುರುಷನೂ ಆದ ಜಗಜ್ಜನಕನೊಬ್ಬನನ್ನೇ ನಂಬಿ ಭಕ್ತಾಗ್ರೇಸರನೆನ್ನಿಸಿ ಜನಾಂಗದ ಉದ್ಧಾರಕನಾಗುವನು ಎಂದು ಭವಿಷ್ಯ ನುಡಿದನು. ಕಾಳುವು ತನ್ನ ವಂಶದಲ್ಲಿ ಲೋಕೋದ್ಧಾರಕನಾಗಲಿರುವ ಅಂತಹ ದಿವ್ಯಶಿಶುವು ಜನನವಾದುದಕ್ಕಾಗಿ, ಅತಿಶಯ ಆನಂದೋತ್ಸಾಹಗಳಿಂದಲೂ ವಿಜೃಂಭಣೆಯಿಂದಲೂ ಜಾತಕರ್ಮ ನಾಮಕರಣಾದಿ ಮಹೋತ್ಸವಗಳನ್ನು ನೆರವೇರಿಸಿ, ಬಂಧುವರ್ಗವನ್ನೂ ಕುಲಸ್ಥರನ್ನೂ ದೀನಾನಾಥರನ್ನೂ ತೃಪ್ತಿಪಡಿಸಿದನು.



## ಅಧ್ಯಾಯ ೨ "ಯಜ್ಞೋಪವೀತ"

ಮಕ್ಕಳ ಬಾಲಲೀಲೆಗಳಿಂದ ಮಹದಾನಂದವನ್ನು ಹೊಂದುತ್ತಾ ಆ ದಂಪತಿಗಳು ಸುಖವಾಗಿ ಕಾಲಯಾಪನೆ ಮಾಡಿಕೊಂಡಿದ್ದರು. ನಾನಕನು ಐದನೆಯ ವಯಸ್ಸಿನಲ್ಲೇ ಬಹು ಗಹನವಾದ ತಾತ್ವಿಕ ಸಂಗತಿಗಳನ್ನು ಕುರಿತು ಮಾತನಾಡುವನು. ಏನೋ ಬಾಯಿಗೆಬಂದಂತೆ ಬಾಲ್ಯ ಚಾಪಲ್ಯದಿಂದ ಹರಟುವುದಲ್ಲ-ಅರ್ಥವತ್ತಾಗಿ, ಆದ್ಯಂತಗಳಲ್ಲಿ ಸಂಬಂಧ ತಪ್ಪದಂತೆ ಸಮಂಜಸ ಭಾಷಣಮಾಡುವನು. ಮಗುವಿನ ಈ ಅದ್ಭುತ ಮೇಧಾಶಕ್ತಿಯನ್ನೂ ಅಲೌಕಿಕ ಜಾಣ್ಮೆಯನ್ನೂ ಕಂಡು ತಂದೆತಾಯಿಗಳೂ ಬಾಂಧವರೂ ಮಹದಾಶ್ಚರ್ಯಮಗ್ನರಾದರು. ನಾನಕನು ತನ್ನ ಈ ಚಿಕ್ಕ ವಯಸ್ಸಿನಲ್ಲಿ ಸಮಾನವಯಸ್ಸಿನ ಬಾಲಕರೊಂದಿಗೆ ತನ್ನ ದೈವಿಕ ಸಂಬಂಧ ಆಟವಾಡುತ್ತಿದ್ದ ಸ್ಥಳಗಳನ್ನು ಈಗಲೂ ಅಲ್ಲಿಯ ಜನರು ಪವಿತ್ರ ಭಾವನೆಯಿಂದ ಕಾಣುವರು. ಯಾವಸ್ಥಳದಲ್ಲಿ ನಾನಕನು ಹಗಲಿನಲ್ಲಿ ಆಟಪಾಟಗಳಿಂದಲೂ, ದೊಡ್ಡವನಾದ ತರುವಾಯ ತನ್ನ ಏಕಾಂತ ಧ್ಯಾನನಿಷ್ಠೆಯಿಂದಲೂ, ದಿನದ ವಿಶೇಷ ಕಾಲವನ್ನು ಕಳೆಯುತ್ತಿದ್ದನೋ ಆ ಪವಿತ್ರ ಪ್ರದೇಶದಲ್ಲಿ ರಾಯ್ ಬೂಲಾರ್ ಎಂಬೊಬ್ಬ ಆಸ್ತಿಕನು, ಗುರುವಿನ ಕೀರ್ತಿಯೂ

ಬೋಧನೆಯೂ ಲೋಕದಲ್ಲಿ ಹರಡಿದಮೇಲೆ, ಗುರುಸ್ಮರಣೆಗಾಗಿ ಒಂದು ಕೊಳವನ್ನು ಕಟ್ಟಿಸಿದನು. ತರುವಾಯ, ಲಾಹೋರಿನ ಮುಹಮ್ಮದೀಯ ಸರ್ವಾಧಿಕಾರಿಯ ಮುಖ್ಯಾಮಾತ್ಯನಾಗಿದ್ದ ಕೌರಾಮಲ್ ಎಂಬಾತನು ಆ ಕೊಳವನ್ನೂ-ತೋಪನ್ನೂ ಬಹುಮಟ್ಟಿಗೆ ವಿಸ್ತರಿಸಿದನು. ಸಿಕ್ ಮತಸ್ಥರು ಈ ಪ್ರದೇಶವನ್ನು ಈಗಲೂ ಪವಿತ್ರ ಭಾವನೆಯಿಂದ ಕಾಣುತ್ತಾ, ಯಾತ್ರಾಸ್ಥಳವನ್ನಾಗಿ ಮಾಡಿಕೊಂಡಿದ್ದಾರೆ.

ನಾನಕನಿಗೆ ಏಳನೆಯ ವರ್ಷ ನಡೆಯುತ್ತಿದ್ದಾಗ, ಕಾಳೂವು ತನ್ನ ಮಗನಿಗೆ ವಿದ್ಯಾಭ್ಯಾಸಮಾಡಿಸಬೇಕೆಂದು ಮಠಕ್ಕೆ ಕರೆದೊಯ್ದನು. ಉಪಾಧ್ಯಾಯನು ವರ್ಣಮಾಲೆಯ ಒಂದೊಂದೇ ಅಕ್ಷರವನ್ನು ಬರೆದು, ಅದನ್ನು ಉಚ್ಚರಿಸುವಂತೆ ನಾನಕನಿಗೆ ಹೇಳಿಕೊಡುತ್ತಿರಲು, ಆ ಬಾಲಕನು ಅವೆಲ್ಲವನ್ನೂ ಮೊದಲೇ ಕಲಿತಿದ್ದನೊ ಎಂಬಂತೆ, ಆಯಾ ಅಕ್ಷರಗಳಿಂದ ಪ್ರಾರಂಭಿಸುವ ಭಗವಂತನ ಗುಣಮಾಲೆಗಳನ್ನು ವರ್ಣಿಸತೊಡಗಿದನು. ಆ ಕಾಲದಲ್ಲಿ ಆ ಬಾಲಕನು ಮಾಡಿದ ಅಪೂರ್ವ ಭಾಷಣವು ಈ ಅರ್ಥವನ್ನುಂಟಾಗಿದ್ದಿತು.

'ಜಗತ್ಕರ್ತನಾದ ಲೋಕಪಿತನೊಬ್ಬನೇ ಸರ್ವೇಶ್ವರನು-ಸರ್ವನಿಯಾಮಕನು.
ಭಗವತ್ಸೇವೆಗಾಗಿಯೇ ಯಾರ ಹೃದಯವು ತಲ್ಲಣಗೊಂಡು ಕಾತರಗೊಳ್ಳುತ್ತಿರುವುದೋ ಅಂಥವರ ಜನ್ಮವೇ ಸಾರ್ಥಕವಾದುದು - ಧನ್ಯವಾದುದು.
ಎಲೋ ಮಂದಮತಿಯೆ, ಭಗವಂತನಾದ ಆತನನ್ನು ಮರತೆಯೇಕೆ ?
ನಾಲ್ಕಕ್ಷರಗಳನ್ನು ಕಲಿತರೆ ಮಾತ್ರವಲ್ಲ - ನಿನ್ನ ಜೀವನವನ್ನು ಭಗವತ್ಸೇವೆಗೆ ಬಗ್ಗಿಸಿ, ನಿನ್ನ ಆಚರಣೆಗಳನ್ನು ಪರಿಶುದ್ಧಗೊಳಿಸಿಕೊಂಡಾಗ ಮಾತ್ರವೇ ನೀನು ವಿದ್ಯಾವಂತನೆಂದು ಎನಿಸಿಕೊಳ್ಳಬಲ್ಲೆ.
ಜಗತ್ತಿಗೆ ಆದಿಮೂಲ ದೈವವಾರೋ - ಆತನೊಬ್ಬನೇ ಸತ್ಯಸ್ವರೂಪಿಯು.'

ಎಂದು ಮುಂತಾಗಿ ಸ್ತೋತ್ರಮಾಡತೊಡಗಿದನು. ಮುಂದೆ ಕೆಲವು ದಿನಗಳವರೆಗೆ ಪಾಠಶಾಲೆಗೇನೋ ತಪ್ಪದೆ ಹೋಗಿಬರುತ್ತಿದ್ದನು. ಆದರೆ ಪಾಠಗಳು ಸಾಗುತ್ತಿದ್ದಾಗ್ಗೆ ಒಂದೊಂದುವೇಳೆ ಮೌನವಾಗಿ ಕಣ್ಣುಮುಚ್ಚಿಕೊಂಡು ಕುಳಿತುಬಿಡುವನು. ಒಂದು ದಿನ ಉಪಾಧ್ಯಾಯನು,—'ನಾನಕ್,

ಏಕೆ ಪಾಠ ಓದುವುದಿಲ್ಲ. ಓದು' ಎಂದು ಹೇಳಲು, ಧ್ಯಾನಸಮಾಧಿಯಿಂದ ಹಟಾತ್ತಾಗಿ ಆಗತಾನೇ ಬಹಿರ್ಮುಖನಾದ ನಾನಕನು—'ಗುರುಗಳೇ ನೀವು ನನಗೆ ಬೋಧಿಸುವಷ್ಟು ಕಲಿತಿರುವಿರಾ?' ಎಂದು ಕೇಳಿಬಿಟ್ಟನು. ಬಾಲಕನ ಆ ಮಾತನ್ನು ಕೇಳಿ ಅಪ್ರತಿಭನಾದ ಗುರುವು—'ಏನೆಂದೆ? ನಾನು ವೇದಶಾಸ್ತ್ರಾದಿಗಳಲ್ಲಿ ಪಾಂಡಿತ್ಯ ಸಂಪಾದನೆಮಾಡಿದ್ದೇನೆ. ಲೆಕ್ಕಪತ್ರಗಳನ್ನಿಡುವ ಕ್ರಮವನ್ನು ಅರಿತಿದ್ದೇನೆ. ಇದೇನೋ ಹೀಗೆನ್ನುತ್ತೀಯೆ? ನಿನಗೆ ಕಲಿಸಲು ನನಗೆ ಬಾರದೆ?' ಎಂದು ಆಕ್ಷೇಪಿಸಿದನು. ಅದನ್ನು ಕೇಳಿದ ಆ ಬಾಲಕನು—'ಗುರುಗಳೇ ನಿಮಗೆ ಏನೇ ಬರುತ್ತಿರಲಿ, ಇವೆಲ್ಲವೂ ಭಗವತ್ಸಂಬಂಧವಾದ ಜ್ಞಾನಕ್ಕೆ - ಬ್ರಹ್ಮಜ್ಞಾನಕ್ಕೆ ಸಮಾನವಾಗಲಾರವು' ಎಂದು ನುಡಿದು ಪುನಃ ಧ್ಯಾನಾರೂಢನಾದಂತೆ ಕಣ್ಣುಮುಚ್ಚಿಕೊಂಡು ಅಂತರ್ಮುಖಿಯಾಗಿ,

—'ಸುಡುಸುಡು ನಿನ್ನ ಲೌಕಿಕ ಜ್ಞಾನವ, ಎಲೋ ಮರುಳೆ ಮಾನವ, ಲೌ
ಕಿಕ ಪ್ರೇಮವ ಸುಟ್ಟು ಅದರ ಬೂದಿಯನ್ನು ಮಸಿಯಮಾಡು,
ವಿಚಾರಜ್ಞಾನವನ್ನು ಕಾಗದವನಾಗಿಸು ;
ಭಗವದ್ಭಕ್ತಿಯು ಲೇಖನಿಯಾಗಿರಲು ಹೃದಯದಿಂದ ಬರೆಯತೊಡಗು ;
ಗುರುವನ್ನು ಪ್ರಾರ್ಥಿಸಿ-ಆತನ ಬೋಧನೆಗಳ ಬರೆ;
ಬರೆ-ಭಗವಂತನ ಗುಣಗಾನವ. ಲಿಖಿಸು, ಆ ಜಗತ್ಪಿತನು ಆದ್ಯಂತರಹಿತ
ನೆಂದು. ಲಿಖಿಸು. ಅದರಿಂದ ಮಹದಾನಂದವ ಹೊಂದಿ ಸುಖಿಸುವೆ.'

ನಾನಕ ಬಾಲಕನ ಈ ಅದ್ಭುತಪ್ರಜ್ಞೆಯನ್ನೂ ಸ್ಫೂರ್ತಿವಿಶೇಷವನ್ನೂ ಕಂಡ ಆ ಗುರುವು ಮಹದಾಶ್ಚರ್ಯಮಗ್ನನಾಗಿ, ಈತನು ಜಗದುದ್ಧಾರಕನಾದ ಮಹಾಪುರುಷನೆಂದು ಭಾವಿಸಿ, ಭಕ್ತಿಭಾವದಿಂದ ವಂದಿಸಿದನು. ಮುಂದೆ ನಾನಕನು ಪಾಠಶಾಲೆಯಲ್ಲಿ ಮನಬಂದಂತೆ ಇರಲು ಯಾರ ಅಭ್ಯಂತರವೂ ಇರಲಿಲ್ಲ. ಆದರೆ ನಾನಕನು ತರುವಾಯ ಬಹು ದಿನಗಳವರೆಗೆ ಪಾಠಶಾಲೆಯಲ್ಲಿ ನಿಲ್ಲಲಿಲ್ಲ. ಆವರೆಗೆ ಅಲ್ಪಸ್ವಲ್ಪ ಓದುಬರಹಗಳನ್ನು ಕಲಿತಿದ್ದ ಅವನು ಮನೆಯಲ್ಲೇ ಧಾರ್ಮಿಕಗ್ರಂಥಗಳನ್ನು ಓದುತ್ತಲೂ, ಧ್ಯಾನಮಗ್ನನಾಗುತ್ತಲೂ, ಮಲಗಿದ್ದಾಗಲೂ ಎದ್ದಿದ್ದಾಗಲೂ ಕೇವಲ ಭಗವದ್ವಿಚಾರಗಳಲ್ಲೇ ಮಾತುಕಥೆಗಳನ್ನು ನಡಿಸುತ್ತಲೂ-ಹೀಗೆ ಸದಾ ಧಾರ್ಮಿಕ ಪಂಥದ ಜನರೊಂದಿಗೆ ಸೇರಿ ಸಂಭಾಷಿಸುತ್ತ ಕಾಲ ಕಳೆಯುತ್ತಿದ್ದನು.

ಲೌಕಿಕ ವಿದ್ಯಾಭ್ಯಾಸದಲ್ಲಿ ಪಾಂಡಿತ್ಯವನ್ನು ಗಳಿಸದೆ-ಬಹು ಗಹನವಾದ ಮತಧರ್ಮವಿಚಾರಗಳು ಹೇಗೆ ಲಭ್ಯವಾದಾವು ಎಂಬೊಂದು ಸಂಶಯವು ನಮಗುಂಟಾಗಬಹುದು. ಆದರೆ ಅದಕ್ಕೆ ಅರ್ಥವಿಲ್ಲ. ಏಕೆಂದರೆ ಈ ಬಗೆಯ ಧರ್ಮಬೋಧಕರು, ಕೇವಲ ಭಗವತ್ಪ್ರೇರಿತರೋ ಎಂಬಂತೆ ಆತ್ಮಸ್ಫೂರ್ತಿಯಿಂದ ಭಗವತ್ತತ್ವಗಳನ್ನು ಬೋಧಿಸತೊಡಗುವರಲ್ಲದೆ ಲೌಕಿಕ ವಿದ್ಯಾಪ್ರೌಢಿಮೆಯಿಂದಲ್ಲ. ಮೇಲೆ ಹೇಳಿದಂತೆ ಪಾಠಶಾಲೆಯನ್ನು ಬಿಟ್ಟ ನಾನಕನು, ತಾಳ್ವಂದಿಗ್ರಾಮದ ಸುತ್ತಲೂ ಇದ್ದ ಅರಣ್ಯಪ್ರದೇಶಕ್ಕೆ ಏಕಾಂಗಿಯಾಗಿ ನಡೆದು ಅಲ್ಲಿ ಧ್ಯಾನಪರನಾಗಿ ಕಣ್ಣುಮುಚ್ಚಿಕೊಂಡು, ಅನೇಕ ಗಂಟೆಗಳವರೆಗೆ ಬಾಹ್ಯಪ್ರಜ್ಞೆಯೇ ಇಲ್ಲದಂತೆ ಕುಳಿತುಬಿಡುವನು. ಅಲ್ಲದೆ ಅಲ್ಲಿ ತಂಗಿರುತ್ತಿದ್ದ ಹಲವು ಮಂದಿ ಜೋಗಿಗಳು ಬೈರಾಗಿಗಳೊಂದಿಗೆ ದೇವರು ಮತ ಸತ್ಯ ಧರ್ಮ ನ್ಯಾಯಗಳು ಮುಂತಾದ ಹಲವು ವಿಚಾರಗಳನ್ನು ಕುರಿತು ಚರ್ಚಿಸುವನು. ಭಗವಂತನು ಚೇತನಾಚೇತನವಾದ ಸಮಸ್ತಕ್ಕೂ ಆಧಾರಕನು ಎಂಬ ವಿಷಯದಲ್ಲಿ ಆತನ ಅಭಿಪ್ರಾಯವು ಮೇಲೆ ಮೇಲೆ ಸ್ಥಿರಗೊಳ್ಳಲಾಗಿತು.

'ಯೋಗಿಗಳು ಯೋಗಸಾಧನೆ ಮಾಡಿಕೊಳ್ಳಲಿ-ತಿಂಡಿಪೋತರು ಒಡಲು ಬಿರಿವಂತೆ ತಿಂದುಕೊಳ್ಳಲಿ

ತಪೋನಿರತರು ತಪಸ್ಸು ಮಾಡಿಕೊಳ್ಳಲಿ-ಯಾತ್ರಿ ತೀರ್ಥಗಳಲ್ಲಿ ಮುಳುಗಿ ಏಳಲಿ

ಆದರೆ ದೇವಾ, ನಾನು ಮಾತ್ರ ನಿನ್ನ ಪವಿತ್ರ ನಾಮೋಚ್ಚಾರಣೆಯ ಕೇಳಿಕೊಂಡಿರುವಂತೆ ಅನುಗ್ರಹಿಸು.

ನಿನ್ನ ನಾಮಾವಳಿಗಳ ಪಾಡುವ ಭಕ್ತರ ದಿವ್ಯವಾಣಿಗೆ ನನ್ನ ಕಿವಿಯು ಸರ್ವದಾ ಎರವಾಗಿರಲಿ.'

ಈ ಬಗೆಯ ಅನುಭವದಿಂದ ನಾನಕಬಾಲಕನು, ಸದಾ ಧ್ಯಾನಮಗ್ನನಾಗಿ ಆತ್ಮತತ್ವಚಿಂತನೆಯಿಂದ, ಬೇರೆಯವರಿಂದ ಶ್ರವಣಮಾಡಿ ತಿಳಿವ ಜ್ಞಾನಕ್ಕಿಂತಲೂ, ಅಧಿಕಾಧಿಕ ಜ್ಞಾನವನ್ನು ಸಂಪಾದಿಸಿದನು. ಭಕ್ತಿಯು ದಿನದಿನಕ್ಕೆ ಸ್ಥಿರಗೊಂಡಿತು. ಸರ್ವೇಶ್ವರನ ನಾಮಧ್ಯಾನದಲ್ಲಿ ಶ್ರದ್ಧೆಯು ದೃಢಪಟ್ಟಿತು. ಆತ್ಮಚಿಂತನಾಭ್ಯಾಸವು ಬಲಗೊಂಡಿತು. ಪ್ರಾಪಂಚಿಕ

ವಸ್ತುಗಳಲ್ಲಿ ಜಿಹಾಸೆಯು ರೂಢಿಗೆ ಬಿದ್ದು-ವೈರಾಗ್ಯ ಪರಚಿತ್ತವೃತ್ತಿಯು ಘನೀಭೂತವಾಯಿತು. ಬೇಸಗೆಯ ಚಂಡಸೂರ್ಯಕಿರಣಗಳ ತಾಪವಾಗಲೀ, ಚಳಿಗಾಲದ ಕೊರೆದು ಹೋಗುವಂತಹ ಚಳಿಯಾಗಲಿ, ಮಳೆಯಾಗಲಿ ಆತನ ಮನಸ್ಸನ್ನು ಚಂಚಲಗೊಳಿಸಲು ಶಕ್ತವಾಗಲಿಲ್ಲ. ನಾನಕನು ಲೋಕೇಶ್ವರನ ಪವಿತ್ರನಾಮವನ್ನು ಉಚ್ಚಸ್ವರದಿಂದ ಭಜನೆಮಾಡುತ್ತ ಗ್ರಾಮದಲ್ಲಿ ಉನ್ಮತ್ತನಂತೆ ಸಂಚರಿಸುವನು. ಆಗಿನ ಆತನ ಭಾವನೆಯು

'ಮಾನವನು ಬಿತ್ತಿದಂತೆ ಬೆಳೆಯುವನು-ಗಳಿಸಿದಂತೆ ಉಣ್ಣುವನು
ಭಗವದ್ಭಜಕರ ವಿಷಯವಾಗಿ ಯಾವ ಬಗೆಯ ಚರ್ಚೆಯನ್ನೂ ನಡೆಸಬೇಡ
ಅವರು ತಮ್ಮ ಬಾವುಟವ ಹಾರಿಸಿಕೊಂಡು ಸ್ವರ್ಗಕ್ಕೆ ನಡೆಯುವರು.
ಮಾನವನ ಕೃತಿಯಿಂದಲ್ಲವೆ ಆವನ ಗಣನೆಯಾಗತಕ್ಕುದು
ಭಗವಾನನನ್ನು ಸ್ಮರಿಸಿಕೊಳ್ಳದೆ ಬಿಟ್ಟ ಒಂದೊಂದು ನಿಶ್ವಾಸವೂ ವ್ಯರ್ಥವಾದುದು; ಉಚ್ಛ್ವಾಸವೂ ನಿರರ್ಥಕವಾದುದು.
ಕೊಳ್ಳುವವರು ದೊರೆತರೆ ಈ ದೇಹವನ್ನು ವಿಕ್ರಯಿಸಬಲ್ಲೆ
ಜಗತ್ಪಿತನ ದಿವ್ಯನಾಮದಿಂದ ಘೋತವಾಗದಿದ್ದಲ್ಲಿ ಈ ಜಡದೇಹದಿಂದೇನು ಫಲ ?'

ಮಗನ ಈ ಚರ್ಯೆಗಳು ಕಾಳುವಿಗೆ ತೃಪ್ತಿಕರವಾಗಲಿಲ್ಲ. ಜೋಗಿ ವಿರಾಗಿಗಳ ಸಹವಾಸದಿಂದ ತನ್ನ ಮಗನು ಕೆಟ್ಟುಹೋಗುವನೆಂದು ಭಾವಿಸಿ, ರಾಯ್ ಬೂಲಾರನ ಪ್ರೇರಣೆಯಿಂದ ತನ್ನ ಮಗನಿಗೆ ಪರ್ಷಿಯನ್ ಭಾಷಾಭ್ಯಾಸ ಮಾಡುವಂತೆ ನಿಯಮಿಸಿದನು. ಈಗಿನ ಹಿಂದೂಗಳು ಜೀವನ ಸಂಪಾದನೆಗಾಗಿಯಾದರೂ ಹೇಗೆ ಇಂಗ್ಲಿಷ್ ಭಾಷಾಭ್ಯಾಸ ಮಾಡುತ್ತಿರುವರೋ ಹಾಗೆಯೇ ಆಗಿನ ಹಿಂದೂಗಳು ಪರ್ಷಿಯನ್ ಭಾಷೆಯನ್ನು ಕಲಿಯುತ್ತಿದ್ದರು. ನಾನಕನು ಹಿಂದೆ ತನ್ನ ಪ್ರಥಮ ವಿದ್ಯಾಗುರುವನ್ನು ಹೇಗೆ ಆಶ್ಚರ್ಯಪಡಿಸಿದ್ದನೋ, ಹಾಗೆಯೇ ಈಗ ಈ ಪರ್ಷಿಯನ್ ವಿದ್ಯಾಗುರುವನ್ನೂ ತನ್ನ ಅಲೌಕಿಕ ಪ್ರತಿಭೆಯಿಂದ ಆಶ್ಚರ್ಯಮಗ್ನನನ್ನಾಗಿ ಮಾಡಿದನು. ಅಷ್ಟು ಚಿಕ್ಕ ಬಾಲಕನು ಹೇಳುತ್ತಿದ್ದ ಬಹು ಗಹನವೂ ಭಗವತ್ಸಂಬಂಧವೂ ಆದ ಹಲವು ವಿಚಾರಗಳನ್ನು ಕೇಳಿ ಆತನಿಗೂ ನಾನಕನಲ್ಲಿ ಗೌರವಭಾವವುಂಟಾಯಿತು. ಮುಂದೆ ಅಲ್ಲಿ ಕೆಲವು ಕಾಲ ವಿದ್ಯಾಭ್ಯಾಸನಡೆ

ದಂತೆ ತೋರುತ್ತದೆ. ಏಕೆಂದರೆ, ತರುವಾಯ ಆತನಿಂದ ರಚಿತವಾದ ಗ್ರಂಥ್ ಸಾಹೇಬ್ ಎಂಬ ಸಿಕ್ಕರ ಧರ್ಮಗ್ರಂಥದಲ್ಲಿ ಅನೇಕ ಪರ್ಷಿಯನ್ ಪದಗಳು ಧಾರಾಳವಾಗಿ ಉಪಯೋಗಿಸಲ್ಪಟ್ಟು, ಈ ವಿಚಾರವನ್ನು ದೃಢಪಡಿಸುತ್ತಿವೆ.

ಪರ್ಷಿಯನ್ ಭಾಷಾಭ್ಯಾಸವೂ ಆತನನ್ನು ಲೌಕಿಕವಾದ ಯಾವುದೊಂದು ಉದ್ಯೋಗಕ್ಕೂ ಸಿದ್ಧಗೊಳಿಸಲಿಲ್ಲ. ಕಾಳುವು ತನ್ನ ಮಗನು ಮೂಢನೆಂದೂ ಮರುಳನೆಂದೂ ನಿಶ್ಚಯಿಸಿ ಅನುಪಯೋಗಿಯಾದಾ ಮಗನು ಎಮ್ಮೆಗಳನ್ನಾದರೂ ಕಾಯ್ದುಕೊಂಡು ಬರಲೆಂದು ಮಾರನೆಯ ದಿನದಿಂದ ಸಮೀಪದ ಅಡವಿಗೆ ಕಳುಹಿಸಿದನು. ಆ ಒಂದು ದಿನ ಎಮ್ಮೆ ಕಾಯುವ ಕೆಲಸವು ಸುರಕ್ಷಿತ ನಡೆಯಿತು. ಎರಡನೆಯ ದಿನ ನಾನಕನು ಧ್ಯಾನಮಗ್ನನಾಗಿ ಬಂಡೆಯಮೇಲೆ ಕುಳಿತುಬಿಡಲು, ಆ ಪಶುಗಳು ಪಕ್ಕದ ಹೊಲಗದೆಗಳಿಗೆ ನುಗ್ಗಿ ಧ್ವಂಸಮಾಡಿದುವು. ಹೊಲದ ಯಜಮಾನನು, ಕೂಗಿ ಬೊಬ್ಬೆಯಿಟ್ಟು ಮನಬಂದಂತೆ ದೂಷಿಸತೊಡಗಲು, ನಾನಕನು ಸಮಾಧಾನದಿಂದ —'ಅಣ್ಣಾ ಇಲ್ಲ ವ್ಯಥೆಪಡಬೇಡ, ಏನೂ ಆಗಲಿಲ್ಲ. ನಿನಗೆ ಭಗವಂತನ ಅನುಗ್ರಹವಾಗುವುದು' ಎಂದು ನುಡಿದನು. ಆದರೆ ಆ ಮಾತು ಅವನಿಗೆ ಸಮಾಧಾನವಾಗದಿರಲು, ಅವನು ತನ್ನ ನಷ್ಟವನ್ನು ಕುರಿತು ರಾಯ್ ಬೂಲಾರನೊಂದಿಗೆ ದೂರಿಕೊಂಡನು. ಆತನು ನಾನಕನನ್ನು ಕರೆಸಿ ಸಂಗತಿಯೇನೆಂದು ವಿಚಾರಿಸಲು,—'ಇಲ್ಲ, ಪೈರಿಗೆ ಏನೂ ತೊಂದರೆಯಾಗಿಲ್ಲ' ವೆಂದು ಆತನು ಹೇಳಿದನು. ಬೂಲಾರನು ತನ್ನ ಜನಗಳನ್ನು ಹೊಲಕ್ಕೆ ಕಳುಹಿಸಿ ಪರೀಕ್ಷಿಸಲು - ಒಂದೇ ಒಂದು ಹುಲ್ಲಿನ ಕೊನೆಯಾದರೂ ಮುರಿಯದೆ, ಕಳಕಳಿಸುತ್ತಿದ್ದ ಪೈರನ್ನು ಕಂಡು ಎಲ್ಲರೂ ಪರಮಾಶ್ಚರ್ಯಮಗ್ನರಾದರು.

ನಾನಕನಿಗೆ ಒಂಬತ್ತನೆಯ ವಯಸ್ಸು ನಡೆಯುತ್ತಿದ್ದಾಗ ಕಾಳುವು, ಕ್ಷತ್ರಿಯರಾದ ತಮ್ಮ ಕುಲಪದ್ಧತಿಯ ಪ್ರಕಾರ, ಅವನಿಗೆ ಉಪನಯನ ಮಾಡಬೇಕೆಂದು ಪ್ರಯತ್ನಮಾಡಿದನು. ಬಂಧು ಬಾಂಧವರು ನೆರೆದರು, ಇಷ್ಟಮಿತ್ರರು ಕೂಡಿದರು. ಓಲಗ ತಾಳಮೇಳಗಳೂ, ಉತ್ಸವ ವೈಭವಗಳೂ ಪದ್ಧತಿಯಂತೆ ನಡೆದುವು. ಪ್ರಾರಂಭದ ವಿಧ್ಯುಕ್ತ ಕ್ರಿಯೆಗಳೆಲ್ಲ ನಡೆದು, ಪುರೋಹಿತನು. ಯಜ್ಞೋಪವೀತವನ್ನು ಕೈಯಲ್ಲಿ ಹಿಡಿದುಕೊಂಡು ನಾನಕನ ಕೊರಳಿನಲ್ಲಿ ಹಾಕಲು ಯತ್ನಿಸುವವೇಳೆಗೆ ಅವನು—'ಇದೇನು ?

ಈ ದಾರವನ್ನು ನನ್ನ ಕೊರಳಿನಲ್ಲಿ ಹಾಕುವುದರಿಂದ ಪ್ರಯೋಜನವೇನು?'
ಎಂದು ನುಡಿದು - ಆವೇಶಗೊಂಡವನಂತೆ, ಈ ಕೆಳಗೆ ಹೇಳುವ ಅರ್ಥಗರ್ಭಿ
ತವಾದ ಮಾತುಗಳನ್ನಾಡಿದನು.

''ದಯೆಯು ದೂದಿ (ಅರಳೆ) - ತೃಪ್ತಿಯು ದಾರವಾಗಿರಲು, ಸಂಯಮವು
ಗ್ರಂಥಿಯಾಗಿರಲು, ಸತ್ಯವೆಂಬ ಹುರಿಗೂಡಿಸೈ!
ಅಂತಹ ದಾರವೊಂದಲ್ಲವೆ ಆತ್ಮನಿಗೆ ಯೋಗ್ಯ ಉಪವೀತವಾದೀತು ? ಅದ
ಧರಿಸೈ ಹಾರುವಾ!
ಅದು ಹರಿವುದಲ್ಲ, ಕೊಳೆಯಾಹುದಲ್ಲ, ಹುಳಿವುದಲ್ಲ, ಬೇವುದಲ್ಲ. ಅಂತಹ
ದಾರವನೊಂದ ಧರಿಸಿ ಮೆರೆವ ಹಾರುವನಲ್ಲವೆ ಧನ್ಯನು!
ನಾಲ್ಕು ದಮ್ಮಡಿಗೊಂದು ದಾರವ ಕೊಳುವೆ; ಅದನು ಕೊರಳೊಳಗಿಡುವೆ.
ಅದರಿಂದಲುಂಟಾದ ಲಾಭವೇನೈ!
ಮೂರೆಳೆಯ ದಾರದ ಹಾರುವನು - ಜನಾಂಗದ ಗುರುವಾಗಬಲ್ಲನೆ ?
ದೇಹವಳಿವುದು, ದಾರಹರಿವುದು, ಆತ್ಮ ದುರ್ಗತಿಗಿಳಿವುದು! ಇದರಿಂದ ಬಂ
ದುದೇನಯ್ಯ''

ನಾನಕನ ಈ ಮಾತುಗಳನ್ನು ಕೇಳಿ ಎಲ್ಲರೂ ರೇಗಿದರು. ಪುರೋಹಿ
ತನಿಗಾದರೋ ಕೋಪವು ನೆತ್ತಿಗೇರಿತು.—''ಏನು ಹೇಳುತ್ತಿರುವೆಯೋ
ಪೋರಾ! ನಿನಗಿಂತ ನಾಲ್ಕರಷ್ಟು ವಯಸ್ಸಾಗಿರುವ ನಮಗಿಂತಲೂ ನಿನಗೆ
ಹೆಚ್ಚಾಗಿ ತಿಳಿಯುವುದೋ? ಸುಮ್ಮನೆ ಹೇಳಿದಂತೆ ಕೇಳು. ವೇದವಿಧಿಯಾ
ದ ಈ ಯಜ್ಞೋಪವೀತ ಧಾರಣೆಯಾಗದಿದ್ದರೆ ನೀನು ದ್ವಿಜನೆಂತಾಗುವೆ?''
ಎಂದು ಮುಂತಾಗಿ ಆಕ್ಷೇಪಿಸಿದನು. ಆಗ ನಾನಕನು,

''ಎಲ್ಲೈ ಹಲವು ಕಳವುಮಾಡುವರು, ವ್ಯಭಿಚಾರಮಾಡುವರು, ಅಸಂಖ್ಯ ಅ
ನೃತವಾಡುವರು, ಕೇಳಲಾಗದ ದೂಷಣೆಗಳ ನುಡಿವರು,
ಸಹಜೀವಿಗಳ ಪರಿಪರಿಯಿಂದ ಕಿರುಕುಳ ಪಡಿಸುವರು, ಹಿಂಸಿಸುವರು,
ಕೊಲ್ಲುವರು.
ಈ ದಾರವು, ಆ ಪಾಪಗಳಿಂದಲವರ ಉದ್ಧರಿಸುವುದೇನೈ ! ಕೊಳೆಯಾಯಿತೆಂ
ದದ ನೊಗೆಯುವೆ - ಹಳೆಯದಾಯಿತೆಂದದ ಕಳೆಯುವೆ, ಇದರಿಂದ
ಲೆಂತೈ ಪಾಪ ಪಂಕವಳಿವುದ ?

ಸರ್ವೋತ್ತಮನ ಪಾವನನಾಮವ ನೆನೆಯೆ-ಮರವೆಗೊಳಗಾಗದೆ ನೆನೆಯೆ,
ಹಾರುವಾ ನಾಪೇಳ್ದ ದಾರವದು ದೊರೆವುದು.
ಅದ ಧರಿಸು.—ಧರಿಸಿ, ಕಳೆ ಜನುಮಜನುಮದ ದುರಿತಗಳ-ಜನನ ಮರಣಗಳ
ಮೂಲವ.''

ಉಚ್ಛೃಂಖಲರೀತಿಯಿಂದ ದೊಡ್ಡವರೆಂದು ಗಮನಿಸದೆ, ವೇದವಿಧಿಯೆಂದು ಗೌರವಿಸದೆ ನಾನಕನು ಹೇಳತೊಡಗಿದ ಪ್ರಸಂಗವನ್ನು ಕೇಳಿ ಕೋಪಾಕ್ರಾಂತನಾದ ಪುರೋಹಿತನು ನಾನಕನನ್ನು ಪರಿಪರಿಯಿಂದ ದೂಷಿಸತೊಡಗಿದನು. ಪೂರ್ವಾಚಾರಗಳನ್ನು ವಿಾರಿನಡೆವ ವ್ರಾತ್ಯನೆಂದನು ಅವಿವೇಕಿಯೆಂದನು. ಹಟಮಾರಿಯೆಂದು ಹಳಿದನು. ನಾಸ್ತಿಕನೆಂದು ನಿಂದಿಸಿದನು. ಆಗ ನಾನಕನು ಹಸನ್ಮುಖದಿಂದಲೇ !--
'ಅಲ್ಲೈ ಉಚ್ಛೃಂಖಲತೆಯಿಂದ ನಡೆಯಲೆಳಸುವ ಇಂದ್ರಿಯಂಗಳಿಗೆ
*ದಾರವಿಲ್ಲ-ಸ್ತ್ರೀವ್ಯಾಮೋಹಕ್ಕೆ ದಾರವಿಲ್ಲ.
ಬಾಯಿಂದ ನುಡಿಯಲಾಗದ - ಮನದಿಂದ ಯೋಚಿಸಲಾಗದ ದುರ್ವೃತ್ತಿಗಳ
ಆಚರಣೆಗೆ ದಾರವಿಲ್ಲ;
ದುರ್ಮಾರ್ಗಗಳಲ್ಲಿ ನಡೆವ ಪಾದಗಳಿಗೆ ದಾರವಿಲ್ಲ-ಕಳುವ ಕೈಗಳಿಗಿಲ್ಲ;
ನುಡಿಯಬಾರದುದ ನುಡಿವ ನಾಲಿಗೆಗಿಲ್ಲ-ನೋಡಬಾರದುದ ನೋಡುವ
ಕಣ್ಗಳಿಗಿಲ್ಲ ದಾರ—
ಇಂತಹ ದಾರಗಳ ಧರಿಸದೆ ಅಲೆವ ಹಾರುವಾ-ಕೊರಳಲ್ಲಿ ಮೂರೆಳೆಯ
ಹಾಕಿದರೆ ಅದರಿಂದಲಾಗುವುದೇನ್ನೈ ?' ತಡೆಯಿಲ್ಲ.

ಎಂದು ಮುಂತಾಗಿ ನುಡಿದನು. ಪುರೋಹಿತನೂ ಅಲ್ಲಿ ನೆರೆದ ಇತರರೂ ಆತನ ಭಾಷಣಕ್ಕೆ ಪ್ರತ್ಯುತ್ತರ ಕೊಡಲಾರದೆ ಹೋದರು. ಇಂತು ನಾನಕನ ಯಜ್ಞೋಪವೀತಧಾರಣೆಯು ಬಾಹ್ಯರೀತಿಯಿಂದ ನಡೆಯದೆ-ಭೌತಿಕ ಮೂರೆಳೆಯ ದಾರವು ಕೊರಳೊಳಕ್ಕೆ ಬೀಳುವ ಬದಲು, ಆ ಬಾಲಕನು ತಾನು ಹೇಳಿದ ದಯೆ ಧರ್ಮ ಧೈರ್ಯ ಸಂಯಮ ಸತ್ಯ ಶಾಂತತೆ ಬ್ರಹ್ಮಚರ್ಯಗಳೆಂಬ ಆಧ್ಯಾತ್ಮಿಕ ಹುರಿಗೂಡಿದ ಅಮೌಲ್ಯಯಜ್ಞೋಪವೀತವನ್ನು ಧರಿಸಿ-ಬ್ರಹ್ಮಚರ್ಯತೇಜದಿಂದ ವಿರಾಜಿಸಿದನು.



## ಅಧ್ಯಾಯ ೩ "ಸರ್ಕಾರದಲ್ಲಿ ಉದ್ಯೋಗ"

ಮಗನ ಈ ಬಗೆಯ ಚರ್ಯೆಯು, ತಂದೆಯಾದ ಕಾಳುವಿನ ಮನಸ್ಸಿಗೆ ಬಹು ವ್ಯಥೆಯನ್ನುಂಟುಮಾಡಿತು. ಕೈಗೆ ಬಂದ ಮಗನು, ಯಾವುದೊಂದು ಲೌಕಿಕವೃತ್ತಿಗೂ ಸಿದ್ಧನಾಗದೆ, ಧಾರ್ಮಿಕವಾಗಿ ನಡೆಯಬೇಕಾದ ಉಪನಯನ ಕರ್ಮಕ್ಕೂ ಆಸ್ಪದಕೊಡದೆ, ಹೀಗೆ ಮೂರ್ಖನಾಗಿ ಬಿಟ್ಟುದರಿಂದ, ಅವನ ವಿಷಯದಲ್ಲಿ ಮುಂದೇನು ಮಾಡಬೇಕೆಂಬುದು ತೋರದೆ, ಆತನು ಚಿಂತಾಕ್ರಾಂತನಾದನು. ಆಗ ಕೆಲವುಂದಿ ಆಪ್ತರು ಅವನನ್ನು ಕುರಿತು – 'ನಾನಕನಿಗೆ ವಿವಾಹಮಾಡಿದರೆ, ವಿಷಯಸುಖಾಭಿಲಾಷೆಯು ಅವನನ್ನು ಬಾಧಿಸತೊಡಗುವುದರಿಂದ ಆಗ ಅವನು ಕಾರ್ಯತತ್ಪರನಾದರೂ ಆಗಬಹುದು' ಎಂದು ಸಲಹೆಯಿತ್ತರು. ಈ ಮಧ್ಯೆ ನಾನಕನ ತಂಗಿಯಾದ ನಾನಕಿಯನ್ನು 'ಅವಿಾಲ ಜಯರಾಮ್' ಎಂಬಾತನು ಮದುವೆಯಾಗಿ ಆಕೆಯು ಸುಲ್ತಾನಪುರದಲ್ಲಿದ್ದ ತನ್ನ ಪತಿಗೃಹದಲ್ಲಿ ವಾಸವಾಗಿದ್ದಳು. ಮನೆಯಲ್ಲಿ ತನ್ನ ಪತ್ನಿಯ ಸಹಾಯಕ್ಕೆ ಯಾರೂ ಇಲ್ಲದಿದ್ದುದರಿಂದ, ಕಾಳುವು, ಮೇಲ್ಕಂಡ ಹಿತಚಿಂತಕರ ಸಲಹೆಯಂತೆ ಅವನಿಗೆ ಮದುವೆಮಾಡಿದರೆ, ಪ್ರಾಪಂಚಿಕವಿಷಯಗಳಲ್ಲಿ ಕೇವಲ ಉದಾಸೀನಭಾವದಿಂದಿರುವ ಅವನ ಮನಸ್ಥಿತಿಯೂ ಉತ್ತಮವಾಗುವುದರೊಂದಿಗೆ, ಮನೆಯ ಕೆಲಸಕಾರ್ಯಗಳಲ್ಲಿ ತನ್ನ ಪತ್ನಿಗೆ ಸಹಾಯವೂ ಒದಗಿದಂತಾಗುವುದೆಂದು ಯೋಚಿಸಿ ಕನ್ಯಾನ್ವೇಷಣೆಗಾಗಿ ಅಲ್ಲಲ್ಲಿ ಪ್ರಯತ್ನಿಸಿದನು. ಈ ಪ್ರಯತ್ನದಫಲವಾಗಿ ಗುರುದಾಸಪುರ ಜಿಲ್ಲೆಯ ಬಟಾಲಾ ಎಂಬಲ್ಲಿ ವಾಸವಾಗಿದ್ದ ಮುಲಾ ಎಂಬಾತನ ಮಗಳು ಸೂಲಖಾನಿ ಎಂಬ ಕನ್ಯೆಯು ದೊರೆತಳು. ಪ್ರಾರಂಭದ ನಿಶ್ಚಯತಾಂಬೂಲಾದಿ ಮಂಗಳಕಾರ್ಯಗಳೂ ನಡೆದುವು ಬಟಾಲಾಕ್ಕೂ ನಾನಖಾನಾ ಊರಿಗೂ ಬಹು ದೂರವಿದ್ದುದರಿಂದ ಪದೇ ಪದೇ ಬಂದುಹೋಗುವುದು ಸಾಧ್ಯವಿಲ್ಲವೆಂದು, ಕನ್ಯಾ ನಿಶ್ಚಯವಾದ ಕೆಲವು ದಿನಗಳೊಳಗಾಗಿಯೇ ವಿವಾಹ ಮಹೋತ್ಸವವೂ ನಡೆದುಹೋಯಿತು. ವಿವಾಹ ಕಾಲದಲ್ಲಿ ನಾನಕನಿಗೆ ವಯಸ್ಸು ಹದಿನಾಲ್ಕು ಸಂವತ್ಸರಗಳು ಮಾತ್ರವೇ ಆಗಿದ್ದಿತೆಂದು ಹೇಳಲ್ಪಟ್ಟಿದೆ.

ವಿವಾಹವಾದ ತರುವಾಯ ಕೆಲವು ದಿನಗಳು, ಕಾಳುವು ನಾನಕನಿಗೆ ಹಿಂದಿನಂತೆಯೇ ಎಮ್ಮೆಗಳನ್ನು ಕಾಯ್ದುಕೊಂಡಿರುವಂತೆ ನಿಯಮಿಸಿದ್ದನು. ಒಂದು ದಿನ ನಾನಕನು ಎಮ್ಮೆಗಳನ್ನು ಮೇಯಬಿಟ್ಟು. ಮಧ್ಯಾಹ್ನದ ಬಿಸಿಲಿನ ತಾಪವನ್ನು ಸಹಿಸಲಾರದೆ, ಅಲ್ಲೇ ಒಂದು ಮರದಕೆಳಗೆ ಮಲಗಿ ನಿದ್ರೆ ಮಾಡುತ್ತಿದ್ದನು. ತನ್ನ ಕೆಲಸದಮೇಲೆ ಆ ಮಾರ್ಗವಾಗಿ ಹೋಗುತ್ತಿದ್ದ ರಾಯ್ ಬೂಲಾರನು ಮಲಗಿದ್ದ ನಾನಕನನ್ನು ಕಂಡು ಎಚ್ಚರಗೊಳ್ಳುವನೇನೋ ಎಂದು ಸ್ವಲ್ಪಹೊತ್ತು ನಿಂತುನೋಡಿದನು. ನಾನಕನು ಎಚ್ಚರಗೊಳ್ಳಲಿಲ್ಲ.—ಬೂಲಾರನು - ನಾನಕನಮೇಲೆ ಬಿಸಿಲುಬೀಳದಂತೆ ಮರೆಯಾಗಿದ್ದ ಮರದ ನೆರಳು, ಇತರ ಮರಗಳ ನೆರಳಿನಂತೆ ಹೊತ್ತುಹೋದಂತೆಲ್ಲಾ ಸೂರ್ಯನ ಗಮನದೊಂದಿಗೆ ಸ್ಥಳಾಂತರವನ್ನು ಹೊಂದದೆ, ಚಲಿಸದೆ ಒಂದೇಸಮನಾಗಿ ಇದ್ದುದನ್ನು ನೋಡಿ ಕೌತುಕಗೊಂಡನು. ಮತ್ತೊಂದು ವೇಳೆ ಹುಲ್ಲುಗಾವಲಲ್ಲಿ ಮಲಗಿದ್ದ ನಾನಕನ ತಲೆಯಮೇಲೆ ಬಿಸಿಲಿಗೆ ಮರೆಯಾಗಿ ಒಂದು ದೊಡ್ಡ ನಾಗಸರ್ಪವು, ತನ್ನ ಹೆಡೆಯನ್ನಗಲಿಸಿಕೊಂಡು ಇದ್ದುದನ್ನು ಈ ಬೂಲಾರನು ನೋಡಿದ್ದನು. ಧಾರ್ಮಿಕ ಸ್ವಭಾವದ ಆ ದೊಡ್ಡಮನುಷ್ಯನು, ಈ ಅದ್ಭುತ ಸಂಗತಿಗಳನ್ನು ಪ್ರತ್ಯಕ್ಷ ಕಂಡುದರಿಂದ ನಾನಕನು ನೋಟಕ್ಕೆ ಹುಚ್ಚನಂತೆ ತೋರುತ್ತಿದ್ದರೂ ಸಾಮಾನ್ಯ ವ್ಯಕ್ತಿಯಲ್ಲವೆಂಬುದನ್ನು ಗ್ರಹಿಸಿ. ಕಾಳುವನ್ನು ಕುರಿತು—"ಅಯ್ಯಾ ನಿನ್ನೀ ಮಗನು, ಪ್ರಾಪಂಚಿಕ ಕಾರ್ಯಕಲಾಪಗಳಲ್ಲಿ ಉತ್ಸಾಹಗೊಳ್ಳುವುದಿಲ್ಲವೆಂದು ಆತನ ವಿಷಯದಲ್ಲಿ ನೀನು ಅತೃಪ್ತಿಗೊಳ್ಳಬೇಡ. ಆತನು ಮಹಾತ್ಮನು. ಅಂತಹ ಮಗನನ್ನು ಪಡೆಯಲು ನೀನು ಬಹಳ ಸುಕೃತಮಾಡಿದ್ದೆ. ಆತನಿಂದ ನಿನ್ನ ವಂಶವೇ ಪಾವನವಾಗುವುದು" ಎಂದು ಮುಂತಾಗಿ ಹೇಳಿ ಸಮಾಧಾನಗೊಳಿಸುತ್ತಿದ್ದನು. ನಾನಕನಮೇಲೆ ಹಾಗೆ ಲೋಕಕ್ಕೆ ವಿಲಕ್ಷಣ ರೀತಿಯಿಂದ ತನ್ನ ಛಾಯೆಯನ್ನು ಪ್ರಸರಿಸಿದ್ದ ಮರವು ಇನ್ನೂ ಜೀವಂತವಾಗಿರುವುದೆಂದೂ ಸಿಕ್ಕರು ಅದನ್ನು ಈಗಲೂ ಭಕ್ತಿಭಾವದಿಂದ ಕಂಡು ಗೌರವಿಸುತ್ತಿರುವರೆಂದೂ ಹೇಳಲ್ಪಟ್ಟಿದೆ.

ಸಾಧ್ವೀ ತೃಪ್ತೆಯೂ ತನ್ನ ಮಗನನ್ನು ನೆರೆಹೊರೆಯ ಜನರು ಹುಚ್ಚನೆಂದೂ, ಉದ್ಯೋಗ ವ್ಯವಹಾರಗಳಿಲ್ಲದ ಉಂಡಾಡಿಗನೆಂದೂ ಕರೆಯುತ್ತಾ

ಅಪಹಾಸ್ಯ ಮಾಡುತ್ತಿದ್ದುದನ್ನು ಕೇಳಿ ಸಹಿಸಲಾರದೆ, ಮಗನನ್ನು ಕುರಿತು— "ಅಪ್ಪಾ ನೀನು ಚಿಕ್ಕ ಮಗುವಲ್ಲ. ಎಳೆಯ ಕೂಸಲ್ಲ! ನಿನಗೂ ಮದುವೆಯಾಗಿ ಹೆಂಡತಿ ಮನೆಗೆ ಬಂದಿದ್ದಾಳೆ. ನಿನ್ನದೇ ಒಂದು ಸಂಸಾರವು ಸಾಗಬೇಕಾಗಿದೆ. ಹತ್ತು ಮಂದಿಯಂತೆ ನೀನೂ ಏನಾದರೊಂದು ಉದ್ಯೋಗವನ್ನು ಸಂಪಾದಿಸು. ಇನ್ನು ಈ ನಿಷ್ಪ್ರಯೋಜಕವಾದ ಆಕಾಶ ಪುರಾಣಗಳನ್ನು ಮೂಲೆಗೊತ್ತಿ ಬುದ್ಧಿವಂತನಾಗು" ಎಂದು ಹಲವು ಬಗೆಯಿಂದ ಬುದ್ಧಿ ಹೇಳಿದಳು. ಆದರಿಂದ ನಾನಕನ ಮನಸ್ಸಿನಮೇಲೆ ಯಾವಬಗೆಯ ಪರಿಣಾಮವೂ ಉಂಟಾಗಲಿಲ್ಲ. ಎಂದಿನಂತೆಯೇ ಆಗಲೂ ಅನೇಕ ಧಾರ್ಮಿಕ ವಿಚಾರಗಳನ್ನು ತಾಯಿಗೆ ಉಪದೇಶಿಸಿದನಲ್ಲದೆ, ತನ್ನ ಮಾರ್ಗವನ್ನು ಬೇರೆ ಬದಲಿಸಲಿಲ್ಲ. ಆ ವೇಳೆಗೆ, ಆತನ ತಂದೆಗೆ ಹೊಲಗದ್ದೆಗಳ ವ್ಯವಸಾಯ ಕಾರ್ಯದಲ್ಲಿ ಒಬ್ಬ ಆಳಿನ ಸಹಾಯದ ಆವಶ್ಯಕವಿದ್ದುದರಿಂದ ಕಾಳುವು ಮಗನನ್ನು ಕುರಿತು,—"ಅಪ್ಪಾ ನಾನಕ್ ಹೋಗಲಿ, ಇನ್ನೆಲ್ಲಿಗೂ ಹೋಗಬೇಡ. ನಡೆ ನಾವಿಬ್ಬರೂ ಹೊಲಕ್ಕೆ ಹೋಗೋಣ. ಹದ ಆರುವುದಕ್ಕೆ ಮುಂಚೆಯೇ ಉಳಬೇಕು, ಕಳೆ ತೆಗೆಯಬೇಕು, ಕಾಳುಬಿತ್ತಬೇಕು. ನೀರು ಕಟ್ಟಬೇಕು. ಬಹು ಕೆಲಸಗಳಿವೆ. ಏಳು" ಎಂದನು.

ಆಗಲೂ ನಾನಕನು,

'ಅಪ್ಪಾ ವ್ಯವಸಾಯವೆಂದರೇನೆಂದು ತಿಳಿದೆ ? ಅಮೌಲ್ಯವಾದ ಕಾಲವ ವ್ಯರ್ಥಗೊಳಿಸಿ, ಭೂಮಿಯನ್ನುತ್ತು ಎರಡು ಕಾಳು ಧಾನ್ಯವ ಬೆಳೆದರೆ ಅದು ವ್ಯವಸಾಯವೆನಿಸಿಕೊಂಡೀತೇ !—

ನಿನ್ನ ದೇಹವನ್ನೇ ಹೊಲವನಾಗಿಸು. ಕಾಮಕ್ರೋಧಗಳೆಂಬ ಕಳೆಗಳನಾರಿಸು. ಮದಮಾತ್ಸರ್ಯಗಳೆಂಬ ಹೆಂಡೆಗಳನೊಡೆ. ಭಗವನ್ನಾಮವೆಂಬ ಬಿತ್ತವನದರಲ್ಲಿ ಬಿತ್ತು. ಸತ್ಯಶೌಚಗಳೆಂಬ ಗೊಬ್ಬರಗೋಡುಗಳನೊದಗಿಸು. ಶಾಂತಿಸಮಾಧಾನಗಳೆಂಬ ಧಾನ್ಯವ ಸಂಗ್ರಹಿಸು. ಇದಲ್ಲವೆ ಶಾಶ್ವತಫಲದಾಯಕವಾದ ವ್ಯವಸಾಯವು' ಎಂದನು.

ಕಾಳುವು ಮಗನ ಈ ಮಾತನ್ನು ಕೇಳಿ, ನಿರಾಶಾಜನಕದೃಷ್ಟಿಯಿಂದ 'ನಾನಕ್, ನಿನಗೆ ಇನ್ನು ತಿಳಿಯಹೇಳಲು ನನ್ನಿಂದ ಸಾಧ್ಯವಿಲ್ಲ. ನೀನು ನಿನ್ನ ಹುಚ್ಚನ್ನು ಬಿಟ್ಟು ಮಾರ್ಗಕ್ಕೆ ಬರಲಾರೆ. ಇದರಿಂದಲೆಲ್ಲ

ಸಂಸಾರಿಗಳಾದ ನಮಗೆ ಹೊಟ್ಟೆ ತುಂಬದು. ವ್ಯಾಪಾರವನ್ನಾದರೂ ಮಾಡು. ಹತ್ತು ಜನಗಳೊಂದಿಗೆ ಬೆರೆದು ಬಳಕೆ ಮಾಡಿಕೋ' ಎಂದು ಅನೇಕ ಬಗೆಯಿಂದ ಹೇಳಿದನು. ಯಾವ ಬೋಧನೆಯೂ ಪ್ರಯೋಜನಕ್ಕೆ ಬರಲಿಲ್ಲ. ನಾನಕನು, ತನ್ನ ನಾಮಭಜನೆಯನ್ನೂ, ಧ್ಯಾನವನ್ನೂ, ಭಗವದ್ವಿಷಯಚಿಂತನೆಯನ್ನೂ ಬಿಡಲಿಲ್ಲ. ಈ ಮಧ್ಯಕಾಲದಲ್ಲೇ ಒಂದಾನೊಂದು ವೇಳೆ, ಧ್ಯಾನಮಗ್ನನಾಗಿ ಅನ್ನಾದ್ಯಾಹಾರಗಳಾಗಲೀ, ಬಾಹ್ಯಪ್ರಜ್ಞೆಯೇ ಆಗಲಿ ಇಲ್ಲದೆ, ಆತನು ನಾಲ್ಕು ದಿನಗಳವರೆಗೆ ಎಚ್ಚರಗೊಳ್ಳದಿದ್ದನು. ತರುವಾಯ ಎಚ್ಚೆತ್ತ ಅವನಿಗೆ, ಹುಚ್ಚಿನೊಂದಿಗೆ ಮೂರ್ಛೆರೋಗವೂ ಬಂತೆಂದು ಭಾವಿಸಿ, ಕಾಳೂತೃಪ್ತೆಯರೂ, ನೆರೆಹೊರೆಯ ಜನಗಳೂ ಬಹು ವಿಚಾರಪಟ್ಟು ಒಬ್ಬ ವೈದ್ಯನನ್ನಾದರೂ ಕರೆತಂದು ಚಿಕಿತ್ಸೆ ಮಾಡಿಸಬೇಕೆಂದು ಯೋಚಿಸಿದರು. ವೈದ್ಯನು ಬಂದು ನಾನಕನ ಮುಖನೋಡಿ, ನಾಡೀಪರೀಕ್ಷೆ ಮಾಡಲು ಕೈಹಿಡಿದನು. ಆಗ ನಾನಕನು, ಹಸನ್ಮುಖದಿಂದ ವೈದ್ಯನ ಮುಖ ನೋಡಿ:—

ಪ:—ಬಿಡುಬಿಡು ವೈದ್ಯನೆ | ಹಿಡಿಯುಸು ನಾಡಿಯೊ
ಳಿಡಗಿಲ್ಲವೊ ನನ್ನಯ ರೋಗ ||
ಬಿಡದಿಹುದದು ಮನ | ದೆಡೆಯೊಳು ಸೀನದ
ನುಡುಗಿಸಲಾರೆಯೊ ಹೋಗೀಗ ||

ನನ್ನಯ ದುಃಖವ | ನಿನ್ನು ತಿಳಿಯೆ ನೀ
ನಿನ್ನೇನೌಷಧವೀಯುವೆಯೋ ||
ಬಿನ್ನಣವೇಂ ನೋ | ವನ್ನಿತ್ತವನೇ
ಎನ್ನಯ ಕಷ್ಟವ ಬಿಡಿಸುವನೊ ||
ದೇವನ ಕಾಣದ | ನೋವೆನಗಾಗಿಹು
ದೀವಿಧದಳಲನು ಕಳೆಯುವೆಯ ||
ಸಾವಿಗೆ ಹೆದರದೆ | ಜೀವಿಯು ಸುಖಿಸಲು
ದೇವನೆ ಗತಿಯಲ್ಲವೆ ವೈದ್ಯ ||

'ಭರತಖಂಡದ ಜೀವಜ್ಯೋತಿಗಳು' ಪುಟ ೧೧೩.

"ವೈದ್ಯನೆ ನನಗಿರುವ ರೋಗವಿದು ನಿನ್ನ ಮಾತ್ರೆ ಮೂಲಿಕೆಗಳಿಂದ ಹೋಗತಕ್ಕುದಲ್ಲ. ಈ ಮಾನುಷದೇಹವು ವ್ಯರ್ಥನಾಶವಾಗುವುದಲ್ಲಾ ಎಂಬ ನೋವು ನನ್ನನ್ನು ಬಾಧಿಸುತ್ತಿಹುದು. ಅಮೌಲ್ಯವಾದೀ ಜೀವಿತವು ಲೋಕ ಪಿತನ ತಿಳಿಯದೆ ಮರಣಕ್ಕೀಡಾಗುವುದಲ್ಲಾ ಎಂಬ ಭಯವು ನನ್ನನ್ನು ಬೆದರಿಸುತ್ತಿರುವುದು. ಈ ನೋವನ್ನೂ ಭಯವನ್ನೂ ಪರಿಹರಿಸಬಲ್ಲ ಭಗ ವಂತನ ವಿಯೋಗಬಾಧೆಯು ಈ ಎಲ್ಲಕ್ಕಿಂತಲೂ ಹೆಚ್ಚಾಗಿ ನನ್ನನ್ನು ಸಂಕಟಪಡಿಸುತ್ತಿರುವುದು. ಈ ರೋಗಕ್ಕೆ ನೀನು ಔಷಧಕೊಡಲಾಪೆಯ? ಚಿಕಿತ್ಸೆ ಮಾಡಲಾಪೆಯ? ಇದು ನಿನ್ನಿಂದಾಗದ ಕಾರ್ಯ! ಈ ರೋಗವು ಯಾರಿಂದ ಪ್ರಾಪ್ತವಾಯಿತೋ, ಅವನೇ ಇದನ್ನು ನಿವಾರಿಸಬೇಕಾಗಿದೆ." ಎಂದು ಪ್ರತ್ಯುತ್ತರಕೊಟ್ಟನು. ವೈದ್ಯನು ಆ ಮಾತುಗಳನ್ನು ಕೇಳಿ, ಭ್ರಾಂತನಂತಾಗಿ, ನಾನಕನ ಕೈಬಿಟ್ಟು ಮನೆಯವರನ್ನು ಕುರಿತು—"ಈತನು ಸಾಮಾನ್ಯನಲ್ಲ ಮಹಾತ್ಮನು. ಈತನಿಗೆ ದೈವೀಹುಚ್ಚು ಹಿಡಿದಿರುವುದಲ್ಲದೆ, ಪ್ರಾಪಂಚಿಕ ವ್ಯಾಧಿಯಲ್ಲ. ಇದಕ್ಕೆ ಔಷಧಾದಿಗಳು ಏನೂ ಮಾಡಲಾರವು. ನಿಮ್ಮ ಮನೆತನದಲ್ಲಿ ಇಂತಹ ಪುಣ್ಯಪುರುಷನು ಜನ್ಮಿಸಿರುವುದು ನಿಮ್ಮ ಸುಕೃತವಿಶೇಷವೇ ಸರಿ" ಎಂದು ಹೊರಟು ಹೋದನು.

ತಮ್ಮ ಮಗನ ಅಲೌಕಿಕ ಯೋಗ್ಯತೆಯನ್ನು ಕುರಿತು ಇತರರು ಹೊಗಳುತ್ತಿದ್ದಾಗ್ಗೆ ಒಂದು ಬಗೆಯಿಂದ ಮನಸ್ಸಿಗೆ ಸಮಾಧಾನವೆನ್ನಿಸುತ್ತಿದ್ದರೂ, ಗೃಹಕೃತ್ಯತಾಪತ್ರಯಗಳು, ನೆರೆಹೊರೆಯ ಜನಗಳು ಆಡಿಕೊಳ್ಳುತ್ತಿದ್ದ ಹೀಯಾಳಿಕೆಯ ಮಾತುಕಥೆಗಳು ಮುಂತಾದುವುಗಳಿಂದ ಆ ಮಾತಾಪಿತೃಗಳು ಆಗಾಗ ಬೇಸರಗೊಂಡು ತಮ್ಮ ಮಗನನ್ನು ಏನಾದರೂ ಕೆಲಸಮಾಡುವಂತೆ ಪುನಃಪುನಃ ಬಲವಂತಪಡಿಸುತ್ತಿದ್ದರು. ಕಾಳುವೂ ತೃಪ್ತಾದೇವಿಯೂ ಹಾಗೆ ಆತನಿಗೆ ಸ್ವಾಭಾವಿಕವಾದ ಮನೋಧರ್ಮವನ್ನು ತಿಳಿಯದೆ, ದ್ರವ್ಯ ಸಂಪಾದನೆಗಾಗಿ ಆತನನ್ನು ನಿರ್ಬಂಧಪಡಿಸುತ್ತಿದ್ದರಾದರೂ, ಅಮಿಲ ಜಯರಾಮನು ನಾನಕನ ಗುಣಗಳನ್ನು ತಿಳಿದು ಮೆಚ್ಚಿಕೊಂಡಿದ್ದನು. ಮನೆಯಲ್ಲಿ, ವೈರಾಗ್ಯಚಿತ್ತವೃತ್ತಿಯು ಆತನಿಗೆ ಅಸ್ವಾಭಾವಿಕವಾದ ದ್ರವ್ಯ ಸಂಪಾದನಾ ವಿಚಾರದಲ್ಲಿ ಬಲವಂತವು ನಡೆಯು

ತ್ತಿದೆ ಎಂಬ ವಿಷಯವೂ ಆತನಿಗೆ ತಿಳಿದಿತ್ತು. ನಾನಕನನ್ನು ಕೆಲವು ದಿನಗಳವರೆಟ್ಟಿಗೆ ಆ ಸ್ಥಳದಿಂದ ಬೇರೆ ಕಡೆಯಲ್ಲಿ ವಾಸಮಾಡುವಂತೆ ಏರ್ಪಡಿಸುವುದು ಯುಕ್ತವೆಂದು ಭಾವಿಸಿ, ಆತನು, ತನ್ನಲ್ಲಿಗೆ ಕರೆಸಿಕೊಂಡನು. ಮತ್ತು ನಾನಕನಿಗೆ ಹಿಂದೀ ಪರ್ಷಿಯನ್ ಭಾಷೆಗಳೆರಡರಲ್ಲೂ ಪರಿಶ್ರಮವುಂಟೆಂದು, ತನ್ನ ಮೇಲಧಿಕಾರಿಯಾದ ದೌಲತ್‌ಖಾನನಲ್ಲಿ ಹೇಳಿ ಆಗಿನ ಸರ್ಕಾರದಲ್ಲಿ ಒಂದು ಉದ್ಯೋಗವನ್ನು ಕೊಡಿಸಿದನು. ಆತನ ಮಾತಾಪಿತೃಗಳು ತಮ್ಮ ಮಗನು ನಿರುದ್ಯೋಗಿ - ಉಂಡಾಡಿಗ ಎಂಬ ದುರ್ನಾಮಗಳು ತಪ್ಪಿ, ಹತ್ತುಮಂದಿಯಲ್ಲಿ ತಾವು ತಲೆಯೆತ್ತಿ ತಿರುಗುವಂತಾಯಿತಲ್ಲಾ ಎಂದು ಅತ್ಯಂತ ಹರ್ಷಿತರಾದರು. ಅವರೆಗೆ ತಾಳ್ವಂದಿಯಲ್ಲೇ ವಾಸಿಸುತ್ತಿದ್ದ ನಾನಕನ ಪತ್ನಿಯೂ ಇಬ್ಬರು ಮಕ್ಕಳೂ ಬಂದು ಈಗ ಆತನೊಂದಿಗೆ ವಾಸಿಸತೊಡಗಿದರು.



## ಅಧ್ಯಾಯ ೪ "ದೇಶ ಸಂಚಾರ"

ನಾನಕನು ಶ್ರೀಚಂದ್ ಮತ್ತು ಲಕ್ಷ್ಮೀದಾಸ್ ಎಂಬ ತನ್ನ ಇಬ್ಬರು ಮಕ್ಕಳೊಂದಿಗೂ ಪತ್ನಿಯೊಂದಿಗೂ, ಸುಲ್ತಾನಪುರದಲ್ಲಿ ಕೆಲವುಕಾಲ ಸುಖವಾಗಿ ವಾಸಮಾಡಿಕೊಂಡಿದ್ದನು. ಆತನು ನಿಯಮಿಸಲ್ಪಟ್ಟಿದ್ದ ಉಗ್ರಾಣದ ಅಧಿಕಾರಿಯ ಉದ್ಯೋಗವು ಆತನ ಸ್ವಭಾವಕ್ಕೆ ಬಹುಮಟ್ಟಿಗೆ ಒಗ್ಗಿಹೋಗಿದ್ದುದರಿಂದ, ನಾನಕನು ಬಹು ಶ್ರದ್ಧೆಯಿಂದ ತನ್ನ ಕಾರ್ಯದಲ್ಲಿ ತತ್ಪರನಾಗಿದ್ದನು. ಆ ಉದ್ಯೋಗಕ್ಕೆ ಸ್ವಾಭಾವಿಕವಾದ, ಗೌರವನೀಯವಾದ ಉಡುಪೂ, ಮಹಮ್ಮದೀಯ ಸರ್ವಾಧಿಕಾರಿಯಿಂದ ಒದಗಿಸಲ್ಪಟ್ಟಿದ್ದಿತು. ನಾನಕನ ಸಾಧುಸ್ವಭಾವ, ಮೃದುಭಾಷಣ, ದಯಾದಾಕ್ಷಿಣ್ಯಾದಿಗಳು, ಸತ್ಯಪ್ರಿಯತೆ, ಋಜುವರ್ತನ ಮುಂತಾದ ಹಲವು ಸದ್ಗುಣಗಳು, ಆತನನ್ನು ಸರ್ವಾಧಿಕಾರಿಯ ಪ್ರೀತಿಗೆ ಪಾತ್ರನನ್ನಾಗಿಸಿದುವು. ಆತನ ಕೈಕೆಳಗಿನ ನೌಕರರೂ, ನೆರೆಹೊರೆಯವರೂ ಗುಣಲುಬ್ಧರಾಗಿ

ಆತನಲ್ಲಿ ವಿಶೇಷ ಗೌರವಭಾವದಿಂದ ನಡೆದುಕೊಳ್ಳುತ್ತಿದ್ದರು. ಆಗಿನ ಕಾಲದಲ್ಲಿ ದ್ರವ್ಯ ಚಲಾವಣೆಯು ಕಮ್ಮಿಯಾಗಿದ್ದು - ಉದ್ಯೋಗಿಗಳಿಗೆ ವೇತನವು ದವಸರೂಪವಾಗಿಯೇ ಕೊಡಲ್ಪಡುತ್ತಿದುದರಿಂದ, ನಾನಕನು ತನ್ನ ಪಾಲಿಗೆ ಬರುತ್ತಿದ್ದ ದವಸಧಾನ್ಯಗಳಲ್ಲಿ ತನ್ನ ಗೃಹಕೃತ್ಯಕ್ಕೆ ಉಪಯೋಗವಾಗಿ ಮಿಕ್ಕುದನ್ನು, ಮಾರಿ ದ್ರವ್ಯ ಸಂಗ್ರಹಣಮಾಡದೆ - ಬಡಬಗ್ಗರಿಗೆ ದಾನವಾಗಿ ಹಂಚಿಬಿಡುತ್ತಿದ್ದನು. ದಿನದಿನಕ್ಕೆ ಆತನ, ಈ ಉದಾರ ಭಾವವೂ, ಪರರ ಕಷ್ಟವೆಂದರೆ ಒಡನೆ ಸಹಕರಿಸುತ್ತಿದ್ದ ಆತನ ಸೌಜನ್ಯ ನಿಸ್ವಾರ್ಥತೆಗಳೂ ಆತನನ್ನು ಆ ಊರಿನಲ್ಲಿ ವಿಶೇಷ ಗೌರವಕ್ಕೆ ಪಾತ್ರನನ್ನಾಗಿಸಿದುವು. ತಮ್ಮ ಮಗನು ಇಷ್ಟುಮಾತ್ರ ಹತ್ತುಮಂದಿಯಲ್ಲಿ ಬೆರೆದು, ಮನುಷ್ಯನಾಗಿ ತನ್ನಮಟ್ಟಿಗೆ ತಾನು ವಾಸಿಸುತ್ತಿರುವನಲ್ಲಾ ಎಂಬುದನ್ನು ತಿಳಿದು, ಆತನ ಮಾತಾಪಿತೃಗಳು ಎಷ್ಟೋಮಟ್ಟಿಗೆ ಸಮಾಧಾನಗೊಂಡರು.

ಹೆಂಡತಿ ಮಕ್ಕಳು, ಉದ್ಯೋಗ, ಸಂಪಾದನೆ, ಮಿತ್ರಬಾಂಧವರು, ಲೌಕಿಕವಾಗಿ ಪ್ರಾಪ್ತವಾದ ಗೌರವ ಮುಂತಾದುವುಗಳು, ನಾನಕನನ್ನು ಆತನ ವೈರಾಗ್ಯಪರ ಚಿತ್ತವೃತ್ತಿಯಿಂದ ತಿರುಗಿಸಲಾರದೆ ಹೋದುವು. ಲೋಕದಲ್ಲಿ—

*ವಲ್ಲಿ ಬೆಲ್ಲವನೊಲ್ಲೆ ನೆಲ್ಲುಮೋಗರ ನೊಲ್ಲೆ
ಎಲ್ಲಾನುಬಲ್ಲೆ ಮೊಸರೊಲ್ಲೆ - ಏಕೊಲ್ಲೆ?
ಇಲ್ಲದಕೆ ಒಲ್ಲೆ ಸರ್ವಜ್ಞ

*ವಸ್ತ್ರ

ಎಂಬ ಸರ್ವಜ್ಞಮೂರ್ತಿಯ ವಚನದಂತೆ, ಮದುವೆಯೊಲ್ಲೆ, ಮಕ್ಕಳನೊಲ್ಲೆ, ಧನಧಾನ್ಯಾದಿಗಳನೊಲ್ಲೆ, ನನಗೆ ಯಾವುದರಮೇಲೂ ಮಮತೆಯಿಲ್ಲ ಎಂದು ಹೇಳತಕ್ಕವರು ಬಹು ಜನಗಳುಂಟು! ಆಯಾ ಪದಾರ್ಥಗಳಿಗೆ ಅಭಾವವಿರುವಾಗ ಅವುಗಳನ್ನು ಒಲ್ಲೆನೆಂದು ಹೇಳುವುದು ವಿರಕ್ತಿಯೆನ್ನಿಸಿಕೊಳ್ಳಲಾರದು. ಆದರೆ ಅವುಗಳೆಲ್ಲವೂ ಪ್ರಾಪ್ತವಾಗಿದ್ದರೂ ಯಾರಿಗೆ ಅವುಗಳಮೇಲೆ ಆಂತರ್ಯಮೋಹಾದಿಗಳು ಉತ್ಪನ್ನವಾಗದಿರುವುದೋ, ಅವುಗಳ ವಿಷಯದಲ್ಲಿ ಲೋಭವೂ-ಅಹಂಕಾರ ಮಮಕಾರಗಳೂ ಹುಟ್ಟದಿರುವುದೋ, ಯಾರು ಅವೆಲ್ಲವನ್ನೂ ಉಂಟಾಗಿದ್ದಾಗಲೂ ನಿಸ್ಪೃಹತೆಯಿಂದ ಇರುವರೋ ಅವರೇ ನಿಜವಾದ ವೈರಾಗ್ಯಶಾಲಿಗಳು. ನಾನಕನು 'ಇಲ್ಲದಕೆ

ಒಳ್ಳೆ' ಎಂಬ ತರಗತಿಗೆ ಸೇರಿದ ವಿರಾಗಿಯಲ್ಲವೆಂಬುದು ಈವರೆಗೇ ಗೊತ್ತಾ ಗಿದೆಯಲ್ಲವೆ ? ಆತನ ಹಿಂದಿನ ಏಕಾಂತವಾಸ, ಭಗವತ್ಪರಧ್ಯಾನ-ನಾಮಸ್ಮರ ಣೆಗಳೂ, ತತ್ತ್ವವಿಷಯಕ ವ್ಯವಸಾಯವೂ ಯಾವಭಾಗದಲ್ಲೂ ಕಡಮೆಯಾ ಗಿರಲಿಲ್ಲ. ಆಗ ಆತನ ಮನೋಭಾವವು ಹೇಗಿತ್ತೆಂಬುದನ್ನು ವಿವರಿಸುವ ಒಂದು ಸಂಗತಿಯುಂಟು. ಉಗ್ರಾಣದ ಪದಾರ್ಥಗಳನ್ನು ರಾಜಾಜ್ಞೆ ಯಂತೆ ಇತರರಿಗೆ ಅಳೆದು ಕೊಡಬೇಕಾದ ಸಂದರ್ಭದಲ್ಲಿ, ಆತನು ಅಳೆದು ಅಥವ ತೂಕಮಾಡಿ ಏಕ್, ದೋ, ತೀನ್ ಎಂದು ಬಾರ ಎಂದರೆ ಹನ್ನೆರ ಡರವರೆಗೂ ಎಣಿಸಿ, ತರುವಾಯ ಹದಿಮೂರು ಎಂಬುದಕ್ಕೆ 'ತೇರಾ' ಎಂದು ಹೇಳಿದೊಡನೆಯೇ ಅಳೆವುದನ್ನೂ ತೂಕಮಾಡುವುದನ್ನೂ ನಿಲ್ಲಿಸಿ, ನಾಲ್ಕಾರುಸಾರಿ 'ತೇರಾ-ತೇರಾ' ಎಂದು ನುಡಿದು, ಮನಸ್ಸಿನಲ್ಲಿ ದೀರ್ಘವಾಗಿ ಅದರ ಅರ್ಥಚಿಂತನೆಮಾಡಿ, ಮುಂದಕ್ಕೆ ಅಳೆದು ಎಣಿಸಿಹಾಕುತ್ತಿದ್ದನಂತೆ ! ಹಿಂದೂಸ್ಥಾನೀ ಭಾಷೆಯಲ್ಲಿ 'ತೇರಾ' ಎಂಬ ಪದಕ್ಕೆ ಹದಿಮೂರು ಎಂಬು ದೊಂದೇ ಅರ್ಥವಲ್ಲ. 'ತೇರಾ' ಎಂದರೆ 'ನಿನ್ನದು' ಎಂಬರ್ಥವೂ ಉಂಟು. ನಾನಕನಿಗೆ ಅದರ ಎಣಿಕೆಯ ಸಂಖ್ಯೆಯ ಭಾವನೆಗಿಂತಲೂ, 'ನಿನ್ನದು' ಎಂಬ ಅರ್ಥವೇ ಮೇಲೆಮೇಲೆ ಹೆಚ್ಚಾಗಿ ಬರುತ್ತಿದ್ದಿತು. ಒಂದೊಂದು ವೇಳೆಯೂ, 'ದೇವಾ-ಇದೆಲ್ಲವೂ ನನ್ನದಲ್ಲ. ಈ ಉದ್ಯೋಗ, ಹೆಂಡಿರುಮಕ್ಕಳು, ಸುಖ ಸಂಪದಗಳು ಮುಂತಾದ ಈ ಒಂದೊಂದೂ ನಿನ್ನದು' ಎಂದು ಪ್ರತಿಯೊಂದ ನ್ನೂ,ಆ ಪದದ ಅರ್ಥಕ್ಕೆ ಅನುಸಂಧಾನಮಾಡಿ, ಮುಂದೆ ಪುನಃ ಅಳೆಯತೊಡ ವನು. ತಾಳ್ವಂದಿಯಿಂದ ಬಂದು, ಆತನ ಸೇವಕನೂ ಸ್ನೇಹಿತನೂ ಆಗಿ ನಿಂತಿದ್ದ ಮರ್ದನನೂ, ಇತರ ಹಲವು ಮಂದಿ ಸ್ನೇಹಿತರೂ ಆತನ ಈ ಚಿತ್ತ ವೃತ್ತಿಯನ್ನು ಬಹುಮಟ್ಟಿಗೆ ಮೆಚ್ಚಿಕೊಂಡಿದ್ದರು ! ಪ್ರತಿದಿನವೂ ಸಾಯಂ ಕಾಲ ರಾಜಸೇವಾ ಉದ್ಯೋಗದ ಅವಧಿಕಾಲವು ತೀರಿದೊಡನೆಯೇ ಎಲ್ಲರೂ ಸಮೀಪದಲ್ಲೇ ಇದ್ದ ಒಂದು ನಿರ್ಜನಸ್ಥಳಕ್ಕೆ ಹೋಗಿ, ಅಲ್ಲಿ ನಾಮಭಜನೆ, ಧ್ಯಾನ, ಪ್ರಾರ್ಥನೆಗಳಲ್ಲೂ ಭಗವತ್ಪರ ಸಂಭಾಷಣೆಯಲ್ಲೂ ಕಾಲಕಳೆಯು ವರು.

ಏಕಾಂತವಾಸ ಧ್ಯಾನಪ್ರಾರ್ಥನಾದಿಗಳೂ, ತತ್ತ್ವವಿಚಾರಚಿಂತನೆಯೂ ಹೆಚ್ಚುತ್ತಾ ಹೋದಂತೆಲ್ಲ, ನಾನಕನಿಗೆ, ಉದ್ಯೋಗದಲ್ಲಿದ್ದು-ಅದೇ ಜೀವನ

ಸರ್ವಸ್ವವೆಂದು ತೃಪ್ತಿಹೊಂದಿ ಸಂತೋಷದಿಂದ ಮನೆಯಲ್ಲಿರುವಂತಹ ಚಿತ್ತವೃತ್ತಿಯು ಲೋಪವಾಗತೊಡಗಿತು. ಮುಂದೆ ಒಂದುದಿನ ಆತನು ತನ್ನ ಉದ್ಯೋಗದಿಂದ ನಿವೃತ್ತಿಹೊಂದಿ, ತನ್ನ ಆವರೆಗಿನ ಸಂಪಾದನೆಯಿಂದ ಶೇಖರವಾಗಿದ್ದ ಸಮಸ್ತವನ್ನೂ ಬಡಜನಗಳಿಗೆ ದಾನಮಾಡಿ, ಫಕೀರನಾಗಿ ನಿಂತನು. ತರುವಾಯ ಆತನು, ಅನೇಕ ವೈರಾಗ್ಯಸಾಧನೆಗಳನ್ನು ನಡೆಸಿದನು. ದಿನವೂ ಬಹುಹೊತ್ತಿನವರೆಗೆ ಧ್ಯಾನಮಗ್ನನಾಗಿ ಮೌನದಿಂದ ಇದ್ದುಬಿಡುವನು. ಹೀಗೆ ಕೆಲವು ದಿನಗಳು ನಡೆದ ತರುವಾಯ, ಅನಿರ್ವಚನೀಯವಾದ ಒಂದುಬಗೆಯ ಸ್ಫೂರ್ತಿಯುಂಟಾದಂತಾಗಿ, ಆತನ ಬಾಯಿಂದ ಅನೇಕ ಅಮೌಲ್ಯ ವಾಕ್ಯರತ್ನಗಳು ಕವಿತಾರೂಪದಿಂದ ಹೊರಡಸಾಗಿದುವು. ಸರ್ವದಾ ಶಿಷ್ಯವೃತ್ತಿಯಿಂದ ಗುರುವಿನ ಸಮೀಪದಲ್ಲೇ ಇರುತ್ತಿದ್ದ ಮರ್ದನನು ಅವುಗಳನ್ನೆಲ್ಲ ಬರೆದಿಟ್ಟು, ಪ್ರತಿದಿನವೂ ಸಾಯಂಕಾಲ ಎಲ್ಲರೂ ನೆರೆದಿದ್ದಾಗ್ಗೆ, ಸಾರಂಗಿವಾದ್ಯವನ್ನು ಬಾರಿಸಿಕೊಳ್ಳುತ್ತಾ ಸುಸ್ವರದಿಂದ ಅವುಗಳನ್ನು ಹಾಡಿ ಸರ್ವರಿಗೂ ಮನರಂಜನೆಯನ್ನುಂಟುಮಾಡುವನು. ಹಾಗೆ ಸಂಗ್ರಹವಾದ ಗುರುನಾನಕನ ಸ್ಫೂರ್ತಿಯುಕ್ತ ಕವಿತೆಗಳೇ 'ಆದಿಗ್ರಂಥ'ವೆಂದು ಕರೆಯಲ್ಪಟ್ಟು ಸಿಕ್ ಮತೀಯರ ಭಕ್ತಿಗೌರವಗಳಿಗೆ ಪಾತ್ರವಾಗಿ ಅವರ ಸಮಸ್ತವಿಧ ಆಚರಣೆಗಳಿಗೂ ಮೂಲ ಆಧಾರಗ್ರಂಥವಾಗಿದೆ.

ತನ್ನ ಉಗ್ರಾಣದ ಅಧಿಕಾರಿಯೂ ಮಿತ್ರನೂ ಆದ ನಾನಕನು ಏಕಾಏಕಿ ಉದ್ಯೋಗನಿವೃತ್ತನಾದುದು, ಸರ್ವಾಧಿಕಾರಿಗೆ ಸ್ವಲ್ಪ ಮನೋವಿಕಲ್ಪವನ್ನುಂಟುಮಾಡಿತು. ಆತನನ್ನು ಕರೆಸಿ ಈ ಬಗೆಯ ವರ್ತನೆಗೆ ಕಾರಣವೇನೆಂದು ವಿಚಾರಿಸಿ ಸಮಾಧಾನ ಹೇಳಬೇಕೆಂದಿರುವಲ್ಲಿ ಆ ಊರಿನ ಖಾಜಿಯು ಸರ್ವಾಧಿಕಾರಿಯಬಳಿಗೆ ನಾನಕನಮೇಲೆ ಒಂದು ಫಿರ್ಯಾದನ್ನು ತಂದನು. ನಾನಕನು ಎಂದಿನಂತೆ ಹೇಳುತ್ತಿದ್ದ ಸ್ಫೂರ್ತಿಯುಕ್ತ ಕವಿತೆಗಳಲ್ಲಿ,–'ಇಂದು ಜಗತ್ತಿನಲ್ಲಿ ಹಿಂದುವೂ ಇಲ್ಲ–ಮಹಮ್ಮದೀಯನೂ ಇಲ್ಲ' ಎಂದು ಒಂದು ಬಾರಿಹೇಳಿದ್ದನು. ಇದನ್ನು ಕೇಳಿದ ಖಾಜಿಯು ಕೋಪೋದ್ರೇಕದಿಂದ, ನಾನಕನು ತಮ್ಮ ಮತವನ್ನು ಅಗೌರವಪಡಿಸಿದನೆಂದೂ ಅದಕ್ಕಾಗಿ ಅವನಿಗೆ ಶಿಕ್ಷೆಯನ್ನು ವಿಧಿಸಬೇಕೆಂದೂ ಕೇಳಿಕೊಂಡನು. ಅಧಿಕಾರಿಯು ನಾನಕನನ್ನು ಕರೆಸಿ, ಸಂಗತಿಯೇನೆಂದು ವಿಚಾರಿಸಲು, ಆತನು ಹಸನ್ಮುಖದಿಂದ–

—'ಮುಸಲ್ಮಾನನೆನ್ನಿಸಿಕೊಳ್ಳುವುದೇನು ಸುಲಭವಲ್ಲವಯ್ಯ - ಅಹಂಕಾರ ಮಮಕಾರಗಳ ತ್ಯಜಿಸಿ, ಜೀವನ-ಮರಣಗಳ ವಿಷಯದ ಮಮತೆಯು ತೊರೆದು, ಜಗತ್ಕರ್ತನ ಸಂಕಲ್ಪವೆಂದು ಸಮಸ್ತಕಾರ್ಯಗಳನ್ನೂ ಮಾಡುವವನಾರೋ-ಜಗಜ್ಜನಕನ ಮಕ್ಕಳಾದ ಎಲ್ಲರನ್ನೂ ದಯಾ ಮಮತೆಗಳಿಂದ ಪ್ರೀತಿಸುವನಾರೋ, ಅವನೇ ನಿಜವಾದ ಮುಸಲ್ಮಾನನು"

ಇನ್ನೂ ಕೇಳು—ಎಂದು ಗುರುನಾನಕನು ಅರ್ಧ ನಿಮೀಲಿತನೇತ್ರನಾಗಿ ಧ್ಯಾನಸಮಾಧಿಮಗ್ನನಾದಂತೆ ಅಂತರ್ಮುಖನಾಗಿ,

—'ಎಲವೋ ಫಕೀರಾ, ದಯೆಯು ನಿನ್ನ ಮಸೀದಿಯಾಗಿರಲಿ, ಶ್ರದ್ಧೆಯು ನಿನ್ನ ಜ್ಞಾನಪೀಠವಾದ ಜಮಖಾನೆಯಾಗಿರಲಿ, ನ್ಯಾಯ-ಸತ್ಯಾಚರಣೆಗಳೇ ನಿನ್ನ ಖುರಾನಗ್ರಂಥವಾಗಿರಲಿ, ನಯನೀತಿಗಳು ನಿನ್ನ ಯಾತ್ರೆಯಾಗಿರಲಿ, ಪರಕೀಯರಲ್ಲಿ ಗೌರವಯುಕ್ತವಾದ ನಡೆವಳಿಕೆಯು ನಿನ್ನ ಉಪವಾಸವ್ರತವಾಗಿರಲಿ, ಅವ್ಯಭಿಚಾರಜೀವನವು ನಿನ್ನ *ಕಾಬಾವಾಗಿರಲಿ, ಸತ್ಕಾರ್ಯಗಳು ನಿನ್ನ ಮತಧರ್ಮವೂ †ನಮಾಜೂ ಆಗಿರಲಿ. ಎಲೈ ಫಕೀರಾ, ದೇವರ ಸಂಕಲ್ಪವೆಂಬುದೇ ನಿನ್ನ ಜಪಮಣಿಯಾಗಿರಲಿ, ಇಂತು ನಡೆದೆಯಾದರೆ ನೀನು ನಿಜವಾದ ಮುಸಲ್ಮಾನನೆನಿಸಿಕೊಳ್ಳುವೆ!' (* ಮಕ್ಕಾದ ದೇವಾಲಯದಲ್ಲಿರುವ ಒಂದು ಕಂಭ. † ಮುಹಮ್ಮದೀಯ ದೈವಪ್ರಾರ್ಥನೆ-ಸಂಧ್ಯಾ.)

ಎಂದು ನುಡಿದನು. ನಾನಕನ ಈ ಮಾತುಗಳು ಸರ್ವಸಮ್ಮತವೆಂದು ತೋರಿದುವು. ಅಷ್ಟರಲ್ಲಿ ಮ. ಧ್ಯಾಹ್ನದ ನಮಾಜಿನ ವೇಳೆಯು ಪ್ರಾಪ್ತವಾದುದರಿಂದ ಸರ್ವಾಧಿಕಾರಿಯು ನಾನಕನೊಂದಿಗೆದ್ದು ಎಲ್ಲರೂ ಮಸೀದಿಗೆ ನಡೆದರು. ಅಲ್ಲಿ ಖಾಜಿಯು ನಮಾಜಿಗೆ ಪ್ರಾರಂಭಿಸಿದನು. ಒಡನೆ ನಾನಕನು ಅವನ ಮುಖವನ್ನು ನೋಡಿ ಹುಸಿನಗುವನ್ನು ನಕ್ಕನು. ನಮಾಜು ಮುಗಿದ ತರುವಾಯ, ಅಧಿಕಾರಿಯು, ಹಾಗೆ ಅಪಹಾಸ್ಯಮಾಡಿ ನಕ್ಕುದಕ್ಕೆ ಕಾರಣವೇನೆಂದು ಕೇಳಲು, ನಾನಕನು-'ನಿಮ್ಮ ಈ ಖಾಜಿಯು ಮಾಡಿದ ನಮಾಜು ಅಲ್ಲಾನಿಂದ ಗ್ರಹಿಸಲ್ಪಡಲಾರದು. ಇವನ ಮನೆಯಲ್ಲಿ ಹೊಸದಾಗಿ ಹುಟ್ಟಿದ ಒಂದು ಕುದುರೆಯ ಮರಿಯುಂಟು. ನಮಾಜಿಗೆ ಪ್ರಾರಂಭಿಸಿ

ದೊಡನೆಯೇ, ಈ ಖಾಜಿಯು ಆ ಕುದುರೆಮರಿಯು ಮನೆಯ ಹತ್ತಿರವಿರುವ ಬಾವಿಯಲ್ಲಿ ಬಿದ್ದೆಲ್ಲಿ ಸಾಯುವುದೋ ಎಂದು ಚಿಂತಿಸಿಕೊಂಡಿದ್ದನು' ಎಂದು ನುಡಿದು-ಸರ್ವಾಧಿಕಾರಿಯನ್ನು ಕುರಿತು-'ನೀನು ಮಾತ್ರವಿನ್ನೇನು ? ನಮಾಜಿಗೆ ಪ್ರಾರಂಭಿಸಿದಾಗಿನಿಂದಲೂ, ಕಾಬೂಲಿನಲ್ಲಿ ಕುದುರೆಗಳನ್ನು ಕೊಳ್ಳುವ ವಿಚಾರವನ್ನೇ ಚಿಂತಿಸುತ್ತಿದ್ದೆಯಲ್ಲ ! ಇಂತಹ ಪ್ರಾರ್ಥನೆಗೆಲ್ಲ ದೇವರು ಒಲಿಯುವನೆ ?' ಎಂದನು. ಸರ್ವಾಧಿಕಾರಿಯೂ ಖಾಜಿಯೂ ತಮ್ಮ ಮನೋಭಾವನೆಗಳು ನಿಜವೆಂದು ಒಪ್ಪಿಕೊಂಡರು. ಇದನ್ನು ಕೇಳಿ ಅಲ್ಲಿದ್ದ ಸರ್ವರೂ ನಾನಕನ ಮಹಿಮೆಗಾಗಿ ಅದ್ಭುತಪಟ್ಟುಹೋದರು. ಸರ್ವಾಧಿಕಾರಿಯು ಆತನನ್ನು ಬಹು ಗೌರವಭಾವದಿಂದ ಕಂಡು, ಅನೇಕ ಬಹುಮಾನಗಳನ್ನು ಮಾಡಿದನು. ಆದರೆ ನಾನಕನು ಯಾವುದನ್ನೂ ಸ್ವೀಕರಿಸಲಿಲ್ಲ. ಭಗವಂತನೇ ನಾನಕನ ಬಾಯಿಂದ ಮಾತನಾಡುತ್ತಿರುವನೆಂದು ಸರ್ವರೂ ಗ್ರಹಿಸಿದರು. ಮುಂದೆ ಕೆಲವು ದಿನಗಳಮೇಲೆ ಆತನು ಉದ್ಯೋಗವನ್ನು ಬಿಟ್ಟಾಗ್ಗೆ, ಉಗ್ರಾಣದ ಲೆಕ್ಕಪತ್ರಗಳಲ್ಲಿ ಸ್ವಲ್ಪ ಹೆಚ್ಚು ಕಡಮೆಗಳಿದ್ದುವೆಂಬ ತರಲೆಯೊಂದು ಸರ್ವಾಧಿಕಾರಿಯ ಬಳಿ ಬಂದಿತು. ಆದರೆ ಲೆಕ್ಕಗಳನ್ನು ತರಿಸಿನೋಡುವಲ್ಲಿ ಲೆಕ್ಕವು ಅತ್ಯಂತ ಸ್ಪಷ್ಟ ರೀತಿಯಲ್ಲಿದ್ದುದಲ್ಲದೆ, ರಾಜ್ಯಾಂಗದಿಂದ ನಾನಕನಿಗೇ ಸ್ವಲ್ಪ ದ್ರವ್ಯವು ಸೇರತಕ್ಕದ್ದಿರುವುದೆಂಬುದು ತೇಲಿತು. ಆದರೆ ನಾನಕನು ಅದನ್ನು ತೆಗೆದುಕೊಳ್ಳದೆ ಎಲ್ಲವನ್ನೂ ಬಡ ಜನಗಳಿಗೆ ದಾನಮಾಡತಕ್ಕುದೆಂದು ಹೇಳಿಬಿಟ್ಟನು.

ತರುವಾಯ, ನಾನಕನು ಆ ಊರಿನಿಂದ ಹೊರಟು ದೇಶಸಂಚಾರ ಮಾಡಿ, ತನಗೆ ವ್ಯಕ್ತವಾದ ಭಗವತ್ತತ್ವಗಳನ್ನು ಜನಸಮುದಾಯಕ್ಕೆ ತಿಳಿಸಬೇಕೆಂದು ತೀರ್ಮಾನಿಸಿದನು. ಆತನೊಂದಿಗೆ ಪ್ರಿಯಶಿಷ್ಯಮರ್ದನನೂ ಹೊರಟನು. ಅವರು ಪ್ರಾರಂಭಕ್ಕೆ ಈಗ ಅಮಿನಾಬಾದ್ ಎಂಬ ಹೆಸರಿನಿಂದ ಕರೆಯಲ್ಪಡುತ್ತಿರುವ ಸಯ್ಯದ್‌ಪುರ್ ಎಂಬ ಊರಿಗೆ ಹೋದರು. ಅಲ್ಲಿ ನಾನಕನು ಲಾಲೂ ಎಂಬೊಬ್ಬ ಬಡಗಿಯವನ ಮನೆಯಲ್ಲಿ ಇದ್ದು, ಅಲ್ಲೇ ಊಟಮಾಡಿ ತನ್ನ ಧ್ಯಾನಬೋಧನೆ ಮುಂತಾದುವುಗಳಲ್ಲಿ ಮಗ್ನನಾಗಿದ್ದನು. ಆ ಊರಿನ ಕೊತ್ವಾಲನಾಗಿದ್ದ ಮಾಲಿಕ್ ಭಾಗೋ ಎಂಬುವನು, ಅವರೆಗೇ ಗುರುವಿನ ಪ್ರಸಿದ್ಧಿಯನ್ನು ಕುರಿತು ಕೇಳಿದ್ದನಾದ್ದ

ರಿಂದ, ತನ್ನ ಮನೆಗೆ ಬಂದು ತನ್ನ ಆತಿಥ್ಯವನ್ನು ಸ್ವೀಕರಿಸಬೇಕೆಂದು ಹೇಳಿ ಕಳುಹಿಸಿದನು. ಗುರುವು ಅದಕ್ಕೆ ಇಷ್ಟಪಡದಿರಲು, ಆಹ್ವಾನವು ಬಲವಂತಕ್ಕಿಟ್ಟಿತು. ಕೊನೆಗೆ ನಾನಕನು ಅವನ ಮನೆಗೆ ಹೋಗಿ, ಲಾಲೂನ ಮನೆಯ ಒಂದು ರೊಟ್ಟಿಯನ್ನೂ, ಭಾಗೋನ ಮನೆಯ ಒಂದು ರೊಟ್ಟಿಯನ್ನೂ ತರಿಸಿಕೊಂಡು, ಒಂದೊಂದನ್ನೂ ಬೇರೆ ಬೇರೆ ಕೈಯ್ಯಲ್ಲಿಟ್ಟುಕೊಂಡು ಎರಡನ್ನೂ ಹಿಂಡಿದನು. ಒಡನೆ ಲಾಲೂನ ರೊಟ್ಟಿಯಿಂದ ಹಾಲೂ, ಭಾಗೋನ ರೊಟ್ಟಿಯಿಂದ ರಕ್ತವೂ ತೊಟ್ಟಿಡತೊಡಗಿತು! ಇದನ್ನು ಕಂಡು ಎಲ್ಲರೂ ಪರಮಾಶ್ಚರ್ಯಮಗ್ನರಾದರು. ಆಗ ಗುರುವು —"ನೋಡಿದಿರಾ, ಲಾಲೂನ ರೊಟ್ಟಿಯು ಕಷ್ಟಾರ್ಜಿತವಾದುದು. ಆದುದರಿಂದ ಪರಿಶುದ್ಧವಾದುದು. ಆತ್ಮಸಾಧಕವಾದುದು. ಭಾಗೋನ ರೊಟ್ಟಿಯು, ಪರಪೀಡನೆಯಿಂದಲೂ, ಅನ್ಯಾಯ ಅಸತ್ಯ ಮಾರ್ಗಗಳಿಂದಲೂ ಸಂಪಾದಿತವಾದುದು. ಆದುದರಿಂದ ಅದು ಅಶುದ್ಧವಾದುದು. ಆತ್ಮನಾಶಕವಾದುದು" ಎಂದು ನುಡಿದನು. ಈ ಪ್ರತ್ಯಕ್ಷ ಪ್ರಮಾಣವನ್ನು ಕಂಡು ಭಾಗೋವು ತನ್ನ ಜೀವನದ ಮಾರ್ಗವನ್ನು ಬದಲಿಸಿಕೊಂಡು ಮುಂದೆ ಸತ್ಯವಂತನಾದನು. ಇದಾದನಂತರ ನಾನಕನೂ ಮರ್ದನನೂ ಆ ಸ್ಥಳದಿಂದ ಹೊರಟು ಧರ್ಮಪ್ರಚಾರದಲ್ಲಿ ತೊಡಗಿ ಅನೇಕ ಸ್ಥಳಗಳಲ್ಲಿ ಸಂಚರಿಸಿದರು.



**ಅಧ್ಯಾಯ ೫** **"ತತ್ವಬೋಧೆ"**

ಸೂರ್ಯೋದಯಕ್ಕೆ ಪೂರ್ವದಲ್ಲೇ ಅರುಣೋದಯವಾಗುವಂತೆಯೂ, ಪುಷ್ಪಕ್ಕೆ ಮುಂಚೆಯೇ ಅದರ ಸುಗಂಧವು ಪ್ರಯಾಣಮಾಡುವಂತೆಯೂ ಮಹನೀಯರಾದ ಸಾಧುಸಜ್ಜನರ ಕೀರ್ತಿಯು ಅವರಿಗಿಂತಲೂ ಮುಂದಾಗಿಯೇ ಲೋಕದಲ್ಲಿ ಪ್ರಯಾಣಮಾಡುವುದು. ಗುರು ನಾನಕನು ಪಾಮರಜನೋದ್ಧಾರಕ್ಕಾಗಿ ದೇಶಸಂಚಾರಮಾಡುತ್ತಿದ್ದಾನೆಂಬ ವಾರ್ತೆಯು

ಒಡನೆ ಜನಜನಿತವಾಗಿ, ಎಲ್ಲ ಊರುಗಳವರೂ ಆತನ ದರ್ಶನಮಾಡಲೂ ಆತನನ್ನು ಕಂಡು ಗೌರವಿಸಲೂ ತವಕಿಸುತ್ತಿದ್ದರು. ಆತನು ಯಾವ ಊರಿಗೆ ಹೋದರೂ ಆ ಊರವರು ವಿಶೇಷ ಪ್ರೇಮದಿಂದ ಆತನನ್ನು ಎದುರುಗೊಂಡು ಗೌರವಿಸುತ್ತಿದ್ದರು. ಫಲಪುಷ್ಪಾದಿಗಳನ್ನೂ ಕಾಣಿಕೆಗಳನ್ನೂ ಸಮರ್ಪಿಸಿ ಆತನ ಅಮೃತಮಯ ಬೋಧನೆಗಳನ್ನು ಕೇಳಿ, ಚಿತ್ತಶಾಂತಿಯನ್ನು ಹೊಂದುವರು. ಗುರು ನಾನಕನೂ-ಆತನ ಶಿಷ್ಯನಾದ ಮರ್ದನನೂ ದೇಶಸಂಚಾರ ಮಾಡುತ್ತಿದ್ದಾಗ್ಗೆ, ನಡೆದ ಹಲವು ಆಶ್ಚರ್ಯಕರ ವಿಚಾರಗಳು ಕಥೆಗಳಾಗಿ ಹೇಳಲ್ಪಟ್ಟಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡುತ್ತೇವೆ.

ಸಯ್ಯದ್‌ಪುರದಿಂದ ಮುಂದೆ ಪ್ರಯಾಣಮಾಡಿ ಅವರು ಒಂದು ಗ್ರಾಮವನ್ನು ಹೊಕ್ಕರು. ಅಲ್ಲಿ ಷೇಕ್ ಸಜ್ಜನ್ ಎಂಬ ಸಾಹುಕಾರನು ಅವರನ್ನು ತನ್ನ ಮನೆಗೆ ಕರೆದು ಆದರಿಸಿದನು. ಆತನು ಹಿಂದೂಗಳಿಗೊಂದು ದೇವಸ್ಥಾನವನ್ನೂ, ತನ್ನ ಮತಸ್ಥರೇ ಆದ ಮುಹಮ್ಮದೀಯರಿಗೊಂದು ಮಸೀದಿಯನ್ನೂ ಕಟ್ಟಿಸಿ, ಲೇಶಮಾತ್ರವೂ ಪಕ್ಷಪಾತವಿಲ್ಲದೆ ಎರಡು ಮತಗಳವರನ್ನೂ ಸಮಾನವಾಗಿ ಗೌರವಿಸುತ್ತಿದ್ದನು. ಆದರೆ ಅವನ ಐಶ್ವರ್ಯ ಸಂಪಾದನೋಪಾಯವಾದರೋ ಬಹು ಭಯಂಕರವಾಗಿದ್ದಿತು. ಬಹು ಉದಾರಿಯೆಂದು ಪ್ರಖ್ಯಾತನಾದ ಅವನ ಮನೆಗೆ ಬಂದು, ಊಟಮಾಡಿ ಉಪಾಸತ್ಕಾರ ಮಾಡಿಕೊಂಡು, ರಾತ್ರಿ ಮಲಗಿ ನಿದ್ರಿಸುತ್ತಿದ್ದ ಪರಸ್ಥಳೀಕರನ್ನು, ಅವನು ತನ್ನ ಸೇವಕರಿಂದ, ತನ್ನ ಮನೆಯಲ್ಲೇ ಇದ್ದ ಅಗಾಧವಾದ ಒಂದು ಬಾವಿಯೊಳಕ್ಕೆ ಎತ್ತಿಹಾಕಿಸಿ, ಅವರ ಬಳಿಯಿದ್ದ ಹಣಕಾಸುಗಳನ್ನೆಲ್ಲ ಅಪಹರಿಸುತ್ತಿದ್ದನು. ಗುರುನಾನಕನ ದಿವ್ಯತೇಜಸ್ಸನ್ನು ಕಂಡೊಡನೆಯೋ, ಆತನನ್ನೂ-ಅನೇಕರಿಂದ ಕಾಣಿಕೆಗಳನ್ನು ಗ್ರಹಿಸುವ ಇತರಸಾಧುಗಳಂತೆಯೋ ಹಣಗಾರನೆಂದು ಭಾವಿಸಿ, ಷೇಕನು ತನ್ನ ಮನೆಗೆ ಆಹ್ವಾನಿಸಿದನು. ಆ ರಾತ್ರಿ ಮಲಗಿ ವಿಶ್ರಾಂತಿ ಹೊಂದಬಹುದೆಂದು ಅವರಿಗೆ ಒಂದು ಕೊಠಡಿಯನ್ನು ತೋರಿಸಿ, ತಾನು ಮಲಗಿಕೊಳ್ಳುವುದಕ್ಕಾಗಿ ಹೊರಡಲು ಅನುವಾದನು. ಆಗ ನಾನಕನು-'ಅಯ್ಯಾ ನಾನು ಮಲಗಿಕೊಳ್ಳುವ ಮುಂಚೆ ಮಾಡುವ ಭಗವತ್ಪ್ರಾರ್ಥನೆಯೊಂದುಂಟು. ಅದನ್ನು ಮಾಡಿ ಮಲಗುತ್ತೇನೆ. ನೀನೂ ಅದನ್ನು ಕೇಳು' ಎಂದು ನುಡಿದು,

'ಕಂಚು ನೋಟಕ್ಕೆ ಬಿಳುಪಾಗಿ ಥಳಥಳನೆ ಹೊಳೆವುದು. ಆದರೇನು ತಿಕ್ಕಿದರಲ್ಲವೆ ಅದರ ಸ್ವಾಭಾವಿಕ ಕಪ್ಪುಬಣ್ಣವು ಹೊರಬೀಳುವುದು. ಅದನ್ನು ನೂರುಬಾರಿ ತೊಳೆದರೇನು ! ಅದು ಬಿಳುಪಾಗಬಲ್ಲುದೆ !

ಹಾಗೆಯೇ ನಾನೂ-ಹೊರಕ್ಕೆ ಪರಮಪರಿಶುದ್ಧನಾಗಿ ಕಾಣುತ್ತಿದ್ದೇನೆ. ಒಳಹೊಕ್ಕರಲ್ಲವೆ, ನನ್ನ ಹೃದಯವು ಎಂತಹ ಅಂಧ ಕೂಪವಾಗಿದೆಯೆಂಬುದು ತಿಳಿವುದು.

ಹೊರಕ್ಕೆ ನೋಡಲು ಬೂರುಗದ ಮರವು ಘನವಾದ ವೃಕ್ಷ. ಅಂದವಾದ ನೋಟ. ದೊಡ್ಡ ದೊಡ್ಡ ಫಲಗಳೂ ಬಿಡುತ್ತವೆ. ಆದರೇನು ಹಣ್ಣು ಪಕ್ಷಿಗೆ ಆಹಾರವಾಗಲಾರದು. ಹತ್ತಿ ನೂಲಾಗಲಾರದು. ಮರವು ಕಟ್ಟಡಕ್ಕೆ ಉಪಯೋಗವಾಗಲಾರದು. ಬಾಹ್ಯದ ನೋಟಕ್ಕೆ ಮರುಳಾಗಿ ಪಕ್ಷಿಗಳೇನೋ ಬಳಿಗೆ ಬರುತ್ತವೆ. ಅದರಿಂದ ಕೇವಲ ನಿರಾಸೆಯೇ ಅಲ್ಲದೆ ಅವಕ್ಕೆ ಮತ್ತೇನು ದೊರೆತೀತು?'

ಈ ಪ್ರಸಂಗವನ್ನು ಕೇಳಿದೊಡನೆಯೇ ಆ ಷೇಕ್ ಸಜ್ಜನನ ಹೃದಯವು ತಳದಿಂದ ಕಲಕಿದಂತಾಯಿತು. ಸ್ವಹೃದಯಪರಿಶೋಧನೆಯಿಂದ ಬಹು ಪಶ್ಚಾತ್ತಾಪಯುಕ್ತನಾದ ಆತನು ಗುರುವಿನ ಆ ಬೋಧನೆಯು ತನ್ನ ದುಷ್ಕಾರ್ಯಗಳನ್ನು ಕುರಿತೇ ಹೇಳಲ್ಪಟ್ಟಿದೆಂದು ಗ್ರಹಿಸಿ, ಒಡನೆ ಎದ್ದು ಗುರುವಿಗೆ ಸಾಷ್ಟಾಂಗನಮಸ್ಕಾರಮಾಡಿ, ತನ್ನ ಸರ್ವಾಪರಾಧಗಳನ್ನೂ ಕ್ಷಮಿಸಿ ರಕ್ಷಿಸಬೇಕೆಂದು ಪ್ರಾರ್ಥಿಸಿದನು. ಆಗ ನಾನಕನು-'ಷೇಕ್ ಸಜ್ಜನ್, ದಯಾನಿಧಿಯಾದ ಭಗವಾನನ ಸನ್ನಿಧಿಯಲ್ಲಿ ಎರಡು ಕಾರ್ಯಗಳಿಂದಲ್ಲದೆ, ಕ್ಷಮಾಪಣೆಯು ದೊರೆಯಲಾರದು. ಜ್ಞಾತಾಜ್ಞಾತವಾಗಿ ಎಂದರೆ ತಿಳಿದೋ ಅಥವ ತಿಳಿಯದೆಯೋ ಮಾಡಿದ ಪಾಪಗಳ ವಿಷಯವಾಗಿ ಮನಃಪೂರ್ವಕವಾಗಿ ಪಡುವ ಪಶ್ಚಾತ್ತಾಪವೊಂದು. ಅಲ್ಲದೆ, ಮಾಡಿದ ದುಷ್ಕಾರ್ಯಗಳಿಗೆ ಪ್ರತಿಯಾಗಿ, ಮುಂದೆ ಅವುಗಳನ್ನು ತ್ಯಜಿಸಿ ಸತ್ಕಾರ್ಯಗಳನ್ನು ಕೈಕೊಳ್ಳುವುದೊಂದು' ಎಂದು ನುಡಿದು-ನೀನು ಈವರೆಗೆ ಮಾಡಿರಬಹುದಾದ ಪಾಪಕಾರ್ಯಗಳನ್ನೆಲ್ಲ ನಿರ್ವಂಚನೆಯಾಗಿ ಹೇಳೆಂದನು. ಗುರುವಿನ ಮಾತನ್ನು ಕೇಳಿದ ಅವನು, ತಾನು ಮಾಡಿದ ಅಸಂಖ್ಯ ನರಹತ್ಯಗಳು, ವಿಶ್ವಾಸಘಾತುಕತೆಗಳು, ಸುಳ್ಳು ಕಳ್ಳತನ ಮೋಸ ಮುಂತಾದ ಹಲವು

ದುರಿತಗಳು, ಹೀಗೆ ಎಲ್ಲವನ್ನೂ ಪಶ್ಚಾತ್ತಾಪಪೂರ್ವಕ ಆತ್ಮವಂಚನೆಯಿಲ್ಲದೆ ನಿವೇದಿಸಿದನು. ನಾನಕನು ಅದನ್ನೆಲ್ಲ ಕೇಳಿ-'ಹಾಗಾದರೆ, ಇಷ್ಟು ದುಷ್ಕಾರ್ಯಗಳನ್ನು ಮಾಡಿ ಗಳಿಸಿರುವ ಈ ದ್ರವ್ಯವನ್ನೆಲ್ಲ ಬಡಬಗ್ಗರಿಗೆ ದಾನಮಾಡಿ, ಮುಂದೆ ಸತ್ಕಾರ್ಯಗಳನ್ನು ಮಾಡುತ್ತಾ ಇರು' ಎಂದು ಆಜ್ಞಾಪಿಸಿದನು. ಆಗಲಾ ಸಾಹುಕಾರನು, ನಿಶ್ಶಂಕೆಯಿಂದ ಒಡನೆ ಗುರುವಿನ ಚರಣಗಳನ್ನು ತೊಳೆದು, ಆ ತೀರ್ಥವನ್ನು ಪ್ರಾಶನಮಾಡಿ ತನ್ನಾ ಅಸಂಖ್ಯಸಂಪತ್ತನ್ನೂ ಲೇಶವೂ ಲೋಭವಿಲ್ಲದೆ ದಾನಮಾಡಿ, ಕೃತಕೃತ್ಯನಾದೆನೆಂದುಕೊಂಡನು. ಸಿಕ್ಕರ ಪ್ರಥಮದೇವಾಲಯವು, ಈತನ ದ್ರವ್ಯದಿಂದಲೇ ಕಟ್ಟಲ್ಪಟ್ಟದೆಂದು ಹೇಳಿಕೆಯುಂಟು.

ಗುರುವು ಮುಂದೆ ಕುರುಕ್ಷೇತ್ರವನ್ನು ಸಂದರ್ಶಿಸಿ, ಅಲ್ಲಿ ಅನೇಕರನ್ನು ತನ್ನ ಬೋಧನೆಗಳಿಂದ ಒಲಿಸಿಕೊಂಡನು. ಅಲ್ಲಿಂದ ಮುಂದಕ್ಕೆ ಹೊರಡುವಾಗ-'ಎಲೈ ಸನ್ಮಿತ್ರರೆ ಭಗವಂತನ ಪವಿತ್ರನಾಮವನ್ನು ಮರೆಯದಿರಿ ಜಗತ್ಕರ್ತನಾದ ಆತನನ್ನು ಭಜಿಸುವುದರೊಂದಿಗೆ ಇನ್ನೂ ನಾಲ್ಕು ಸನ್ಮಾರ್ಗಗಳನ್ನು ಅನುಸರಿಸುವುದರಿಂದ ಮಾನವನು ಭವಬಂಧನದಿಂದ ಉತ್ತೀರ್ಣನಾಗಬಹುದು. ಅವುಗಳಲ್ಲಿ ಒಂದನೆಯದು ಸಜ್ಜನಸಹವಾಸ, ಎರಡನೆಯದು ಸತ್ಯಸಂಕಲ್ಪ, ಮೂರನೆಯದು ತೃಪ್ತಿ, ನಾಲ್ಕನೆಯದು ಇಂದ್ರಿಯನಿಗ್ರಹ. ಈ ನಾಲ್ಕು ಮಾರ್ಗಗಳಲ್ಲಿ ಯಾವುದೊಂದನ್ನಾದರೂ ಅನುಸರಿಸಿದ ಮನುಷ್ಯನು-ಅವನು ಗೃಹಸ್ಥನಾಗಿರಲಿ, ಯತಿಯಾಗಿರಲಿ-ದೇವರನ್ನು ಹೊಂದುವನು. ಇದಕ್ಕೆ ಸಂದೇಹವಿಲ್ಲ. ಇನ್ನು ಈ ನಾಲ್ಕನ್ನೂ ಅನುಷ್ಠಿಸುವ ಪುಣ್ಯಶಾಲಿಯ ವಿಚಾರವನ್ನು ಕುರಿತು ಹೇಳಬೇಕಾದ್ದೇನಿದೆ' ಎಂದು ನುಡಿದನು.

ಕುರುಕ್ಷೇತ್ರದಿಂದ ಹೊರಟ ಗುರುವು ಮರ್ದನನೊಂದಿಗೆ ಹರಿದ್ವಾರಕ್ಕೆ ಪ್ರಯಾಣಮಾಡಿದನು. ಹಿಂದೂಗಳಿಗೆ ಮಹಾಕ್ಷೇತ್ರಗಳಲ್ಲಿ ಒಂದೆನಿಸಿದ ಹರಿದ್ವಾರದಲ್ಲಿ ಸಹಸ್ರಾರುಮಂದಿ ಯಾತ್ರಿಕರು ನೆರೆದು, ಗಂಗೆಯಲ್ಲಿ ಸ್ನಾನಮಾಡಿ ಪಿತೃತರ್ಪಣಾದಿ ತಮ್ಮ ಕ್ರಿಯೆಗಳನ್ನು ಆಚರಿಸಿಕೊಳ್ಳುತ್ತಿದ್ದರು. ನಾನಕನಾದರೋ ಬಾಹ್ಯವೇಷ-ಬಾಹ್ಯಾಚಾರಗಳನ್ನಲ್ಲದೆ ಕೇವಲ ಅಂತರ್ಯಶುದ್ಧಿಯನ್ನು ಮಾತ್ರವೇ ಗಮನಿಸತಕ್ಕವನಾದುದರಿಂದ, ಅವ

ರಲ್ಲಿ ಬಹುಸಂಖ್ಯೆಯ ಜನರು, ಸುಮ್ಮನೆ ನೀರಲ್ಲಿ ಮುಳುಗಿ ನಾಮಗಳನ್ನು ಬರೆದುಕೊಂಡು ನಿಂತಿದ್ದರಲ್ಲದೆ, ಹೃದಯವು ಎಂದಿನಂತೆಯೇ ಸಕಲವಿಧ ಪಾಪಪಂಕದಿಂದಲೂ ಕಲುಷಿತವಾಗಿಯೇ ಇದೆಯೆಂಬುದನ್ನು ಕಂಡುಹಿಡಿದು, ಒಡನೆ ತಾನೂ ನದಿಯಲ್ಲಿಳಿದನು. ಅವರೆಲ್ಲರೂ ತಮ್ಮ ಪಿತೃಪಿತಾಮಹಾದಿಗಳ ಪ್ರೀತ್ಯರ್ಥವಾಗಿ ಪೂರ್ವದಿಕ್ಕಿಗೆ ಬೊಗಸೆಯಲ್ಲಿ ತುಂಬಿ ನೀರನ್ನೆರಚುತ್ತಿರಲು, ನಾನಕನು ಪಶ್ಚಿಮಕ್ಕೆ ತಿರುಗಿಕೊಂಡು ತನ್ನ ಬೊಗಸೆಯಲ್ಲಿ ನೀರು ತುಂಬಿಕೊಂಡು, ಆ ದಿಕ್ಕಿಗೆ ಎರಚತೊಡಗಿದನು. ಅದನ್ನು ಕಂಡ ಬ್ರಾಹ್ಮಣರು-'ಎಲೈ ಅದೇಕೆ ವೃಥಾ ಹಾಗೆ ನೀರೆರಚುತ್ತಿರುವೆ ?' ಎನ್ನಲು, ನಾನಕನು-'ನೀವೇಕೆ ಎರಚುತ್ತಿರುವಿರಿ ?' ಎಂದು ಪ್ರಶ್ನಿಸಿದನು. ಬ್ರಾಹ್ಮಣರು -'ನಾವು ಪರಲೋಕದಲ್ಲಿರುವ ನಮ್ಮ ಪಿತೃಗಳ ದಾಹಶಾಂತ್ಯರ್ಥವಾಗಿ ಈ ನೀರನ್ನು ಎರಚುತ್ತಿದ್ದೇವೆ' ಎಂದರು. ಆಗ ನಾನಕನು-'ನನ್ನ ಊರಿನಲ್ಲಿ ನನ್ನದೊಂದು ಹೊಲವಿದೆ. ನಾನು ಹೊರಟುಬರುವಾಗ್ಗೆ ಅದರಲ್ಲಿ ಪೈರಿಟ್ಟು ಬಂದಿದ್ದೆ. ಅದು ಈಗ ಮಳೆಯಿಲ್ಲದೆ ಒಣಗುತ್ತಿದೆ. ಅದಕ್ಕಾಗಿ ಹೀಗೆ ನೀರನ್ನೆರಚಿ ಅದಕ್ಕೆ ನೀರನ್ನು ಒದಗಿಸುತ್ತಿದ್ದೇನೆ !' ಎಂದು ನುಡಿದನು. -'ಅಲ್ಲೆಲೈ ಎಲ್ಲೋ ಇರುವ ನಿನ್ನ ಹೊಲಕ್ಕೆ ಇಲ್ಲಿಂದ ನೀರೆರಚುತ್ತಿದ್ದರೆ ಹೋಗಿ ಸೇರೀತೆ ? ನೀನೆಲ್ಲೋ ಹುಚ್ಚನಾಗಿರಬೇಕು' ಎಂದು ಅವರು ಅಪಹಾಸ್ಯಮಾಡಿ ನಕ್ಕರು. ಆಗ ನಾನಕನು-'ಹಾಗಲ್ಲ. ನಿಮ್ಮ ಪಿತೃಗಳು ಎಷ್ಟು ದೂರದಲ್ಲಿದ್ದಾರೆ ?' ಎಂದು ಪ್ರಶ್ನಿಸಲು—'ಅವರು ಕೋಟ್ಯಾಂತರ ಮೈಲುಗಳ ದೂರ ಪಿತೃಲೋಕದಲ್ಲಿ ವಾಸಿಸುತ್ತಿದ್ದಾರೆ' ಎಂದು ಪ್ರತ್ಯುತ್ತರ ಕೊಟ್ಟರು. -'ನೀವು ಪಿತೃಗಳಿಗೆಂದು ಕೊಡುವ ನೀರು ಕೋಟ್ಯಾಂತರ ಮೈಲುಗಳ ದೂರವಿರುವ ಅವರಿಗೆ ಸೇರಿ ಅವರ ದಾಹಶಾಂತಿ ಮಾಡಬಹುದಾದರೆ, ನಾನು ಕೊಡುವ ನೀರು-ಇಲ್ಲೇ ಇನ್ನೂರು ಮೈಲುಗಳ ದೂರವಿರುವ ನನ್ನ ಹೊಲಕ್ಕೇತಕ್ಕೆ ತಲುಪಿ ಅಲ್ಲಿ ತಂಪನ್ನುಂಟುಮಾಡಬಾರದು ? ನೀವು ಮರುಳರೋ-ನಾನು ಮರುಳನೋ ಯೋಚಿಸಿರಿ !' ಎಂದನು. ಆತನ ಯುಕ್ತಿಯುಕ್ತ ವಿಚಾರವನ್ನು ಕೇಳಿ, ಯಾರೂ ಪ್ರತ್ಯುತ್ತರಕೊಡಲಾರದೆ ಹೋದರು. ಅಲ್ಲದೆ, ನಾನಕನು, ಭಕ್ತಿಶೂನ್ಯರೂ, ಚಾಂಚಲ್ಯಮನಸ್ಕರೂ, ಆತ್ಮವಂಚಕರೂ ಆಗಿ ಅವರು ಮಾಡುತ್ತಿದ್ದ ಜಪಹೋಮಧ್ಯಾನಾದಿಗಳಿಂದ

ಲ್ಲೂ, ಲೋಭತನವನ್ನು ಬಿಡದೆ ಪರವಂಚನೆಯಿಂದ ಗಳಿಸಿದ ದ್ರವ್ಯವನ್ನು ದಾನಮಾಡುವುದರಿಂದಲೂ ಏನೂ ಪ್ರಯೋಜನವಿಲ್ಲವೆಂದು ನುಡಿದು—'ಎಲೈ ಆತ್ಮವಂಚನೆಯನ್ನು ನಾಶಮಾಡಿ ನಿಷ್ಕಲ್ಮಷಹೃದಯದಿಂದ, ಜಗಜ್ಜನಕನಾದ ಅದ್ವಿತೀಯನಾದ ಭಗವಾನನೊಬ್ಬನೇ ಸರ್ವೋತ್ತಮ ದೈವವೆಂದು ನಂಬಿ ಸ್ತೋತ್ರಮಾಡಿರಿ. ಸಹಜೀವಿಗಳನ್ನು ಪ್ರೀತಿಯಿಂದ ನೋಡಿಕೊಳ್ಳಿ. ಪರೋಪಕಾರಿಗಳಾಗಿರಿ. ಸತ್ಸಹವಾಸಮಾಡಿರಿ. ಸತ್ಯಮಾರ್ಗವನ್ನು ಮೀರಿ ನಡೆಯಬೇಡಿ" ಎಂದು ಮುಂತಾಗಿ ಬೋಧಿಸಿ, ಅಲ್ಲಿಂದ ಮುಂದೆ ಪಾಣಿಪಟ್ ಎಂಬ ಸ್ಥಳಕ್ಕೆ ಪ್ರಯಾಣಮಾಡಿದನು. ಆ ಊರಿದಲ್ಲಿ ಪ್ರಸಿದ್ಧನೆನಿಸಿಕೊಂಡಿದ್ದ ಷೇಕ್ ಷರಾಫ್‌ನೆಂಬೊಬ್ಬ ಖಾಜಿಯು ನಾನಕನನ್ನು ಕಂಡು,–'ಗುರುವೆನಿಸಿಕೊಂಡು ತಿರುಗುತ್ತಿರುವ ನೀನು - ತಲೆಯನ್ನು ಬೋಳಿಸಿಕೊಳ್ಳದೆ ಕಾವಿ ಬಟ್ಟೆಗಳನ್ನು ಧರಿಸಿಕೊಳ್ಳದೆ - ಜಪಮಾಲೆಗಳನ್ನಿಟ್ಟುಕೊಂಡು ಎಣಿಸಿಕೊಳ್ಳದೆ ಇದ್ದರೆ, ನೀನೇತರ ಗುರುವೆನ್ನಬೇಕು!" ಎಂದನು.

ಆಗ ನಾನಕ ಸಾಧುವು:—

"ಎಲೈ ಮನವ ಬೋಳಿಸಿಕೊಳ್ಳದೆ ತಲೆಯ ಮಾತ್ರ ಬೋಳಿಸಿಕೊಂಡರೆ
ಫಲವೇನು ? ಮನವ ಬೋಳಿಸಿಕೊಂಡಲ್ಲದೆ - (ಅಹಂಕಾರ ಮಮಕಾರಗಳ ತ್ಯಜಿಸಿದಲ್ಲದೆ) ಬರಿಯ ಶಿರೋಮುಂಡನದಿಂದ ಮಾತ್ರ ಬಂದ ಲಾಭವೇನೈ ?

ನಿನ್ನ ತಲೆಯ ಕತ್ತರಿಸಿ ಗುರುವಿನೆದುರಿಗಿಡು - ಆಗ ನೀನು ಗುರುವಿನ ಜ್ಞಾನ
ದಿಂದ ರಕ್ಷಿಸಲ್ಪಡುವೆ!

"ನಾನು ನನ್ನದೆಂಬ ಅಹಂಕಾರವ ತ್ಯಜಿಸಿ, ನಮ್ರತೆಯಿಂದ ನೀನೂ ಸಾಧು
ಗಳ ಚರಣರೇಣುವಾದಂದಿಗೆ ಕೂದಲನ್ನು ಬೆಳೆಸಿದ್ದರೇನು ? ಮುಂಡನ ಮಾಡಿಸಿಕೊಂಡಂತೆಯೇ ಆಗುವುದು. ಗೆಳೆಯ, ನಾನಕನಾದರೆ ಕಾಮಕ್ರೋಧ ಲೋಭಮೋಹಾದಿಗಳನ್ನು ತ್ಯಜಿಸಿ - ಮದಮತ್ಸರಾದಿಗಳನ್ನು ಮರ್ದಿಸಿ, ಗುರುವಿನ ಚರಣ ಕಮಲಗಳನ್ನೇ ನಂಬಿದ್ದಾನೆ. ಇನ್ನು ಶಿರೋಮುಂಡನದಿಂದೇನು?" ಎಂದು ಪ್ರತ್ಯುತ್ತರವಿತ್ತನು.

ತರುವಾಯ ಮುಂದಕ್ಕೆ ಡಿಲ್ಲಿಗೆ ಪ್ರಯಾಣಮಾಡಿ, ಅಲ್ಲಿ ತುರುಷ್ಕ ದೊರೆಯಾಗಿದ್ದ ಇಬ್ರಾಹಿಂ ಲೋಡಿಯ ಪಟ್ಟದಾನೆಯು ಮೃತವಾಗಿರಲು

ಅದನ್ನು ಬದುಕಿಸಿ, ತಾನು ನಂಬಿದ್ದ ದೇವಾದಿ ದೇವನ ಮಹಿಮೆಯನ್ನು ಪ್ರಕಟಿಸಿದನು. ನಂತರ ಬೃಂದಾವನವನ್ನು ಸೇರಿ, ಅಲ್ಲಿ ಕೃಷ್ಣಲೀಲೆ ಎಂಬ ಹೆಸರಿನಿಂದ ಸ್ವಾರ್ಥಿಗಳು ನಡೆಸುತ್ತಿದ್ದ ಹಲವು ಲಜ್ಜಾಕರ ಕಾರ್ಯಗಳನ್ನು ನಿಂದಿಸಿ - ನಿಶ್ಚಯವಾದ ಭಗವತ್ಪೂಜಾ ಮಾರ್ಗವನ್ನು ಬೋಧಿಸಿ ಮುಂದೆ ಪ್ರಯಾಣಮಾಡಿ ಶ್ರೀ ಕಾಶೀ ನಗರವನ್ನು ಸೇರಿದನು. ಅಲ್ಲಿ, ಏಕದೇವತಾರಾಧನೆಯನ್ನೂ, ನೀತಿಯುಕ್ತ ಜೀವಿತದ ಆವಶ್ಯಕತೆಯನ್ನೂ ಬೋಧಿಸುತ್ತಿದ್ದ ಆತನಿಗೂ ಹಲವುಮಂದಿ ಬ್ರಾಹ್ಮಣ ಪಂಡಿತರಿಗೂ ವಾಗ್ವಾದ ನಡೆಯಿತು. ಚತುರದಾಸನೆಂಬೊಬ್ಬ ಪಂಡಿತನು. ನಾನಕನ ಯುಕ್ತಿಯುಕ್ತ ಭಾಷಣಕ್ಕೆ ತಲೆದೂಗಿ, ಆಚರಣೆಗೆ ಬಾರದ ಕೇವಲ ಶಾಸ್ತ್ರವಚನಗಳ ಗಿಳಿ ಪಾಠದಿಂದ ಪ್ರಯೋಜನವಿಲ್ಲವೆಂಬುದನ್ನು ಮನಗಂಡು ಆತನ ಶಿಷ್ಯವೃತ್ತಿಯನ್ನು ಅವಲಂಬಿಸಿದನು. ಮುಂದೆ ನಾನಕನು ಪ್ರಯಾಗ ಪುರಿ ಮುಂತಾದ ಕ್ಷೇತ್ರಗಳಲ್ಲಿ ಸಂಚರಿಸಿ ಹಾಗೆಯೇ, ದಕ್ಷಿಣಕ್ಕೆ ಸಿಂಹಳ ದ್ವೀಪದವರೆಗೂ ಪ್ರಯಾಣಮಾಡಿ, ಅಲ್ಲೆಲ್ಲಾ ತನ್ನ ಬೋಧನೆಗಳಿಂದ ಜನಮನದಲ್ಲಿ ಸತ್ಯಪಥದ ಬೀಜಗಳನ್ನು ಬಿತ್ತುತ್ತಾ, ಹಿಂದಿರುಗಿ ಸ್ವದೇಶಾಭಿಮುಖವಾಗಿ ಪ್ರಯಾಣಮಾಡಿದನು. ಹೀಗೆ ನಾನಕನು ತಾನು ಹೊರಟ ಹನ್ನೆರಡು ವರ್ಷಗಳ ತರುವಾಯ ಸ್ವಸ್ಥಳಕ್ಕೆ ಬಂದು ಸೇರಿದನು.

ನಾನಕನ ತಾಯಿ ತೃಪ್ತಾದೇವಿಯು, ಬಹುಕಾಲಗಳಿಂದ ಕಾಣದಿದ್ದ ತನ್ನ ಪ್ರಿಯಪುತ್ರನನ್ನು ಕಂಡು ಪರಮಸಂತೋಷಪಟ್ಟು—'ಮಗನೇ ಇನ್ನು ಮುಂದಾದರೂ ನಿನ್ನೀ ದೇಶಾಟನೆಯನ್ನು ಸಾಕುಮಾಡಿ ಊರಲ್ಲಿ ನಿಲ್ಲು, ಎಂದು ಮುಂತಾಗಿ ಬಹು ಬಗೆಯಿಂದ ಪ್ರಾರ್ಥಿಸಿಕೊಂಡಳು. ಅನೇಕ ನವೀನ ವಸ್ತ್ರಭೂಷಣಗಳನ್ನೂ ರುಚಿಕರ ಪದಾರ್ಥಗಳನ್ನೂ ಒದಗಿಸಿ ಆತನನ್ನು ಆಕರ್ಷಿಸಿ ಮನೆಯಲ್ಲಿರುವಂತೆ ಮಾಡಬೇಕೆಂದು ಪ್ರಯತ್ನಿಸಿದಳು. ಕಾಳುವು ತಾನು ಹೊಸದಾಗಿ ಕಟ್ಟಿಸಿದ್ದ ಮನೆಯನ್ನು ತನ್ನ ಮಗನಿಗೆ ತೋರಿಸಿ, - ಮಗೂ ನಾನಕ್, ನಾವು ವೃದ್ಧರಾದೆವು. ಇದೋ ನಿನಗಾಗಿ ಕಟ್ಟಿಸಿದ ಮನೆಯಿದು. ಇದರಲ್ಲಿ ನಿನ್ನ ಹೆಂಡತಿಮಕ್ಕಳೊಂದಿಗೆ ಸುಖವಾಗಿ ವಾಸಮಾಡಿಕೊಂಡಿರು. ಈ ಹೆಂಡತಿಯು ನಿನ್ನ ಮನಸ್ಸಿಗೆ ಸರಿ ತೋರದಿದ್ದರೆ, ಪ್ರಾಯಸಮರ್ಥಳೂ ಸುಂದರಿಯೂ ಆದ ಮತ್ತೊಬ್ಬಳನ್ನು

ತಂದು ಮದುವೆಮಾಡುತ್ತೇನೆ" ಎಂದು ಮುಂತಾಗಿ ಹೇಳಿ ಆ ಉಪಾಯ ಗಳಿಂದ ಆತನ ಮನಸ್ಸನ್ನು ಆಕರ್ಷಿಸಬಹುದೆಂದು ಪ್ರಯತ್ನಿಸಿದನು. ಆದರೆ ನಾನಕನು, ತನ್ನಾ ಮಾತಾಪಿತೃಗಳ ಸಂಕೋಚ ದೃಷ್ಟಿಪಥವನ್ನು ಕುರಿತು ವಿಚಾರಪಟ್ಟು, ತನ್ನ ಮನಸ್ಸು ಪ್ರಾಪಂಚಿಕವಾದ ಯಾವುದರಿಂದಲೂ ಆಕರ್ಷಿಸಲ್ಪಡದಂತೆ ಕರುಣಿಸೆಂದು ಲೋಕಪಿತನನ್ನು ಪ್ರಾರ್ಥಿಸಿಕೊಂಡನು.

ಇದಾದಮೇಲೆ ನಾನಕನು, ಹಿಂದೂಸ್ಥಾನದ ಇತರ ಅನೇಕ ಸ್ಥಳಗಳ ನ್ನು ಸಂದರ್ಶಿಸಿ, ಅಲ್ಲೆಲ್ಲಾ ಜನಗಳಿಗೆ ಬೋಧಿಸಿ ಹಲವರನ್ನು ತನ್ನ ಅಭಿಪ್ರಾ ಯಕ್ಕೆ ಒಲಿಸಿಕೊಂಡನು. ತರುವಾಯ ಆತನಿಗೆ ಮಹಮ್ಮದೀಯರಿಗೆ ಮಹಾ ಪುಣ್ಯಸ್ಥಳವೆನಿಸಿದ ಮಕ್ಕಾಕ್ಕೂ ಪ್ರಯಾಣಮಾಡಬೇಕೆನ್ನಿಸಿತು. ಒಡನೆ ಗುರುವೂ, ಪ್ರಿಯಶಿಷ್ಯ ಮರ್ದನನೂ ಹೊರಟರು. ಅವರು ಅಸಹ್ಯ ಬಿಸಿಲಿನ ತಾಪದ ಆ ದೇಶದ ಮರಳು ಕಾಡಿನಲ್ಲಿ ನಡೆದು ಹೋಗುತ್ತಿದ್ದಾಗ, ಅವರ ತಲೆಯಮೇಲೆ ನೇರವಾಗಿ ನೆರಳುಬೀಳುವಂತೆ ಮೇಘಖಂಡವೊಂದು ಅವ ರನ್ನು ಅನುಸರಿಸಿಕೊಂಡೇ ಪ್ರಯಾಣಮಾಡುತ್ತಿದ್ದುದನ್ನು ಕಂಡು ಅನೇ ಕರು ಪರಮಾಶ್ಚರ್ಯಪಟ್ಟರಂತೆ ! ಹೀಗೆ ಬಹುದಿನಗಳು ಪ್ರಯಾಣಮಾಡಿ, ಮಕ್ಕಾ ನಗರವನ್ನು ಸೇರಿದ ತರುವಾಯ, ಗುರುವು ಮಹಮ್ಮದೀಯರಿಗೆ ಪರಮಪವಿತ್ರವೆನ್ನಿಸಿದ ದೊಡ್ಡ ಮಸೀದಿಯನ್ನು ಸೇರಿ, ಬಹು ಆಯಾಸವಾ ಗಿದ್ದುದರಿಂದ ನೀಳವಾಗಿ ಕಾಲು ಚಾಚಿಕೊಂಡು, ಅಲ್ಲಿ ಮಲಗಿಬಿಟ್ಟನು. ಆತನ ಕಾಲುಗಳು, ಮಹಮ್ಮದೀಯರಿಗೆ ಪೂಜ್ಯವೆನ್ನಿಸಿದ ಅಲ್ಲಿದ್ದ 'ಕಾಬಾ' ಎಂಬೊಂದು ಕರಿಯಕಲ್ಲಿನ ಕಡೆಗೆ ಆಗಿದ್ದುದು ಆತನ ಗಮನಕ್ಕೇ ಬರಲಿಲ್ಲ. ಸ್ವಲ್ಪಹೊತ್ತಾದಮೇಲೆ ಆ ದೇವಸ್ಥಾನದ ಧರ್ಮಾಧಿಕಾರಿಯು ಬಂದು —'ಇವನಾವನು ನೀಚನು, ದೇವರಕಡೆಗೆ ಕಾಲುಮಾಡಿ ಮಲಗಿದ್ದಾನೆ' ಎಂದು ನಾನಕನನ್ನು ಒದೆದು ಎಳೆಂದು ಗರ್ಜಿಸಿದನು. ಆದರೆ ನಾನಕನು ಮೇಲ ಕ್ಕೇಳದೆಯೇ ಆತನನ್ನು ಕುರಿತು—'ಅಪ್ಪಾ, ವೃದ್ಧನಾದ ನಾನು ಮಾರ್ಗಾ ಯಾಸದಿಂದ ಬಹು ಬಳಲಿದ್ದೇನೆ. ಆ ಕಾಲುಗಳನ್ನು ಈಚೆ ಎಳೆದುಕೊಳ್ಳಲೂ ನನ್ನಲ್ಲಿ ಶಕ್ತಿ ಉಳಿದಿಲ್ಲ. ದಯಮಾಡಿ ನೀನೇ ಅವುಗಳನ್ನು ಎಳೆದು, ದೇವರು ಎಲ್ಲಿ ಇಲ್ಲವೋ: ಅಲ್ಲಿ ಇಟ್ಟುಬಿಡಪ್ಪ' ಎಂದನು. ಆ ಮಾತನ್ನು ಕೇಳಿದೊಡ ನೆಯೇ ಮಹಾರೋಷದಿಂದ ಆ ಧರ್ಮಾಧಿಕಾರಿಯು, ನಾನಕನ ಕಾಲು

ಹಿಡಿದು, ಕಾಬಾಕ್ಕೆ ಅಭಿಮುಖವಾಗಿದ್ದ ಗೋಡೆಯ ಕಡೆಗೆ ಎಳೆದನು! ಆದರೇನು ? ನಾನಕನ ಕಾಲು ಯಾವ ದಿಕ್ಕಿಗೆ ಎಳೆಯಲ್ಪಟ್ಟಿತೋ ಕಾಬಾವೂ ಆ ದಿಕ್ಕಿಗೇ ಸುತ್ತಿಬಂದಂತೆ ಕಾಣಿಸಿತು. ಅದನ್ನು ಕಂಡು ಅವನು ಬೇರೊಂದೆಡೆಗೆ ಎಳೆದನು. ಕಾಬಾವು ಆ ಕಡೆಗೂ ತಿರುಗಿಬಂದಂತೆ ಕಾಣಿಸಿತು. ಒಡನೆ ಆ ಧರ್ಮಾಧಿಕಾರಿಯು, ಈತನು ಮಹಾತ್ಮನೆಂದರಿತು, ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಕೇಳಿಕೊಂಡನು. ತರುವಾಯ ನಾನಕನು ಅಲ್ಲಿ ನೆರೆದಿದ್ದ ಮುಹಮ್ಮದೀಯ ಮತಾನುಯಾಯಿಗಳನ್ನು ಕುರಿತು, ನಮಾಜೆಂದರೇನು, ಉಪವಾಸವೆಂದರೇನು, ಮತಧರ್ಮವನ್ನು ನಿಷ್ಠೆಯರೀತಿಯಲ್ಲಿ ಹೇಗೆ ಸಾಧಿಸಬಹುದು, ಮಹಮ್ಮದ್ ಪೈಗಂಬರನ ಬೋಧನೆಗಳ ಆಂತರ್ಯರಹಸ್ಯವೇನು ಎಂಬ ಮುಂತಾದ ಅನೇಕ ವಿಚಾರಗಳನ್ನು ಬೋಧಿಸಿದನು. ಎಲ್ಲರೂ ಆತನನ್ನು ವಿಶೇಷ ಗೌರವಭಾವದಿಂದ ಕಂಡು ಪ್ರೀತಿ ವಿಶ್ವಾಸಗಳಿಂದ ನೋಡಿಕೊಂಡರು. ನಾನಕನು ಹೀಗೆ ಮುಹಮ್ಮದೀಯ ಮತದ ಜನ್ಮಸ್ಥಾನದಲ್ಲೇ ತನ್ನ ಅಮೌಲ್ಯ ತತ್ವಬೋಧನೆಯಿಂದ ಸಕಲರ ಗೌರವಾದರಗಳಿಗೂ ಪಾತ್ರನಾಗಿ, ತನ್ನ ಶಿಷ್ಯನೊಂದಿಗೆ ಹಿಂದಿರುಗಿ, ಸ್ವದೇಶಾಭಿಮುಖವಾಗಿ ಪ್ರಯಾಣಮಾಡಿದನು.



## ಅಧ್ಯಾಯ ೬ "ಪುಷ್ಪರಾಸಿ"

ನಾನಕನು ತನ್ನ ಶಿಷ್ಯನೊಂದಿಗೆ ಮಕ್ಕಾದಿಂದ ಹೊರಟು, ವಿವಿಧ ಪ್ರಾಂತಗಳಲ್ಲಿ ಸಂಚರಿಸಿಕೊಂಡು, ಪುನಃ ಸೈಯದ್‌ಪುರವನ್ನು ಬಂದುಸೇರಿದನು. ಆ ವೇಳೆಗೆ ಬಾಬರನು ಭಯಂಕರ ಅಪ್ಘಾನ ಸೈನ್ಯದೊಂದಿಗೆ ಹಿಂದೂದೇಶದಮೇಲೆ ದಂಡೆತ್ತಿ ಬರುತ್ತಿದ್ದಾನೆಂಬ ವಾರ್ತೆಯು ಆ ಪ್ರಾಂತದಲ್ಲಿ ವ್ಯಾಪಿಸಿತು. ಗುರುವು ಆ ವೃತ್ತಾಂತವನ್ನು ಮುಂಚಿತವಾಗಿ ತಿಳಿದಿದ್ದುದರಿಂದಲೂ, ಭಗವದಿಚ್ಛಾನುಸಾರ ಪ್ರಾಪ್ತವಾಗುವ ಸಂಕಟಗಳೆಲ್ಲಕ್ಕೂ ತಲೆಗೊಡಬೇಕಾದುದು ತಪ್ಪದೆಂಬ ತತ್ವವು ಪ್ರಾಜ್ಞನಾದ ಆತನಿಗೆ

ಹೃದ್ಗತವಾಗಿದ್ದುದರಿಂದಲೂ ಆ ವೃತ್ತಾಂತವನ್ನು ಕೇಳಿ ಕಾತರನಾಗಲಿಲ್ಲ. ಆದರೆ ಮರ್ದನನು, ಮೊಗಲ್ ಸೈನ್ಯದ ಭೀಕರ ಕೃತ್ಯಗಳ ಕಥೆಗಳನ್ನು ಕೇಳಿದ್ದನಾದುದರಿಂದ ಮುಂದೇನುಗತಿಯೆಂದು ತನ್ನ ಗುರುವಿನ ಬಳಿ ಬಂದು ಹಂಬಲಿಸತೊಡಗಿದನು. ನಾನಕನು ಬೆದರಬೇಡವೆಂದೂ ಸರ್ವೇಶ್ವರನ ದಯೆಯಿಂದ ಎಲ್ಲವೂ ಸುರಕ್ಷಿತವಾಗಿ ಸಾಗುವುದೆಂದೂ ಸಮಾಧಾನಗೊಳಿಸಿದ್ದನು. ತರುವಾಯ ಕೆಲವು ದಿನಗಳಮೇಲೆ, ಬಾಬರನು ಡೆಲ್ಲಿಯಲ್ಲಿ ಪ್ರಭುವಾಗಿದ್ದ ಇಬ್ರಾಹಿಂ ಲೋಡಿಯನ್ನು ಸೋಲಿಸಿ, ಈ ದೇಶೀಯರನೇಕರನ್ನು ಸೆರೆಹಿಡಿದು ಬಂಧನದಲ್ಲಿಡಿಸಿದನು. ಸೆರೆಬಿದ್ದವರಲ್ಲಿ ನಾನಕನೂ ಮರ್ದನನೂ ಸೇರಿದ್ದರು. ಈ ಸೆರೆಯಾಳುಗಳೆಲ್ಲರೂ ಮಿರ್ ಖಾನ್ ಎಂಬವನ ವಶದಲ್ಲಿದ್ದು ರಾಗಿ ಬೀಸುವುದು ಕಲ್ಲೊಡೆಯುವುದು ನೀರು ಸೇದುವುದು ಮುಂತಾದ ಕಠಿಣಕಾರ್ಯಗಳನ್ನು ಮಾಡಬೇಕಾಗಿದ್ದಿತು. ನಾನಕನೂ ಮರ್ದನನೂ ಇಂತಹ ಕೆಲಸಗಳನ್ನು ಮಾಡುತ್ತಾ ಕಷ್ಟಪಡುತ್ತಿದ್ದಾಗಲೇ, ರಾಜಾಜ್ಞೆಯಿಂದ ಹಲವುಮಂದಿ ಸ್ತ್ರೀಯರನ್ನು, ಸೈನಿಕರು ಬಂಧಿಸಿ ಎಳೆದುಕೊಂಡುಹೋಗುತ್ತಿದ್ದುದನ್ನು ಒಂದು ದಿನ ನೋಡಿದರು. ಅವರ ಚೀತ್ಕಾರವನ್ನು ಕೇಳಿ, ಸಂತಾಪಗೊಂಡ ಮರ್ದನನು ಗುರುವನ್ನು ಕುರಿತು, ಸುಕುಮಾರಿಯರೂ ಸುಖಜೀವಿಗಳೂ ಆದ ಆ ಸ್ತ್ರೀಯರಿಗೆ ಪ್ರಾಪ್ತವಾದ ದುರ್ಗತಿಯ ವೃತ್ತಾಂತವನ್ನು ಕುರಿತು ಹೇಳಲು, ಗುರುವು—

'ಒಂದು ಕಾಲದಲ್ಲಿ ಯಾರ ಕೇಶರಾಶಿಯು ಬಗೆಬಗೆಯ ಸುವಾಸನಾತೈಲವು
ಬಳಿಯಲ್ಪಟ್ಟು ರಕ್ಷಿತವಾಗಿದ್ದಿತೋ, ಅದು ಇಂದು ಕತ್ತರಿಯಿಂದ
ಕತ್ತರಿಸಲ್ಪಡುತ್ತಿದೆ. ತಲೆಯಮೇಲೆ ಮಣ್ಣು ಸುರಿಯಲ್ಪಡುತ್ತಿದೆ.
ಯಾರು ಸೂರ್ಯನೂ ದರ್ಶಿಸಲಾಗದಂತಹ ಮಹಲುಗಳಲ್ಲಿ ವಾಸಿಸಿ ಹಂಸ-
ತೂಲಿಕಾತಲ್ಪದಲ್ಲಿ ಮಲಗಿ ಒಂದಾನೊಂದು ಕಾಲದಲ್ಲಿ ಅತಿಶಯ
ಭೋಗಪಟ್ಟರೋ ಅವರಿಗೆ ಇಂದು ಬಹಿರಂಗಸ್ಥಳದಲ್ಲಿ ಕೂಡಲಿಕ್ಕೆ
ಒಂದು ಪೀಠ ಸಿಕ್ಕುವುದೂ ಕಠಿಣವಾಗಿದೆ.
ದೇವಾ. ನಿನ್ನ ಕಾರ್ಯಪಥವು ಅಜ್ಞಾತವಾದುದು, ಅಚಿಂತ್ಯವಾದುದು.'
'ಒಂದು ಕಾಲದಲ್ಲಿ ಅವರು ಕುಳಿತಾಗ ನಿಂತಾಗ ನೂರಾರುಮಂದಿ ಸೇವ
ಕರು ಕೈಜೋಡಿಸಿಕೊಂಡು ನಿಂತು ಉಪಚರಿಸುತ್ತಿದ್ದರು. ಆದರೆ

ಇಂದು ಅವರು ಪರರ ಗುಲಾಮರಾಗಿದ್ದಾರೆ. ಅವರ ಕತ್ತಿನವೇಲೆ ಮುತ್ತಿನ ಹಾರಗಳಿಗೆ ಪ್ರತಿಯಾಗಿ ಕಬ್ಬಿಣದ ಸರಪಳಿಗಳಿವೆ.

ಒಂದು ಕಾಲದಲ್ಲಿ ಅವರಿಗೆ ಸುಖಸಂತೋಷಗಳನ್ನು ಒದಗಿಸಿದ ಧನಕನಕಾದಿಗಳೇ ಇಂದು ಬಂಧಕರವಾಗಿಯೂ ಇವೆ.

ಒಂದು ಕಾಲದಲ್ಲಿ ಅವರ ಮಾನಪ್ರಾಣಗಳ ರಕ್ಷಣೆಗಾಗಿ ಶಸ್ತ್ರಧಾರಿಗಳಾಗಿ ನಿಂತಿದ್ದ ಸಿಪಾಯಿಗಳೇ ಇಂದು, ಅವರನ್ನು ಹೊರಕ್ಕೆಳೆದು ಮಾನಭಂಗ ಪಡಿಸಲು ಆಜ್ಞಾಪಿಸಲ್ಪಟ್ಟಿದ್ದಾರೆ.

ಭಗವಾನನು ಕೃಪೆಮಾಡಿದರೆ, ಮನುಷ್ಯನಿಗೆ ಘನತೆಯನ್ನು ಉಂಟುಮಾಡುತ್ತಾನೆ. ಆತನು ಇಷ್ಟಪಟ್ಟರೆ ಅಸಹನೀಯ ಕಷ್ಟಸಂಕಟಗಳೂ ಪ್ರಾಪ್ತಿಸುತ್ತವೆ.'

'ಅವರು ಅಂದು ದೇವರನ್ನು ಕುರಿತು ಚಿಂತಿಸಿದ್ದರೆ, ಇಂದು ಅವರಿಗೆ ಈ ಶಿಕ್ಷೆಯೇಕೆ ಪ್ರಾಪ್ತವಾಗುತ್ತಿದ್ದಿತು ? ಇಲ್ಲ, ಅವರು ಅಂದು ಸುಖಸಂತೋಷಗಳಲ್ಲಿ ಮುಳುಗಿ ಅಂಧರಾಗಿ ಆತನನ್ನು ಮರೆತರು. ಇಂದು ಅದರ ಪರಿಣಾಮವನ್ನು ಅನುಭವಿಸದಿದ್ದರೆ ಬೇರೆ ಮಾರ್ಗವೇನಿದೆ ? *ನಾನಕ್-ಭಗವದಿಚ್ಛೆಯಲ್ಲಿ ಏನಿದೆಯೋ ಅದು ಆಗಿಯೇ ತೀರುವುದು. ಅದನ್ನು ವ್ಯತ್ಯಾಸಪಡಿಸಬೇಕೆಂದರೆ ಮಾನವನೆಷ್ಟರವನು ?'

ನಾನಕನು ಸೆರೆಬಿದ್ದ ತರುವಾಯ ಸ್ವಲ್ಪ ಕಾಲದೊಳಗಾಗಿಯೇ, ಆತನಿಗೂ ಮೊಗಲ್ ಚಕ್ರವರ್ತಿಗೂ ದರ್ಶನಸಂಭಾಷಣೆಗಳು ನಡೆಯಲು ಅವಕಾಶವೊದಗಿತು. ನಾನಕನ ಬೋಧನೆಯೂ, ಬಾಬರನ ನಿಶ್ಚಯದ ನಡವಳಿಕೆಯನ್ನೂ, ರಾಜ್ಯಾಂಗದ ಹಲವು ವಿಚಾರಗಳನ್ನೂ ವ್ಯತ್ಯಸ್ತಗೊಳಿಸಿದ ವಿಷಯದಲ್ಲಿ ಹಲವು ಕಥೆಗಳು ಹೇಳಲ್ಪಟ್ಟಿವೆ. ಅವುಗಳಲ್ಲಿ ಒಂದೆರಡನ್ನು ಇಲ್ಲಿ ಹೇಳುತ್ತೇವೆ.

---

*ಸರ್ವಜ್ಞ, ವೇಮನ ಮುಂತಾದ ಜ್ಞಾನಿಗಳು ಲೋಕವನ್ನು ಉದ್ದೇಶಿಸಿ ಹೇಳಲಿಚ್ಛಿಸಿದ ನೀತಿಯನ್ನು ತಮ್ಮನ್ನೇ ಕುರಿತು ಹೇಳಿಕೊಂಡಿರುವಂತೆಯೇ, ಇಲ್ಲಿ ನಾನಕನೂ ತನ್ನನ್ನೇ ಕುರಿತು ಹೇಳಿಕೊಂಡಿದ್ದಾನೆ.

ಬಾಬರನು ಅಮಿನಾಬಾದ್ ನಗರವನ್ನು ಸ್ವಾಧೀನಪಡಿಸಿಕೊಂಡಾಗ್ಗೆ ಅಲ್ಲಿ ನಡೆದ ನರಹತ್ಯ, ಲೂಟಿ, ಸ್ತ್ರೀಯರಿಗೆ ಪ್ರಾಪ್ತವಾದ ಮಾನಹಾನಿಯೇ ಮುಂತಾದ ಅಸಹನೀಯದುಃಖಗಳ ವಿಚಾರಗಳನ್ನು ಕೇಳಿ ಸೆರೆಮನೆಯಲ್ಲಿದ್ದ ನಾನಕನು ಬಾಬರನನ್ನು ದರ್ಶಿಸಿ ಮಾತನಾಡಲು ಅವಕಾಶವನ್ನು ಹೊಂದಿದನು. ಆದರೆ ಈವರೆಗೇ ಬಾಬರನು ನಾನಕನ ಸಾಧುಸ್ವಭಾವ ವಿನಯಶೀಲತೆ ಭಗವದ್ಭಕ್ತತೆ ಮುಂತಾದುವುಗಳ ವಿಷಯವನ್ನು ಕೇಳಿದ್ದನಾದುದರಿಂದ ಆತನನ್ನು ಸ್ವತಃ ಸಂದರ್ಶಿಸಲಪೇಕ್ಷಿಸಿ ಸೆರೆಮನೆಗೆ ನಡೆದುಬಂದನು. ಚಕ್ರವರ್ತಿಯು ನೋಡಿದಾಗ್ಗೆ, ನಾನಕನು ರಾಗಿ ಬೀಸಲು ನಿಯಮಿತನಾಗಿ ಬೀಸುವ ಕಲ್ಲಿನೆದುರಿಗೆ ಕುಳಿತಿದ್ದನು. ಆದರೆ, ಧ್ಯಾನಮಗ್ನನಾಗಿ ಕಣ್ಣು ಮುಚ್ಚಿಕೊಂಡು ಕುಳಿತಿದ್ದ ಆತನ ಎದುರಿಗಿದ್ದ ಕಲ್ಲು ತಾನೇ ತಿರುಗಿ ಬೀಸುತ್ತಿದ್ದಿತು. ಅದನ್ನು ಕಂಡ ಬಾಬರನು, ಅಂತಹ ಸಾಧುಪುರುಷರು ವಾಸಿಸುತ್ತಿದ್ದ ಆ ಊರನ್ನು ತೊಂದರೆಪಡಿಸಿದ್ದು ಸಮನಲ್ಲವೆಂದುಕೊಂಡು-ನಾನಕನಿಗೆ ವಿನೀತಭಾವದಿಂದ ನಮಿಸಿ, ತನ್ನ ತಪ್ಪನ್ನು ಮನ್ನಿಸಿ-ತನ್ನಿಂದ ಏನಾದರೊಂದು ಕಾಣಿಕೆಯನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿದನು. ಆದರೆ, ಮಹಾ ದಯಾಳುವಾದ ನಾನಕನು ತನಗಾಗಿ ಏನನ್ನೂ ಅಪೇಕ್ಷಿಸದೆ, ಅಮಿನಾಬಾದಿನಲ್ಲಿ ಸೆರೆಯಾಗಿ ಕಷ್ಟಪಡುತ್ತಿರುವವರನ್ನೆಲ್ಲ ಬಂಧನಿವೃತ್ತರನ್ನಾಗಿ ಮಾಡಬೇಕೆಂದು ಕೇಳಿಕೊಂಡನು. ಬಾಬರನು ಸುಪ್ರೀತನಾಗಿ ಎಲ್ಲರನ್ನೂ ಬಿಡುಗಡೆ ಮಾಡಿಸಿದುದಲ್ಲದೆ, ಲೂಟಿಮಾಡಿದ್ದ ಅವರವರ ಆಸ್ತಿಪಾಸ್ತಿಗಳನ್ನು ಸಹ ಅವರಿಗೇ ಕೊಟ್ಟುಬಿಡಬೇಕೆಂದು ಆಜ್ಞಾಪಿಸಿದನು.

ಅಷ್ಟುಮಾತ್ರವಲ್ಲ. ನಾನಕನಮೇಲೆ ಬಾಬರನ ಭಕ್ತಿವಿಶ್ವಾಸಗಳು ದಿನದಿನಕ್ಕೆ ಹೆಚ್ಚುತ್ತಾ ಹೋದುವು. ಗುರುವು ತನ್ನ ಬಳಿಯಲ್ಲಿಯೇ ಇರಬೇಕೆಂದು ಪ್ರಾರ್ಥಿಸಿಕೊಂಡನು. ಆದರೆ ನಾನಕನು ಪ್ರಾರಂಭದಲ್ಲಿ ಒಂದು ದಿನಮಾತ್ರ ಆತನೊಂದಿಗಿರುವಂತೆ ಒಪ್ಪಿದನು. ಚಕ್ರವರ್ತಿಯು ಬಹುಮಟ್ಟಿಗೆ ಪ್ರಾರ್ಥಿಸಿದ್ದರಿಂದ ಮೂರು ದಿನಗಳವರೆಗೆ ಇರಲು ಒಪ್ಪಿದನು. ಆ ಮೂರು ದಿನಗಳೂ, ಗುರುವು ಬಹು ವ್ಯಸನಾಕ್ರಾಂತನಾಗಿ ಇದ್ದಂತೆ ಬಾಬರನಿಗೆ ಬೋಧವಾಗಿ-'ನಾನು ಏನುಮಾಡಿದರೆ ನಿಮ್ಮ ಮನಸ್ಸಿಗೆ ತೃಪ್ತಿಯುಂಟಾಗುವುದು?' ಎಂದು ಪ್ರಾರ್ಥಿಸಿದನು. ಅದನ್ನು

ಕೇಳಿ, ಗುರುವು ನಿರಪರಾಧಿಗಳಾದ ಪ್ರಜೆಗಳಿಗೆ ಪ್ರಾಪ್ತವಾದ ಹಿಂಸೆಯನ್ನು ಸಹಿಸಲಾರದೆ, ಕೆಲಹೊತ್ತು ಧ್ಯಾನಮಗ್ನನಾಗಿ - ಪರವಶನಾಗಿದ್ದನು. ಅದನ್ನು ಕಂಡು ಗಾಬರಿಯಾದ ಬಾಬರನು ಎದ್ದುನಿಂತು ಕೈಮುಗಿದು ಕೊಂಡು ತನ್ನ ವಿಷಯದಲ್ಲಿ ಕೃಪೆಮಾಡಬೇಕೆಂದು ಪ್ರಾರ್ಥಿಸಿದನು. ಆ ವೇಳೆಗೆ ಬಹಿರ್ಮುಖನಾದ ಗುರುವು—"ಓ ಚಕ್ರವರ್ತಿಯೇ ಭಗವಾನ ನಿಂದ ನೀನು ಕ್ಷಮೆಯನ್ನು ಬಯಸುವೆಯಾದರೆ ನಿನ್ನಲ್ಲಿ ಸೆರೆಬಿದ್ದಿರುವವರ ನ್ನೆಲ್ಲ ಮುಕ್ತರನ್ನಾಗಿ ಮಾಡು. ನಿನ್ನ ಸಾಮ್ರಾಜ್ಯವು ಚಿರಕಾಲ ಉಳಿ ವುದು" ಎಂದನು. ಆ ಮಾತನ್ನು ಕೇಳಿದ ಬಾಬರನು, ಎಲ್ಲರನ್ನೂ ಬಿಡು ಗಡೆಮಾಡುವಂತೆ ಆಜ್ಞಾಪಿಸಿದ್ದು ಮಾತ್ರವಲ್ಲದೆ - ಗುರುವಿಗೆ ಇನ್ನೂ ಹೆಚ್ಚು ಸಂತೋಷವನ್ನುಂಟುಮಾಡಬೇಕೆಂದು ಆ ಬಂಧಮುಕ್ತರೆಲ್ಲರಿಗೂ ನೂತನ ವಸ್ತ್ರಾದಿಗಳನ್ನು ಕೊಟ್ಟು ಕಳುಹಿಸಬೇಕೆಂದೂ ತಿಳಿಸಿದನು. ಅದನ್ನು ಕೇಳಿ ಸುಪ್ರೀತನಾದ ಗುರುವು—"ಚಕ್ರವರ್ತಿಯೇ, ನ್ಯಾಯವಾದ ತೀರ್ಮಾನಗಳನ್ನು ಕೊಡುವಲ್ಲಿ ಭ್ರಾಂತನಾಗಬೇಡ. ಸಾಧುಸಂತರನ್ನು ಗೌರವಿಸು, ಮದ್ಯ ಸೇವನೆಯನ್ನೂ ದ್ಯೂತವನ್ನೂ ಶಪಥಪೂರ್ವಕ ತ್ಯಜಿಸು, ಈ ದುರ್ವ್ಯಸನಗಳಲ್ಲಿ ಮುಳುಗಿದ ರಾಜನು ಇಹದಲ್ಲೇ ತಪ್ಪದೆ ದುರ್ಗತಿಗಿಳಿಯುವನು. ಸೋತವರ ವಿಷಯದಲ್ಲಿ ದಯಾಳುವಾಗಿರು. ಭಗ ವಾನನನ್ನು ಸತ್ಯಸ್ವರೂಪಿಯೆಂದು ತಿಳಿದು ಪ್ರಾರ್ಥಿಸು."

ಖಡ್ಗಹಸ್ತನಾಗಿ ಶತ್ರುದಮನಮಾಡಿ ನಿರಂಕುಶ ಪ್ರಭುತ್ವಮಾಡು ತ್ತಿದ್ದ ಮಹಾ ಪ್ರತಾಪಿಯಾದ ಆ ಯವನಾಧಿಪನ ಮನಮೆಚ್ಚಿಸಿ ತನ್ನ ದೇಶೀ ಯರನ್ನು ದಯಾಪ್ರೇಮಗಳಿಂದ ನೋಡುವಂತೆ ಪ್ರೇರಿಸಿದುದು ಅಲ್ಪ ಕಾರ್ಯವಲ್ಲ. ಈ ಭಾಗದಲ್ಲಿ ಸಾಧು ನಾನಕನು ಅಗಾಧ ಸೇವೆಯನ್ನು ಮಾಡಿದ್ದಾನೆಂಬುದರಲ್ಲಿ ಸಂಶಯವಿಲ್ಲ. ಹಾಗೆ ಮಹದಾಶ್ರಯವಿದ್ದಿತಾ ದರೂ ಆತನು ಎಷ್ಟು ಸ್ವಾರ್ಥತ್ಯಾಗಿಯಾಗಿದ್ದನೆಂಬುದು ಆಗ ನಡೆದ ಒಂದು ಸಂಗತಿಯಿಂದ ವ್ಯಕ್ತವಾಗಿದೆ. ಬಾಬರನು ಮತ್ತೊಂದುವೇಳೆ, ಗುರು ವಿಗೆ ಇಷ್ಟವಾದುದನ್ನು ಅಪೇಕ್ಷಿಸಬಹುದೆಂದು ಕೇಳಿಕೊಂಡಾಗ್ಗೆ, ನಾನಕನು- 'ನಾನು ಲೋಕೈಕಪ್ರಭು ಭಗವಾನನಿಂದ ನಿಯಮಿಸಲ್ಪಟ್ಟವನು. ಆತನು ಜಗತ್ತಿಗೆ ಪ್ರಸಾದಿಸಿರುವ ಅನಂತ ವರದಾನಗಳನ್ನೇ ಎಲ್ಲರೂ ಹಂಚಿ

ಕೊಂಡು ಅನುಭವಿಸುತ್ತಿರುವರು.
ಮಾನವನ ಬೆಂಬಲ-ಆಶ್ರಯಗಳಿಗಾಗಿ ಇಚ್ಛಿಸುವನು, ಇಹ ಪರಗಳೆರಡನ್ನೂ ಕಳೆದುಕೊಳ್ಳುವನು.
ಲೋಕದಾತೃವು ಆತನೊಬ್ಬನೇ-ಲೋಕವೆಲ್ಲವೂ ಆತನ ಬಳಿ ಭಿಕ್ಷುಕರಾಗಿದ್ದಾರೆ.
ಯಾರು ಆತನನ್ನು ಬಿಟ್ಟು-ಬೇರೆಯವರನ್ನು ಆಶ್ರಯಿಸುವರೋ ಅವರು ಎಲ್ಲಾ ಗೌರವವನ್ನೂ ನೀಗಿಕೊಂಡು ನಾಶವಾಗುವರು.
ರಾಜರೂ ರಾಜಾಧಿರಾಜರೂ ಆತನಿಂದ ನಿಯಮಿಸಲ್ಪಟ್ಟವರೇ!
'ನಾನಕನು ಹೇಳುವುದನ್ನು ಕೇಳು-ಬಾಬರ್ ಚಕ್ರವರ್ತಿಯೇ, ನಿನ್ನನ್ನು ಯಾಚಿಸುವವನು-ಅಧಮನು ಬುದ್ಧಿಹೀನನು.'
ನಿಸ್ಪೃಹಿಯಲ್ಲದಿದ್ದವನು-ಚಕ್ರವರ್ತಿಯ ಎದುರಿನಲ್ಲಿ ನಿಂತು ಹೀಗೆ ನುಡಿಯಲು ಸಾಧ್ಯವೆ!

ವೃದ್ಧನಾದ ನಾನಕನು ತನ್ನ ಜೀವಿತದ ಸಂಧ್ಯಾಕಾಲದಲ್ಲಿ ಅವರೆಗೆ ಸಂಚಾರದಲ್ಲಿ ಧರಿಸುತ್ತಿದ್ದ ಫಕೀರನ ಉಡುಪನ್ನು ತ್ಯಜಿಸಿ ತನ್ನ ಕುಟುಂಬದೊಂದಿಗೆ ಖರತ್ಪುರ್ ಎಂಬ ಊರಿನಲ್ಲಿ ನೆಲೆಗೊಂಡನು. ಮರ್ದನನೂ ತಾಳ್ವಂದಿಯಿಂದ ಹೊರಟು ಬಂದು ತನ್ನ ಗುರುವಿನ ಬಳಿಯಲ್ಲೇ ವಾಸಿಸಲು ನಿಂತನಾದರೂ, ಮುಂದೆ ಬಹು ದಿನಗಳು ಜೀವಿಸಿರಲಿಲ್ಲ. ಮರ್ದನನ ಮರಣಾನಂತರ ಆತನ ಮಗನು ತನ್ನ ತಂದೆಯ ಸ್ಥಾನದಲ್ಲಿ ಗುರುವಿನ ಬಳಿ ಸಾರಂಗಿಯನ್ನು ನುಡಿಸುತ್ತಲೂ ಹಾಡುತ್ತಲೂ ಭಕ್ತಿಯುತನಾಗಿ ಸೇವೆಮಾಡುತ್ತಿದ್ದನು. ಪ್ರತಿ ಪ್ರಾತಃಕಾಲ ಸಾಯಂಕಾಲಗಳಲ್ಲೂ ಗುರು ನಾನಕನು ನಡೆಸುತ್ತಿದ್ದ ದೈವಪ್ರಾರ್ಥನೆಗೆ ಹತ್ತಿರದ ದೂರದ ನೂರಾರು ಜನರು ನೆರೆಯುತ್ತಿದ್ದರು. ನಾನಕನು ಅವರೆಲ್ಲರಿಗೂ, ತನ್ನ ನವೀನ ಮತದ ತತ್ವವನ್ನು ಬೋಧನೆಯಿಂದಲೂ ಆಚರಣೆಯಿಂದಲೂ ತಿಳಿಸುತ್ತಿದ್ದನು. ಗುರು ದಕ್ಷಿಣೆಯಾಗಿ ಅವರು ಒಪ್ಪಿಸುತ್ತಿದ್ದ ಧನವನ್ನೂ ಧಾನ್ಯವನ್ನೂ ಅನಾಥ ಆಶ್ರಮಗಳಿಗೂ ಬಡಬಗ್ಗರಿಗೂ ಹಂಚಿಬಿಡುತ್ತಿದ್ದನು. ಸಹಸ್ರಾರು ಜನರು ನೆರೆದು ತನ್ನನ್ನು ಅಷ್ಟುಮಟ್ಟಿಗೆ ಗೌರವಿಸುತ್ತಿದ್ದರೂ ಆ ಮಹಾನುಭಾವನನ್ನು ಗರ್ವ-ಅಹಂಭಾವಗಳು ಲೇಶಮಾತ್ರವೂ ಸೋಂ

ಕದೆ ಆತನು,-'ನಾನೂ ನಿಮ್ಮೆಲ್ಲರಂತೆಯೇ ಒಬ್ಬನು. ನನಗೂ ನಿಮ್ಮಗಳಂತೆಯೇ ಪಾಪಾಚರಣೆಗೆ ಅವಕಾಶವುಂಟು. ನನಗೂ ದೇಹ ಮನೋಬುದ್ಧಿಗಳೂ ಪಂಚೇಂದ್ರಿಯಗಳೂ ಉಂಟು. ನಾನೂ ವಿಷಯೇಂದ್ರಿಯಗಳಿಂದ ಆಕರ್ಷಿತನಾಗಿ ಯಾವಾಗಲಾದರೂ ಪಾಪಮಾಡಿಬಿಡಬಹುದು. ಆದರೆ ನಾವು ಸರ್ವಶಕ್ತಿಮಾನ್, ಸರ್ವಲೋಕ ಶರಣ್ಯನಾದ ಜಗದೀಶ್ವರನನ್ನು ನಂಬಿ ಭಜಿಸೋಣ, ಸೇವಿಸೋಣ, ಪ್ರಾರ್ಥಿಸೋಣ. ಈ ಅನನ್ಯ ಭಕ್ತಿಯೊಂದೇ ಸಕಲ ಪಾಪಗಳಿಂದಲೂ ನಮ್ಮನ್ನು ಉದ್ಧರಿಸುವುದು' ಎಂದು ಹೇಳುತ್ತಿದ್ದನು.

ನಾನಕನ ಇಬ್ಬರು ಮಕ್ಕಳೂ ಆತನಿಗೆ ವಿಧೇಯರಾಗಿರಲಿಲ್ಲ. ಅಲ್ಲದೆ, ಆತನ ಚಿತ್ತವೃತ್ತಿಯನ್ನು ಅನುಸರಿಸುವಷ್ಟು ಧಾರ್ಮಿಕ ಮನೋಭಾವವುಳ್ಳವರೂ, ಬುದ್ಧಿವಂತರೂ ಆಗಿರಲಿಲ್ಲ. ಆದುದರಿಂದ ಗುರುವು ತನ್ನ ಅಂತ್ಯಕಾಲವು ಸಮೀಪಿಸುತ್ತಿ ಎಂಬುದನ್ನು ತಿಳಿದು ತನ್ನ ಶಿಷ್ಯರಲ್ಲಿ ಬುದ್ಧಿಶಾಲಿಯೂ ದಕ್ಷನೂ ಆಗಿದ್ದ ಅಂಗದನೆಂಬಾತನನ್ನು ತನ್ನ ತರುವಾಯ ಪೀಠಕ್ಕೆ ಬರುವಂತೆ ನಿಯಮಿಸಿದನು. ಈ ಸಂಗತಿಯನ್ನು ತಿಳಿದ ಆತನ ಇಬ್ಬರು ಮಕ್ಕಳೂ, ಬಂದು ನಮ್ಮ ಗತಿಯೇನೆಂದು ಮೊರೆಯಿಟ್ಟರು. - ನೀವು ಸತ್ಯಸಂಧರಾಗಿ ದೇವರನ್ನು ಮರೆಯದೆ ಇದ್ದಿರಾದರೆ ನಿಮಗೆ ಯಾವ ತೊಂದರೆಯೂ ಉಂಟಾಗದು-ಎಂದು ಆಶೀರ್ವದಿಸಿದನು. ಆಜನ್ಮ ನಿಸ್ಪೃಹ ಚಕ್ರವರ್ತಿಯೋ ಎಂಬಂತೆ ವರ್ತಿಸಿದ ಆತನು ಕೊನೆಗಾಲದಲ್ಲೂ, ಪ್ರಾಯಸಮರ್ಥರಾದ ಮಕ್ಕಳಿದ್ದರೂ, ಯೋಗ್ಯನಾದ ತನ್ನ ಶಿಷ್ಯರಲ್ಲೊಬ್ಬನನ್ನು ತನ್ನ ಪೀಠಕ್ಕೆ ತಂದು, ತನ್ನ ಕೀರ್ತಿಯನ್ನು ನಿಷ್ಕಳಂಕ ರೀತಿಯಿಂದ ರಕ್ಷಿಸಿಕೊಂಡನು.

ನಾನಕನು, ಹಿಂದೂಗಳ ವಿಷಯದಲ್ಲಿ ಎಷ್ಟು ಪ್ರೇಮ ಸೌಹಾರ್ದಭಾವಗಳನ್ನು ಪ್ರಕಟಿಸಿ, ಅವರ ಶ್ರೇಯಸ್ಸನ್ನು ಬಯಸುತ್ತಿದ್ದನೋ, ಮಹಮ್ಮದೀಯರ ವಿಷಯದಲ್ಲೂ ಅಷ್ಟೇ ಪ್ರೀತಿ ವಿಶ್ವಾಸಗಳನ್ನು ಪ್ರಕಟಿಸುತ್ತಿದ್ದನು. ಆತನನ್ನು ಹಿಂದೂಗಳು ಎಷ್ಟುಮಟ್ಟಿಗೆ ತಮ್ಮವನೆಂದು ಭಾವಿಸಿದ್ದರೋ ಮಹಮ್ಮದೀಯರೂ ಅಷ್ಟುಮಾತ್ರವೇ ಭಾವಿಸಿದ್ದರು. ಆದುದರಿಂದ ಆತನ ಮರಣಾನಂತರ ಆತನ ದೇಹವು ತಮಗೆ ಸೇರಬೇಕು; ತಮಗೆ

ಸೇರಬೇಕು ಎಂದು ಉಭಯರೂ ವಿವಾದಿಸತೊಡಗಿದರು. ಆ ವಿವಾದವು ತತ್ಕ್ಷಣಕ್ಕಾಗಿ, ಇನ್ನೂ ಜೀವಂತನಾಗಿದ್ದ ನಾನಕನಲ್ಲಿಗೇ ಹೋಯಿತು. ಆಗಲಾತನು,-'ನೀವಿಬ್ಬರೂ ನನ್ನ ದೇಹದ ಒಂದೊಂದು ಭಾಗದಮೇಲೆ ಹೂವುಗಳನ್ನು ತಂದು ಇಟ್ಟಿರಿ. ನಾಳೆಯ ಪ್ರಾತಃಕಾಲ ಯಾರ ಭಾಗದ ಹೂವು ಬಾಡದೆ ಕಳಕಳಿಸುತ್ತಿರುವುದೋ ಅವರಿಗೆ ದೇಹವು ಸೇರತಕ್ಕುದು. ಅವರು ಅದನ್ನು ತಮ್ಮ ಮತಪದ್ಧತಿಯಂತೆ ಸಂಸ್ಕರಿಸಲಿ!' ಎಂದನು. ಅದರಂತೆಯೇ ಎರಡು ಪಂಗಡದವರೂ ಹೂವುಗಳನ್ನು ತಂದು ಆತನ ಎಡಬಲ ಭಾಗಗಳ ಮೇಲೂ ಇಟ್ಟು ಪೂಜಿಸಿ ಮೇಲೊಂದು ಹೊದಿಕೆಯನ್ನು ಹೊದ್ದಿಸಿ ಹೊರಟುಹೋದರು. ಮಾರನೆಯ ಪ್ರಾತಃಕಾಲ, ಎಲ್ಲರೂ ನೆರೆದು ಗುರುವಿನ ದೇಹಕ್ಕೆ ಹೊದ್ದಿಸಿದ್ದ ಬಟ್ಟೆಯನ್ನು ತೆಗೆಯಲು, ಅಲ್ಲಿ ರಕ್ತಮಾಂಸಮಯವಾದ ಭೌತಿಕ ದೇಹವೇ ಇಲ್ಲದೆ, ಕೇವಲ ಒಂದು ಪುಷ್ಪರಾಸಿ ಮಾತ್ರವಿತ್ತು. ಪ್ರೇಕ್ಷಕರು, ಪರಮಾಶ್ಚರ್ಯಭರಿತರಾಗಿ ಗುರುವಿನ ಮಹಿಮೆಯನ್ನು ಸಹಸ್ರ ಮುಖಗಳಿಂದ ವರ್ಣಿಸುತ್ತ, ಆಗತಾನೆ ಗಿಡದಿಂದ ಬಿಡಿಸಿದುವೋ ಎಂಬಂತೆ ಕಳಕಳಿಸುತ್ತಿದ್ದ ತಮ್ಮತಮ್ಮ ಭಾಗದ ಆ ಪುಷ್ಪಗಳನ್ನು ಹಿಂದೂಗಳೂ ಮಹಮ್ಮದೀಯರೂ ಕೊಂಡೊಯ್ದು ರಾವೀ ನದಿಯ ದಂಡೆಯಲ್ಲಿ ಕ್ರಮವಾಗಿ ವೃಂದಾವನವನ್ನೂ – ಗೋರಿಯನ್ನೂ ಕಟ್ಟಿಸಿದರು. ಹೀಗೆ ಗುರುನಾನಕ್ ಮಹಾತ್ಮನು ತನ್ನ ೬೯ನೆಯ ವಯಸ್ಸಿನಲ್ಲಿ (ಕ್ರಿ.ಶ. ೧೫೩೮) ಪ್ರಪಂಚಕ್ಕೇ ವಿಚಿತ್ರವೆನ್ನಿಸುವ ರೀತಿಯಲ್ಲಿ ತನ್ನ ಭೌತಿಕ ಕಳೇಬರವನ್ನು ಪುಷ್ಪರಾಸಿಯೊಂದಿಗೆ ಬೆರೆಸಿ ಸರ್ವೇಶ್ವರನ ದಿವ್ಯ ಸನ್ನಿಧಿಯನ್ನು ಕುರಿತು ಗಮಿಸಿದನು.



## ಉ ಪ ಸಂ ಹಾ ರ

ನಾನಕನು ಸ್ಥಾಪಿಸಿದ ಸಿಕ್ ಮತವು ಹೆಚ್ಚು ತೊಡಕುಗಳಿಂದಲೂ-ಹಲವು ವಿಧಿಗಳಿಂದಲೂ ನಿರ್ಬಂಧಿತವಾಗಿಲ್ಲ. ಆ ಮತವನ್ನು ಅನುಸರಿಸಿ ಲೋಕಕ್ಕೆಲ್ಲ ದೇವರು ಒಬ್ಬನೇ! ಆತನಿಗೆ ಸಹಾಯಕರೂ ಪರಿವಾರದವರೂ ಯಾರೂ ಇಲ್ಲ. ಆತನೇ ಸರ್ವೇಶ್ವರನು. ಸರ್ವಶಕ್ತನು. ಆತನು ದೃಷ್ಟಿಗೆ ಗೋಚರವಾಗತಕ್ಕವನಲ್ಲ. ಆತನಿಗೆ ರಾಮ ಕೃಷ್ಣ ಶಿವ ಶಂಕರ ಖುದಾ

ಮುಂತಾದ ಯಾವ ಸಾಮ್ಯವೂ ಇಲ್ಲ. ಭಗವದೃಷ್ಟಿಯಿಂದ ಲೋಕದಲ್ಲಿ ಒಬ್ಬನು ಹೆಚ್ಚು, ಒಬ್ಬನು ಕಡಮೆ ಎಂಬುದಿಲ್ಲ. ಸಕಲರೂ, ತಂದೆಯ ಕಣ್ಣೆದುರಿನಲ್ಲಿ ಮಕ್ಕಳಿರುವಂತೆ, ಆತನ ದೃಷ್ಟಿಯಲ್ಲಿ ಸಮಾನರು. ಯಾತ್ರೆ ತೀರ್ಥ ಕ್ಷೇತ್ರಾದಿಗಳ ಗೊಂದಲವು ವ್ಯರ್ಥ. ಮಾತ್ರವಲ್ಲ. ಸರ್ವವ್ಯಾಪಿಯಾದ ಭಗವಂತನನ್ನು ತಿಳಿಯಲು ಇವು ಪ್ರತಿಬಂಧಕಗಳು. ಏಕೆಂದರೆ, ಒಂದು ಗೊತ್ತಾದ ಕ್ಷೇತ್ರದಲ್ಲಿ ಅಥವ ತೀರ್ಥದಲ್ಲಿ ಆತನ ಸಾನ್ನಿಧ್ಯವಿರುವುದೆಂದರೆ, ಇತರ ಸ್ಥಳಗಳಲ್ಲಿ ಇಲ್ಲವೆಂದಂತಾಯಿತಲ್ಲವೆ ? ಎಂಬುದು ಆ ಧರ್ಮಾಚಾರ್ಯರ ಅಭಿಪ್ರಾಯ. ಮೃತರಿಗೆ ಶ್ರಾದ್ಧಾದಿಗಳನ್ನು ಮಾಡುವುದಾಗಲೀ ಅವರ ವಿಗ್ರಹಗಳನ್ನು ಪೂಜಿಸುವುದಾಗಲೀ ಅನುಪಯೋಗವೆಂಬುದು ಗುರುನಾನಕನ ಭಾವನೆಯಾಗಿದ್ದಿತು. ಪ್ರಕೃತಿ ವಿರೋಧವಲ್ಲದ, ಲೋಕವಿರೋಧವಲ್ಲದ, ನೀತಿವಿರೋಧವಲ್ಲದ ನಡೆನುಡಿಗಳಿಂದ ನಡೆಯುವುದೇ ಸರ್ವೋತ್ತಮ ಮಾರ್ಗವೆಂಬುದು ಆತನ ಅಭಿಪ್ರಾಯ. ಇಂತಹ ನಡೆನುಡಿಗಳನ್ನು ಸಮಾಜಕ್ಕೆ ಬೋಧಿಸುವ ಗುರುಗಳು ಮಾತ್ರ ಪೂಜನೀಯರು ಎಂದು ಆತನು ಹೇಳುತ್ತಿದ್ದನು.

ಗುರು ನಾನಕನ ತರುವಾಯ ಗುರು ಅಂಗದ, ಗುರು ಅಮರದಾಸ, ಗುರು ರಾಮದಾಸ, ಗುರು ಅರ್ಜುನ, ಗುರು ಹರಗೋವಿಂದ, ಗುರು ಹರರಾಯ್, ಗುರು ಹರಕಿಷನ್, ಗುರು ತೇಗ್‌ಬಹದ್ದೂರ್, ಗುರು ಗೋವಿಂದ್‌ಸಿಂಗ್ ಎಂಬ ಒಂಬತ್ತು ಮಂದಿ ಗುರುಗಳು ಪೀಠಕ್ಕೆ ಒಂದು ಸಿಕ್‌ಮತವನ್ನು ಅತಿಶಯ ಅಭಿವೃದ್ಧಿಪಡಿಸಿದರು. ಕೊನೆಯ ಗುರುಗೋವಿಂದಸಿಂಗನ ಕಾಲದಲ್ಲಿ ಸಿಕ್ಕರು ವೀರಕ್ಷಾತ್ರಧರ್ಮವನ್ನು ಅವಲಂಬಿಸಿ ರಣಧೀರರಾದರು. ಅವರು ಹಾಗೆ ಏಕಾಭಿಪ್ರಾಯದಿಂದ ಜನಾಂಗವೇ ಒಂದು ದೇಹವೋ ಎಂಬಂತೆ ಒಂದಾಗಲು, ಗುರುನಾನಕನು ಸ್ಥಾಪಿಸಿದ ಏಕಾಭಿಪ್ರಾಯವುಳ್ಳ ನೀತಿಯುತ ಮತವೇ ಮೂಲಾಧಾರ ಪೀಠವು. ಇಂತಹ ತೇಜಸ್ವಿ ಜನಾಂಗವನ್ನು ಸಿದ್ಧಗೊಳಿಸಿ, ಭಾರತೀಯರಿಗೆ ಆದರ್ಶಭೂತನಾದ ಮಹಾತ್ಮಾ ನಾನಕನ ನಿಸ್ಪೃಹತೆಯೂ, ಉದಾರಭಾವವೂ, ಜಿತೇಂದ್ರಿಯತ್ವವೂ, ದೈವಭಕ್ತಿಯೂ ಸರ್ವರಿಗೂ ಮಾರ್ಗದರ್ಶಕಗಳಾಗಿದ್ದು ಅಭಿವೃದ್ಧಿಕಾರ್ಯಕ್ಕೆ ಸಹಕಾರಿಗಳಾಗಿರಲಿ.

**ತಥಾಸ್ತು.**

ಶ್ರೀರಾಮ ಸಹಾಯಂ

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

---

**ಮುನ್ನುಡಿ :—**

ಸೂರ್ಯವಂಶಶ್ರೇಷ್ಠನೆನ್ನಿಸಿ ಅಯೋಧ್ಯೆಯಲ್ಲಿ ರಾಜ್ಯವಾಳಿ ಪ್ರಖ್ಯಾತನಾದ ಶ್ರೀರಾಮಚಂದ್ರನಂತೆಯೂ, ಚಂದ್ರವಂಶತಿಲಕನೆನ್ನಿಸಿ ಹಸ್ತಿನಾವತಿಯಲ್ಲಿ ರಾಜ್ಯವಾಳಿ ಪ್ರಸಿದ್ಧನಾದ ಯುಧಿಷ್ಠಿರನಂತೆಯೂ, ನಮ್ಮ ಕಥಾನಾಯಕನಾದ **ಎರಡನೆಯ ಪುಲಿಕೇಶಿಯು** ಚಾಲುಕ್ಯವಂಶವಿಭೂಷಿತನಾಗಿ, ಬಾದಾಮಿನಗರದಲ್ಲಿ ರಾಜ್ಯವಾಳಿ ಕರ್ಣಾಟಕ ಸಾರ್ವಭೌಮನೆನ್ನಿಸಿ ಪ್ರಸಿದ್ಧಿಯನ್ನು ಹೊಂದಿದವನು. ಭಿಕ್ಷುಕನಾದ ಒಬ್ಬ ಮನುಷ್ಯನು, ತನ್ನ ಹಿರಿಯರು ಲಕ್ಷಾಧೀಶರಾಗಿದ್ದರೆಂದು ಹೇಳಿಕೊಂಡರೆ ಅದು ಹೇಗೆ ನಂಬಿಕೆಗೆ ಅರ್ಹವಲ್ಲದ ಮಾತಾಗಿ ತೋರುವುದೋ, ಹಾಗೆಯೇ ಸದ್ಯಃಕಾಲದ ಕರ್ಣಾಟಕರು, ತಮ್ಮ ಹಿರಿಯರೂ ಒಂದು ಕಾಲದಲ್ಲಿ ಸಾರ್ವಭೌಮರಾಗಿ ರಾಜ್ಯವಾಳಿದರು, ಅಖಂಡಪ್ರತಾಪಿಗಳಾಗಿ ದೇಶವಿದೇಶಗಳ ಶತ್ರುಗಳನ್ನು ದಮನಮಾಡಿದರು, ಆಚಂದ್ರಾರ್ಕ ಕೀರ್ತಿಪ್ರದಗಳಾದ ಶಾಶ್ವತಧರ್ಮಕಾರ್ಯಗಳನ್ನು ಮಾಡಿದರು, ಖಂಡಾಂತರಗಳವರ ಭಕ್ತಿಗೌರವಗಳಿಗೂ ಪಾತ್ರರಾಗಿದ್ದರು ಎಂದು ಹೇಳಿಕೊಂಡರೆ ಅದೂ ನಂಬಿಕೆಗೆ ಅರ್ಹವಾದುದೆಂದು ತೋರದಿರಬಹುದು. ನಾಯಿಯ ಬಾಯಿಗೆ ಸಿಕ್ಕಿಬಿದ್ದ ಆವೆಯಂತೆ, ಸ್ವಾರ್ಥಿಗಳಾದ ಪರರಾಯರ ಅಧಿಕಾರಕ್ಕೆ ಒಳಪಟ್ಟುದರಿಂದ ಛಿದ್ರಛಿದ್ರವಾಗಿರುವ ನಮ್ಮ ಕರ್ಣಾಟಕವು ಹಿಂದೊಂದುವೇಳೆ ಅಖಂಡಸಾಮ್ರಾಜ್ಯವಾಗಿ, ಅದ್ವಿತೀಯವೀರರೂ ಅಸಹಾಯಶೂರರೂ ಆದ ಸಾರ್ವ

ಭಾವದಿಂದ ಪಾಲಿಸಲ್ಪಡುತ್ತಿದ್ದಿತೆಂದು ಹೇಳಿದರೆ, ಅದನ್ನು ಇಂದು ಯಾರಾದರೂ ನಂಬುವರೇ? ಈಗಿರುವ ಅವನತಸ್ಥಿತಿಮಾತ್ರವೇ ಪ್ರತ್ಯಕ್ಷ ಕಾಣುವುದರಿಂದ ಅನುಗಾಲವೂ ಹೀಗೆಯೇ ಇದ್ದಿರಬೇಕೆಂದೇ ಸಾಮಾನ್ಯರು ಯೋಚಿಸುವರು. ಆದರೆ ವಸ್ತುಸ್ಥಿತಿಯು ಯಾವಾಗಲೂ ನಮಗೆ ಪ್ರತ್ಯಕ್ಷ ತೋರುವಂತೆಯೇ ಇರುವುದಿಲ್ಲವೆಂದು ಪ್ರಪಂಚಾನುಭವವು ಹೇಳುತ್ತದೆಯಲ್ಲವೆ?

ಕರ್ಣಾಟಕವು ಬಡನಾಡಲ್ಲ. ಕನ್ನಡಿಗರು ಪೂರ್ವದಿಂದಲೂ ಪರರಿಗೆ ದಾಸಾನುದಾಸರಾಗಿಯೇ ಇದ್ದು ಬಾಳ್ವೆ ಮಾಡಿದವರಲ್ಲ. ಕರ್ಣಾಟಕದ ಪೂರ್ವಚರಿತ್ರೆಯು ವೈಭವಪೂರ್ಣವಾದುದು. ಕರ್ಣಾಟಕದೇಶವು ಅಖಂಡ ಸಾಮ್ರಾಜ್ಯವೆನ್ನಿಸಿ ಪೃಥ್ವಿಯ ಹಲವು ಚಕ್ರಾಧಿಪತ್ಯಗಳಲ್ಲಿ ಒಂದೆಂದು ಹೆಸರೆತ್ತಿದುದು. ಪ್ರಾಚೀನ ಕರ್ಣಾಟಕರಾದರೂ ಸ್ವತಂತ್ರರೂ, ಶೂರರೂ, ಆತ್ಮಗೌರವಶೀಲರೂ ಆಗಿದ್ದವರು. ಇಂದಿನ ಕರ್ಣಾಟಕರು ತಮ್ಮ ಆ ಪೂರ್ವಜರ ಮಹತ್ವವನ್ನು ಹೇಳಿಕೊಂಡು ಗೌರವವನ್ನು ಅಪೇಕ್ಷಿಸಿದರೆ ಫಲವಿಲ್ಲ-ಅಲ್ಲ,-ದೊರೆಯದು; ಅವರ ಅದ್ಭುತಕಾರ್ಯಗಳನ್ನು ಕೇಳಿ ಇಂದಿನವರು ಉತ್ತೇಜನಗೊಂಡು, ತಮ್ಮ ದೀರ್ಘಸುಷುಪ್ತ್ಯವಸ್ಥೆಯಿಂದ ಎಚ್ಚತ್ತು, ಕೊಡಹಿಕೊಂಡೇಳಬೇಕಾಗಿದೆ; ಅವರ ಶೌರ್ಯಪ್ರತಾಪಗಳನ್ನು ಕೇಳಿ, 'ಭಲೆ ನಮ್ಮ ಸಮಾನರಾರು!' ಎಂದು ತಮ್ಮ ಬೆನ್ನನ್ನು ತಾವೇ ತಟ್ಟಿಕೊಂಡರೆ ಪ್ರಯೋಜನವಿಲ್ಲ;—ತಾವೂ ಧೈರ್ಯಸಾಹಸಗಳನ್ನು ಗಳಿಸಬೇಕಾಗಿದೆ. ಅವರ ದಾನಧರ್ಮ ಪರೋಪಕಾರಾದಿ ಸತ್ಕಾರ್ಯಗಳ ವಿಚಾರವನ್ನು ಕೇಳಿ ತಾವೂ ಔದಾರ್ಯವನ್ನು ಸಂಪಾದಿಸಬೇಕಾಗಿದೆ. ಅವರ ದೇಶಭಕ್ತಿ ಭಾಷಾಪ್ರೇಮಗಳನ್ನು ಕೇಳಿ, ಅವರಂತೆಯೇ ತಾವೂ ಆಗಬೇಕಾಗಿದೆ. ಕೇಳಿ-ಅವರು ತಮ್ಮ ಮಾತೃಭೂಮಿ ಮಾತೃಭಾಷೆಯೆಂದರೆ ಹೇಗೆ ಅಸಹನೀಯ ಕಷ್ಟನಷ್ಟಗಳನ್ನು ಅನುಭವಿಸಲಿಕ್ಕೂ ಸಿದ್ಧರಾಗುತ್ತಿದ್ದರೋ, ಶತ್ರುವಿನ ಬಿಚ್ಚುಕತ್ತಿಗಾದರೂ ಎದೆಯನ್ನೊಡ್ಡಿ, ಹೃದಯದ ಬಿಸಿರಕ್ತವನ್ನಾದರೂ ಬಸಿದು ಹೇಗೆ ತಮ್ಮ ಮಾತೃಭೂಮಿಯ ಸ್ವಾತಂತ್ರ್ಯವನ್ನು ಕಾಪಾಡಲು ಮುಂದೆ ಬರುತ್ತಿದ್ದರೋ ಹಾಗೆಯೇ ಉತ್ಸಾಹದಿಂದ ಮುಂದೆ ನುಗ್ಗಬೇಕಾಗಿದೆ. ಆಲಸಿಕೆಯನ್ನು ತೊರೆದು ಅಖಂಡಪರಿಶ್ರಮ ಮಾಡಬೇ

ಕಾಗಿದೆ. ಪರಿಶ್ರಮಮಾಡಿ–'ವಾಸ್ತವ, ಇವರು ಅವರ ಯೋಗ್ಯಸಂತಾನರು'
ಎಂದು ಲೋಕದ ಹೊಗಳಿಕೆಗೆ ಪಾತ್ರರಾಗಬೇಕಾಗಿದೆ.

ಪ್ರಪಂಚಚರಿತ್ರೆಯು ಪರಿವರ್ತನಧರ್ಮವನ್ನುಳ್ಳದು ಎಂಬ ಸಂಗತಿ
ಯು ಸಿದ್ಧವಾದ ವಿಚಾರವಷ್ಟೆ! ಲೋಕದಲ್ಲಿನ ಪ್ರತಿಪ್ರಾಣಿಗೂ ಜನನ
ಬಾಲ್ಯ ಯೌವನ ಕೌಮಾರ ವಾರ್ಧಕ್ಯ ಮುಪ್ಪು ಮೃತ್ಯು ಎಂಬ ಅವಸ್ಥೆ
ಗಳುಂಟಾಗುವುದು ಹೇಗೆ ಸ್ವಾಭಾವಿಕವೋ, ಸಾಮ್ರಾಜ್ಯಗಳಿಗಾದರೂ
ಜನನ ಬಾಳ್ವೆ ಬೆಳೆವಣಿಗೆ ನಾಶಗಳೆಂಬುವು ಹಾಗೆಯೇ ಸ್ವಾಭಾವಿಕಗಳು.
ಈ ಪ್ರಕೃತಿತತ್ವವನ್ನನುಸರಿಸಿಯೇ ಲೋಕದ ಸಕಲಕಾರ್ಯಗಳೂ ನಡೆವು
ವಾದುದರಿಂದ, ಕರ್ಣಾಟಕರಾದ ನಮ್ಮ ಹಿಂದಿನ ಆ ಸ್ಥಿತಿಗೆ ಅತ್ಯಂತ ಭಿನ್ನ
ವಾಗಿರುವ ಈಗಿನ ಸ್ಥಿತಿಯನ್ನು ಕಂಡು ಯಾರೂ ನಿರುತ್ಸಾಹಿತರಾಗಬೇ
ಕಾದ ಕಾರಣವಿಲ್ಲ. ಮಾತ್ರವಲ್ಲ, ಹಿಂದಿನ ಆ ವೈಭವಸ್ಥಿತಿಯು ಪುನಃ
ಪ್ರಾಪ್ತವಾಗುವಂತೆ ಪ್ರಯತ್ನಮಾಡತಕ್ಕುದು ಕರ್ತವ್ಯವಾಗಿದೆ;—ಪ್ರತಿ
ಯೊಬ್ಬ ದೇಶಪುತ್ರನ ದೇಶಪುತ್ರಿಯ ಮೇಲೆ ಬಿದ್ದ ಭಾರವಾಗಿದೆ.

ಒಬ್ಬನಲ್ಲಿ ದೇಶಾಭಿಮಾನ ಭಾಷಾಭಿಮಾನಗಳನ್ನು ಹುಟ್ಟಿಸಿ, ಬೆಳೆಸಿ–
ಆ ಅಭಿಮಾನವು ಕಾರ್ಯರೂಪಕ್ಕಿಳಿವಂತೆ ಮಾಡಿಸುವಲ್ಲಿ ದೇಶಚರಿತ್ರೆಗೆ
ಸಮಾನವಾದ ಸಾಧನವು ಬೇರೊಂದಿಲ್ಲ. ಜನಾಂಗದ ಭಾವೀಸಂತಾನದ
ಕಣ್ಣೆದುರಿಗೆ ಈ ದೇಶಚರಿತ್ರೆಯ ಚಿತ್ರವನ್ನು ಸಹಜಸ್ವರೂಪದಿಂದ ಇಡ
ತಕ್ಕುದು ಪ್ರತಿಯೊಬ್ಬ ಅಕ್ಷರಸ್ಥನ ಆದ್ಯಕರ್ತವ್ಯವು. ಕರ್ಣಾಟಕರಲ್ಲಿ
ಪ್ರತಿಯೊಬ್ಬ ಅಕ್ಷರಸ್ಥನೂ ತಾನು ಮೊದಲು ಮಾತೃಭಾಷಾ ವಾಚನಾಭಿ
ರುಚಿಯನ್ನು ಗಳಿಸಿಕೊಂಡು, ತರುವಾಯ ವೈಭವದ ಉಚ್ಚ ಶಿಖರವನ್ನಡರಿ
ವಿಖ್ಯಾತವಾಗಿದ್ದ ತನ್ನ ಮಾತೃಭೂಮಿಯ ಪ್ರಾಚೀನಚರಿತ್ರೆಯನ್ನು ಪಾರಾ
ಯಣಮಾಡಿ, ಅದರ ಸಾರವನ್ನು ಅನಕ್ಷರಸ್ಥರಾದ ಇತರ ಹಲವರಿಗೆ ಪುರಾ
ಣವಾಗಿ ಹೇಳಿ ತನ್ಮೂಲಕ ಇಂದು ದೇಶಭಕ್ತಿಯನ್ನು ಬೆಳೆಸಬೇಕಾಗಿದೆ.
ಕರ್ಣಾಟಕದ ಹಿಂದಿನ ವೈಭವವು ಎಂತಹ ಉನ್ನತಸ್ಥಿತಿಗೆ ಏರಿದ್ದಿತೆಂಬುದರ
ಕಲ್ಪನೆಯು ಬಾರದೆ, ಮುಂದಿನ ಅಭಿವೃದ್ಧಿಗೆ ಉತ್ತೇಜನವು ದೊರೆಯಲಾ

ರದು. ಆದುದರಿಂದ ಅಭಿವೃದ್ಧಿಮಾರ್ಗದಲ್ಲಿ ಅಡಿಯನ್ನಿಟ್ಟು ನಡೆವಲ್ಲಿ ದೇಶದ ಪ್ರಾಚೀನ ಇತಿಹಾಸದ ಪಠನ ಪಾಠನವು ಮೊದಲನೆಯ ಹೆಜ್ಜೆಯೆಂಬುದು ಶತಶಃ ನಿಶ್ಚಯವಿದೆ.

ಪ್ರಕೃತ, ದುರ್ದೈವದಿಂದ ಹಲವು ಛಿದ್ರಗಳಾಗಿ ವಿಭಾಗಿಸಲ್ಪಟ್ಟು ಒಂದರೊಡನೊಂದು ಸೇರಲು ರಾಜಕೀಯ ಕಾರಣದಿಂದ ಸಾಧ್ಯವಿಲ್ಲದೆ, ತಪಿಸುತ್ತಿರುವ ಕರ್ಣಾಟಕವು, ಪ್ರಾರಂಭಕ್ಕೆ ಭಾಷಾಏಕೀಕರಣ ಸಂಸ್ಕೃತಿಏಕೀಕರಣಗಳನ್ನಾದರೂ ಗಳಿಸಿಕೊಂಡರೆ, ಅದು ದೇಶೀಯ ಏಕೀಕರಣಕ್ಕೆ ಪೂರ್ವಪೀಠಿಕೆಯಾಗದಿರದು. ಆಂತರ ಭಾಷಾ-ಸಂಸ್ಕೃತಿಗಳ ಏಕೀಕರಣವನ್ನು ಸಾಧಿಸುವಲ್ಲಿ ನಡೆವ ಒಂದೊಂದು ಪ್ರಯತ್ನವೂ ಆವಶ್ಯಕವಾದುದು, ಅಮೋಘವಾದುದು, ಅನಿವಾರ್ಯವಾದುದು. ಆ ಧ್ಯೇಯಸಾಧನೆಯಲ್ಲಿ ಈ ಚಿಕ್ಕ ಪುಸ್ತಕವು ಎಷ್ಟು ಅಲ್ಪರೀತಿಯಿಂದ ಸಹಾಯಕವಾದರೂ ನಮ್ಮ ಶ್ರಮಕ್ಕೆ ತಕ್ಕ ಪ್ರತಿಫಲವು ದೊರೆಯಿತೆಂದು ಸಂತುಷ್ಟರಾಗುವೆವು. ಗ್ರಂಥಮಾಲಾಭಿಮಾನಿಗಳಾದ ಕರ್ಣಾಟಕ ಮಹಾಜನರು, ಈ ಭಾವನೆಯಿಂದ ಮಾತೃಭಾಷಾಸೇವೆಯಲ್ಲಿ ಮುಂದರಿಸುತ್ತಿರುವ ನಮ್ಮ ಉದ್ಯಮಕ್ಕೆ ಯೋಗ್ಯಪ್ರೋತ್ಸಾಹವನ್ನೊದಗಿಸಿ, ಈ ಸೇವಾಕಾರ್ಯಕ್ಕೆ ಸಾರ್ಥಕತೆಯನ್ನುಂಟುಮಾಡಬೇಕಾಗಿ ಪ್ರಾರ್ಥಿಸುತ್ತೇವೆ.

ಬೆಂಗಳೂರು<br>ಜೂನ್ ೧೯೩೯



ಇತಿ ಸುಜನ ವಿಧೇಯ,<br>ಯಂ. ರಾಮರಾವ್.

ಸುಬೋಧ ಕ. ಸುಮಾಂಜಲಿ ಗ್ರಂಥಮಾಲಾ



ಎರಡನೆಯ ಸಾರ್ವಭೌಮ ಪುಲಿಕೇಶಿ

ಶ್ರೀರಾಮಸಹಾಯಂ

ಸುಪ್ರಸಿದ್ಧ ಕರ್ಣಾಟಕ ವೀರಶಿರೋಮಣಿ

ಎರಡನೆಯ

# ಸಾರ್ವಭೌಮ ಪುಲಿಕೇಶಿ

---

## ಅಧ್ಯಾಯ ೧ "ಕಿಂಚಿತ್ಪೂರ್ವಕಥಾ"

'ನಮ್ಮ ಮಾತೃಭೂಮಿಯಾದ ಈ ಭರತಖಂಡವು ಸುಪ್ರಸಿದ್ಧ ಅಂಗ ವಂಗಕಳಿಂಗಾದಿ ಛಪ್ಪನ್ ಎಂದರೆ ಐವತ್ತಾರು ರಾಜ್ಯಗಳಾಗಿ ವಿಭಾಗಿಸಲ್ಪಟ್ಟು ಧರ್ಮಾತ್ಮರಾದ ರಾಜರಿಂದ ಆಳಲ್ಪಡುತ್ತಿದ್ದಿತು' ಎಂಬುದು ಇಂದು ನಿನ್ನೆಯ ಹೇಳಿಕೆಯಲ್ಲ! ಈ ಐವತ್ತಾರು ದೇಶಗಳಲ್ಲಿ ಕರ್ಣಾಟಕದ ನಾಮಧೇಯವೂ ಒಂದಾದುದರಿಂದ, ಇತರ ಹಲವು ರಾಜ್ಯಗಳಂತೆಯೇ ಕರ್ಣಾಟಕವಾದರೂ ಪ್ರಾಚೀನವಾದುದೆಂಬುದು ನಿಸ್ಸಂಶಯವಾದ ಮಾತು. ಆದರೆ ಹೀಗೆ ಪ್ರಾಚೀನವೂ ಸರ್ವಸಂಪತ್ಪೂರ್ಣವೂ ಆದ ಈ ದೇಶದ ವಿಚಾರವಾಗಿ ಈಗಿನವರಿಗೆ ಹೆಚ್ಚು ನಂಬಿಕೆಗರ್ಹವೆನ್ನಿಸುತ್ತಿರುವ ದೇಶಚರಿತ್ರೆಯ ಆಧಾರವು ದೊರೆಯುತ್ತಿಲ್ಲವಾಗಿ ಅದರ ಪ್ರಾಚೀನತೆ, ವೈಭವ, ಅದನ್ನಾಳಿದ ರಾಜಾಧಿರಾಜರ ಅದ್ಭುತಶೌರ್ಯಸಾಹಸಗಳು, ಅದರಲ್ಲಿ ಜನಿಸಿದ ಕವಿಗಳು ಗ್ರಂಥಕಾರರು ಭಕ್ತಾದಿಗಳು ಪತಿವ್ರತೆಯರು ಯೋದ್ಧರು ಮುಂತಾದವರ ವಿಚಾರವನ್ನು ಕುರಿತು ಹೇಳುವ ಸಂಗತಿಗಳು ಮುಂತಾದುವು ಕಟ್ಟುಕಥೆಗಳೋ ಎಂದು ತೋರಬಹುದು. ಹಾಗಲ್ಲ.-ನಾವು ಪರರ ಹೇಳಿಕೆಗಳನ್ನು ಕೇಳಿ ಭಾವದಾಸ್ಯಕ್ಕೀಡಾಗಿ ಅವರು ಹೇಳುವುದೆಲ್ಲವೂ ನಿಜವೆಂದು ಒಪ್ಪಿಕೊಂಡು ತಲೆಹಾಕುವು

ದಕ್ಕೆ ಮುಂಚಿತವಾಗಿ, ಸ್ವತಂತ್ರರೀತಿಯಿಂದ ಸ್ವಲ್ಪವಾದರೂ ಯೋಜನೆ
ಮಾಡುವಷ್ಟು ಶ್ರದ್ಧಾಭಕ್ತಿಗಳನ್ನು ವಹಿಸುವುದು ಉಚಿತ. 'ನಮ್ಮ ದೇಶ
ವಿಚಾರವಾಗಿ ಚರಿತ್ರೆಗಳಿಲ್ಲ' ಎಂದು ಪರರು ಹೇಳಿದೊಡನೆಯೇ, ಅದನ್ನು
ಕೇಳಿ-'ಅಕ್ಕಟಾ, ಏನಿದು ನಮ್ಮ ದುರ್ವಿಧಿಯು. ತಮ್ಮ ಚರಿತ್ರೆಗಳನ್ನು
ಬರೆದಿಡದ ನಮ್ಮ ಹಿರಿಯರು ಎಂತಹ ಬುದ್ಧಿಹೀನರು, ಎಂತಹ ಅದೂರ
ದರ್ಶಿಗಳು' ಎಂದು ಹಳಿದು ಹತಾಶರಾಗುವ ಮೊದಲು ಕಣ್ಣುತೆರೆದು ಸ್ವಲ್ಪ
ವಿಚಾರಮಾಡುವೆವಾದರೆ ಪ್ರಾಜ್ಞರಾದ ನಮ್ಮ ಹಿರಿಯರು, ಎಂತಹ ಶಾಶ್ವತ
ರೀತಿಯಲ್ಲಿ ನಮ್ಮ ದೇಶಚರಿತ್ರೆಯನ್ನು ಸೃಷ್ಟಿಸಿ ಇಟ್ಟಿರುವರೆಂಬುದನ್ನು ತಿಳಿ
ಯಬಲ್ಲೆವು. ಅವರು ದೀರ್ಘಾಲೋಚನೆಯಿಂದ ನಮಗಾಗಿ ಗಳಿಸಿಟ್ಟ ಆ
ನಿಧಿಯನ್ನು ವಿಮರ್ಶಕದೃಷ್ಟಿಯಿಂದ ಉಪಯೋಗಿಸಿಕೊಳ್ಳಬಲ್ಲೆವಾದರೆ,
ಅದರಿಂದ ಎಂತಹ ಉತ್ಕೃಷ್ಟವಾದ ಐತಿಹಾಸಿಕ ಅನುಭವವನ್ನು ಪಡೆಯ
ಬಹುದೆಂಬುದು ತಿಳಿಯಬರುವುದು.

ಹಾಗಲ್ಲದೆ, ಇಂದು ಜಗತ್ತಿನಲ್ಲಿ ನಡೆವ ಅಸಂಖ್ಯವಿಚಾರಗಳಲ್ಲಿ ಒಂದ
ನ್ನೂ ಬಿಡದೆ ಬರೆದಿಟ್ಟರೆ ಅದು ಚರಿತ್ರೆಯೆನ್ನಿಸಿಕೊಂಡೀತೆ? ಅಥವ ಬರೆದಿಟ್ಟ
ರೂ ಇನ್ನು ನಾಲ್ಕು ವರ್ಷಗಳಾದಮೇಲೆ ಅದರಿಂದ ಏನು ಪ್ರಯೋಜನವಾದೀ
ತು ? ಇನ್ನು ಹತ್ತುವರ್ಷಗಳಾದಮೇಲೆ, ಬರೀ ಕಸವೆಂದು ತಿಳಿದು ಅದನ್ನು
ಸುಡಲು ನಾವೇ ಸಿದ್ಧರಾಗುವೆವಲ್ಲವೆ ? ಹೀಗಿರುವಲ್ಲಿ ಸಾವಿರಾರು ವರ್ಷಗ
ಳಿಂದಲೂ ಅವಿರಳವಾಗಿ ನಡೆದುಬರುತ್ತಿರುವ ಲೋಕಪ್ರವಾಹದ ಅನಂತ
ವಿಚಾರಗಳನ್ನು ಬರೆದಿಡುವುದಾಗಲೀ, ಅವುಗಳನ್ನು ಶೇಖರಿಸುವುದಾಗಲೀ,
ರಕ್ಷಿಸುವುದಾಗಲೀ ಹೇಗೆ ಸಾಧ್ಯ ?—ಒಂದುವೇಳೆ ಹಾಗೆ ಮಾಡುವುದಾ
ದರೂ ಅದರಿಂದ ಪ್ರಾಪ್ತವಾಗುವ ಪುರುಷಾರ್ಥವೇನು ? ಹಾಗೆ ಲೆಕ್ಕ
ಮಿತಿಯಿಲ್ಲದೆ ಬರೆದಿಡುವ ವಿಚಾರಗಳೆಲ್ಲಾ ಇತಿಹಾಸವಾಗಬಲ್ಲುವೆ? ದೇಶ
ದಲ್ಲಿ ನಡೆವ ಅತಿಮುಖ್ಯವಿಚಾರಗಳು ಮಾತ್ರವೇ ಇಂದು ಹೇಗೆ ಗ್ರಂಥಸ್ಥ
ವಾಗಿ ನಿಲ್ಲಲು ಅರ್ಹವಾಗಿರುವುವೋ ಹಾಗೆಯೇ ಪೂರ್ವದಲ್ಲಿ ನಡೆದು ಅತಿ
ಮುಖ್ಯವೆಂದು ಗಣ್ಯವಾದ ಸಂಗತಿಗಳನ್ನೂ ನಮ್ಮ ಪೂರ್ವಿಕರು ಬೇರೊಂ
ದು ಬಗೆಯಿಂದ ಸಂಗ್ರಹಿಸಿಟ್ಟರು. ಈಗಿನಂತೆ ಆಗ ಜಗತ್ತಿನ ದೇಶಗಳು
ಜನಾಂಗ ಮುಂತಾದುವುಗಳಲ್ಲಿ ಕೇಂದ್ರೀಕರಣದೃಷ್ಟಿಯಿಲ್ಲದೆ ಒಂದೊಂದು

ಸ್ಥಳವೂ ತನ್ನತನ್ನಮಟ್ಟಿಗೆ ಸ್ವಾತಂತ್ರ್ಯವನ್ನು ಅನುಭವಿಸುತ್ತಿದ್ದುದರಿಂದ, ಆಯಾ ಪ್ರಾಂತಕ್ಕೆ ಸಂಬಂಧಿಸಿದ ಚಾರಿತ್ರಿಕ ವಿಚಾರಗಳು ಆಯಾ ಪ್ರಾಂತಗಳಲ್ಲೇ ಕಲ್ಪಿಸಿಡಲ್ಪಟ್ಟುವು. ಈಗಿನ ಸಮಗ್ರ ಸಾರ್ವದೇಶಿಕ ಚರಿತ್ರೆಯು ಬೇಕಾಗಿದ್ದರೆ ಆ ಸಾಧನಗಳಿಂದಲೇ ಶೋಧಿಸಿ ತೆಗೆದು ದೇಶಚರಿತ್ರೆಯನ್ನು ಸಿದ್ಧಪಡಿಸಬೇಕಾಗಿದೆ. ಅಷ್ಟುಮಾತ್ರ ಪರಿಶ್ರಮ ಮಾಡದಿದ್ದರೆ, ಆ ಬಗೆಯಿಂದ ಸಾಧನಗಳನ್ನೊದಗಿಸಿಟ್ಟ ಪೂರ್ವಿಕರ ಪ್ರಯತ್ನಕ್ಕಾಗಲೀ ಆಧುನಿಕ ವಿದ್ಯಾಪ್ರಭಾವದಿಂದ ವಿಮರ್ಶಾಸಾಮರ್ಥ್ಯವನ್ನು ಪಡೆದಿರುವೆವೆಂದು ಹೆಮ್ಮೆಪಡುವ ನಮ್ಮ ತಿಳಿವಳಿಕೆಗಾಗಲಿ ಏನು ಪ್ರಯೋಜನವಾದಂತಾಯಿತು ?

ಹೀಗೆ ಹೇಳಿದುದನ್ನು ಕೇಳಿ, ಇತಿಹಾಸರಚನೆಗೆ ಉಪಯೋಗವಾಗುವ ಎಂತಹ ಸಾಧನಸಾಮಗ್ರಿಗಳ ಅಮೌಲ್ಯಭಂಡಾರವನ್ನು ಪೂರ್ವಿಕರು ಯಾವ ಗಿರಿಗುಹೆಗಳಲ್ಲಿ ಹುದುಗಿಸಿಟ್ಟಿರುವರೋ ಎಂಬ ಸಂಗತಿಯನ್ನು ತಿಳಿಯಲು ವಾಚಕಮಹಾಶಯರು ಕುತೂಹಲಗೊಂಡಿರಬಹುದು. ಅವು ಎಲ್ಲೂ ಹುದುಗಿಸಿಡಲ್ಪಟ್ಟಿಲ್ಲ; ಮೇಲೆಯೇ ಇವೆ. ನಮ್ಮ ದೇಶದಲ್ಲಿ ಹಲವು ಸ್ಥಳಗಳಲ್ಲಿ ಪ್ರಾಚೀನದೇವಾಲಯಗಳುಂಟಲ್ಲವೆ ? ಅವುಗಳ ಬಳಿ ಶಿಲಾಶಾಸನಗಳು ತಪ್ಪದೆ ಇರುವುವು. ಅವುಗಳಲ್ಲಿ ಆ ದೇವಸ್ಥಾನವನ್ನು ಕಟ್ಟಿಸಿದ ಪ್ರಭುವಿನ ಹೆಸರು, ವಂಶ, ಕಾಲ, ಆತನ ಆಡಳಿತಕ್ಕೆ ಒಳಪಟ್ಟಿದ್ದ ರಾಜ್ಯವಿಸ್ತಾರ, ಆತನ ಕಾಲದ ಸಾಮಾನ್ಯ ಸ್ಥಿತಿಗತಿಗಳು, ಧಾರ್ಮಿಕಸಂಗತಿಗಳು ಮುಂತಾದುವು ವರ್ಣಿಸಲ್ಪಡುವವು. ನಮ್ಮ ಸರಕಾರದವರು ದೇಶದ ವಿವಿಧಭಾಗಗಳಲ್ಲಿ ದೊರೆತ ಅಂತಹ ಸುಮಾರು ಎಂಟುಸಾವಿರ ಶಿಲಾಶಾಸನಗಳನ್ನು ಕಂಡುಹಿಡಿದು, ಅಧಿಕದ್ರವ್ಯವ್ಯಯದಿಂದ ಅವುಗಳನ್ನು ಛಾಪಿಸಿ ಗ್ರಂಥರೂಪದಲ್ಲಿ ದೊರೆವಂತೆ ಸಿದ್ಧಪಡಿಸಿಟ್ಟಿದ್ದಾರೆ. ಅವುಗಳನ್ನು ಉಪಯೋಗಿಸಿಕೊಳ್ಳಲಿಚ್ಛಿಸುವ ದೇಶಾಭಿಮಾನಿಗೆ ಚಾರಿತ್ರಿಕ ಸಾಮಗ್ರಿಯು ಒದಗಲಾರದೆ ! ರಾಜರು, ಆ ಕಾಲದಲ್ಲಿ ದೇವಸ್ಥಾನಗಳಿಗಾಗಲೀ, ವಿದ್ವಾಂಸರಿಗಾಗಲೀ, ಧಾರ್ಮಿಕಸಂಸ್ಥೆಗಳಿಗಾಗಲೀ ಭೂದಾನಾದಿಗಳನ್ನು ಕೊಟ್ಟರೆ, ಆ ಸಂಗತಿಯನ್ನು ದಪ್ಪದ ತಾಮ್ರದ ತಗಡುಗಳಮೇಲೆ ಬರೆಸಿಕೊಡುತ್ತಿದ್ದ ಪದ್ಧತಿಯಿದ್ದಿತು. ಅವುಗಳಮೇಲೂ ಮೇಲ್ಕಂಡ ವಿಚಾರಗಳೆಲ್ಲವೂ-ಬರೆಯಲ್ಪಡುತ್ತಿದ್ದುವು. ಅಂತಹ ದಾನಶಾಸನಗಳು ದೇಶದ ನಾನಾಕಡೆಯಲ್ಲಿ ಈಗಲೂ

ವಿಶೇಷವಾಗಿ ದೊರೆತು 'ಶಾಸನ ಇಲಾಖೆ'ಯುವರಿಂದ ಪ್ರಕಟವಾಗಿವೆ. ಮಾತ್ರವಲ್ಲ. ಬೇರೆಬೇರೆ ಕಾಲಗಳಲ್ಲಿ ದೇಶದ ನಾನಾಭಾಗಗಳಲ್ಲಿ ರಾಜ್ಯವಾಳುತ್ತಿದ್ದ ಹಲವು ಮಂದಿ ರಾಜಪುತ್ರರು, ತಮ್ಮ ಹೆಸರಿನಿಂದ ನಾಣ್ಯಗಳನ್ನು ಹೊರಡಿಸಿ, ದೇಶದಲ್ಲಿ ಅವುಗಳನ್ನು ಉಪಯೋಗಿಸುವಂತೆ ಆಜ್ಞಾಪಿಸುತ್ತಿದ್ದರು. ಅಂತಹ ಪುರಾತನ ನಾಣ್ಯಗಳಲ್ಲಿ ಹಲವು ಬಗೆಯವು ದೊರೆವುದರಿಂದ ವಿಮರ್ಶಕಬುದ್ಧಿಯ ಐತಿಹಾಸಿಕನು ಅವುಗಳಿಂದಲೂ ಅನೇಕ ಚರಿತ್ರಾಂಶಗಳನ್ನು ಸಂಗ್ರಹಿಸಬಹುದು. ಅಲ್ಲದೆ, ಮೇಲೆ ಹೇಳಿದಂತೆ, ಬೇಲೂರು ಹಳೇಬೀಡು ಮುಂತಾದ ಸ್ಥಳಗಳಲ್ಲಿರುವಂತೆ ದೇಶದ ಎಲ್ಲಾ ಕಡೆಗಳಲ್ಲೂ ಪ್ರಾಚೀನಶಿಲ್ಪಿಗಳಿಂದ ಕಟ್ಟಲ್ಪಟ್ಟಿರುವ ದೇವಾಲಯಗಳ ವಿಚಾರವನ್ನು ಆದ್ಯಂತ ಶೋಧಿಸಿ ಬರೆದಿರುವ ಡಾಕ್ಟರ್ ಫರ್ಗ್ಯೂಸನ್, ಡಾ|| ಆನಂದಕುಮಾರಸ್ವಾಮಿ ಮುಂತಾದ ಸುಪ್ರಸಿದ್ಧ ಶಿಲ್ಪವಿದ್ಯಾಪಾರಂಗತರ ವಿಮರ್ಶಕಗ್ರಂಥಗಳಿಂದಲೂ ದೇಶಚರಿತ್ರೆಗೆ ಸಂಬಂಧಿಸಿದ ಅನೇಕ ಸಂಗತಿಗಳನ್ನು ಸಂಗ್ರಹಿಸಬಹುದು. ಇಷ್ಟುಮಾತ್ರವೇ ಅಲ್ಲ, ವಿವಿಧಕಾಲದೇಶಗಳಲ್ಲಿ ಜನಿಸಿ ತಮ್ಮ ಪ್ರತಿಭೆಯಿಂದ ಮಹಾಕಾವ್ಯಗಳನ್ನು ರಚನೆಮಾಡಿರುವ ಕವಿಶೇಖರರ ಗ್ರಂಥಗಳನ್ನು ಐತಿಹಾಸಿಕ ದೃಷ್ಟಿಯಿಂದ ಓದುತ್ತಾ ವಿಷಯಸಂಗ್ರಹಣ ಮಾಡುವುದರಿಂದ ಅನೇಕ ಚಾರಿತ್ರಿಕಾಂಶಗಳನ್ನು ದೊರೆಕಿಸಿಕೊಳ್ಳಬಹುದು. ಚಂದ್ರಗುಪ್ತ ಅಶೋಕ ಮುಂತಾದ ಪ್ರಾಚೀನ ಚಾರಿತ್ರಿಕ ಪುರುಷರ ಕಾಲದಿಂದಲೂ, ಪರದೇಶೀ ಪ್ರವಾಸಿಗಳು ಈ ದೇಶದ ಅನೇಕ ಭಾಗಗಳಲ್ಲಿ ಸಂಚರಿಸಿ, ತಾವು ಕಂಡುಕೇಳಿದ ಹಲವು ಸಂಗತಿಗಳನ್ನು ಬರೆದಿಟ್ಟಿದ್ದಾರೆ. ಅವರ ಅಂತಹ ಅಭಿಪ್ರಾಯಗಳೆಲ್ಲವೂ ಗ್ರಂಥರೂಪದಲ್ಲಿ ಪ್ರಕಟವಾಗಿವೆ. ಶ್ರದ್ಧಾಪೂರ್ವಕ ಅವುಗಳನ್ನು ವಿಮರ್ಶಿಸತೊಡಗುವ ಐತಿಹಾಸಿಕ ವಿದ್ಯಾರ್ಥಿಗೆ ದೇಶಚರಿತ್ರೆಗೆ ಬೇಕಾದ ಅನೇಕಾನೇಕ ಸಂಗತಿಗಳು ಅವುಗಳಿಂದಲೂ ದೊರೆಯದಿರಲಾರವು. ಸಾಲದುದಕ್ಕೆ ನಮ್ಮಲ್ಲಿ ಧಾರ್ಮಿಕ ಪುರುಷರನೇಕರು ಜನ್ಮಿಸಿ ತಮ್ಮ ಜೀವಿತಧ್ಯೇಯಗಳಾದ ಧರ್ಮಸ್ಥಾಪನೆ-ಧರ್ಮಪ್ರಚಾರ ಮುಂತಾದ ಕಾರ್ಯಗಳಿಗಾಗಿ ದೇಶದ ಅನೇಕ ಭಾಗಗಳಲ್ಲಿ ಸಂಚರಿಸಿದಾಗ ನಡೆಸಿದ ಹಲವು ಸಂಗತಿಗಳನ್ನು ಆಯಾ ಸ್ಥಳಪುರಾಣಗಳಿಂದ ತಿಳಿಯಬಹುದಾದ ಅವಕಾಶವುಂಟು. ಅಲ್ಲದೆ ಅನೇಕ ಸ್ಥಳಗಳಲ್ಲಿ ನೆಡಲ್ಪಟ್ಟಿರುವ

ವೀರಗಲ್ಲು-ಮಹಾಸತಿ ಕಲ್ಲು ಎಂಬುವು ಆಯಾ ಸ್ಥಳಗಳಲ್ಲಿ ನಡೆದ ಯುದ್ಧ, ಅವುಗಳಲ್ಲಿ ವಿಜಯಿಗಳಾದ ವೀರರು, ಅಥವ ಸಹಗಮನಮಾಡಿದ ಪತಿವ್ರತೆಯರ ವಿಚಾರ ಮುಂತಾದ ಸಂಗತಿಗಳನ್ನು ಹೊರಗೆಡಹಲು ಸಾಧಕಗಳಾಗಿ ನಿಂತಿವೆ.

ಪ್ರಿಯವಾಚಕ ಮಹಾಶಯರೇ! ಸುಮ್ಮನೆ ಒಣಡಂಭಕ್ಕಾಗಿ ಹೇಳಿಕೊಳ್ಳುವ ಮಾತಲ್ಲದೆ, ಜನ್ಮಭೂಮಿಯ ಪ್ರಾಚೀನವೈಭವದ ಮಹತ್ವಗಳನ್ನು ಅರಿಯಬೇಕೆಂದು ಹೃದಯವೇದನೆಗೊಂಡು ಕಾತುರಗೊಳ್ಳುತ್ತಿರುವ ಯಾವನಾದರೂ, ಇಷ್ಟು ಸಾಧನಗಳನ್ನು ಇಟ್ಟುಕೊಂಡು ದೇಶಚರಿತ್ರೆಯನ್ನು ಸಿದ್ಧಗೊಳಿಸಲು ಸಾಧ್ಯವಿಲ್ಲವೆ? 'History' ಇತಿಹಾಸ-ಚರಿತ್ರೆಯ ಭಾಗವನ್ನೇ ಐಚ್ಛಿಕವಾಗಿ ತೆಗೆದುಕೊಂಡು ಪಟ್ಟಪರೀಕ್ಷೆಗಳನ್ನು ಕೊಟ್ಟಿರುವ ನಮ್ಮಲ್ಲಿಯ ಹಲವುಮಂದಿ ಪ್ರಾಜ್ಞರು ಇಂದೇನು ಮಾಡುತ್ತಾ ಕುಳಿತಿರುವರು? ತಾವು ವಾಸಿಸುತ್ತಿರುವ ಗ್ರಾಮದ, ತಾಲ್ಲೂಕಿನ, ಪ್ರಾಂತದ ಪೂರ್ವಚರಿತ್ರೆ ಅದರ ಪ್ರಾಚೀನ ವೈಭವ ಮುಂತಾದ ಸಂಗತಿಗಳನ್ನು ಶೋಧಿಸಿ ತೆಗೆದು ಪ್ರಕಟಗೊಳಿಸಲಾಗದೆ? ಕಲಿತವಿದ್ಯೆಗೆ ಕೂಳಿನ ಹವಣಿಕೆಯೇ ಮುಖ್ಯಪ್ರಯೋಜನವೆಂದು ವಿದ್ಯಾರ್ಥಿಗಳಾದವರೇ ಭಾವಿಸಿ ತಟಸ್ಥರಾಗುವುದಾದರೆ, ಇನ್ನು ದೇಶವಿಚಾರವನ್ನೇನು ಕುರಿಮೇಕೆಗಳೂ, ಕಾಗೆಕೋಳಿಗಳೂ ಗಮನಿಸಬಲ್ಲುವೆ? 'ನನ್ನ ಜೀವಿತವನ್ನು ದೇಶಾಭಿವೃದ್ಧಿಕರವಾದ ಈಯೊಂದು ಕಾರ್ಯಕ್ಕಾಗಿ ಮೀಸಲಾಗಿಟ್ಟು ಪರಮಾವಧಿ ಪರಿಶ್ರಮಮಾಡುವೆನು' ಎಂದು ಪ್ರತಿಜ್ಞಾಪೂರ್ವಕ ದೇಶಸೇವೆಗೆ ಸಿದ್ಧನಾಗುವ ತರುಣವೀರನೊಬ್ಬನು-ಒಬ್ಬನು, ನಮ್ಮ ದೇಶದಲ್ಲೇ ಇರಲಾರನೆ? ಇದೇನು, ಇಂತಹ ದುರ್ದಸೆಯೇ ಕರ್ನಾಟಕಕ್ಕೆ? ಅಕ್ಕಟಾ!

ಸ್ವಾಭಿಮಾನವಣಗಿ, ಮಹತ್ವಾಕಾಂಕ್ಷೆಯುಡುಗಿ, ಶ್ರದ್ಧಾಭಕ್ತಿಗಳು ಸ್ವಾರ್ಥಸಾಧನೆಗೆ ಬಲಿಬಿದ್ದು, ನಮ್ಮ ಕರ್ನಾಟಕ ತರುಣರಲ್ಲಿ,-ಹುಟ್ಟಿದ ತಪ್ಪಿಗೆ ಹೊಟ್ಟೆಗೊಂದು ಮುಷ್ಟಿ ಹಿಟ್ಟನ್ನು ಸಂಪಾದಿಸುವಿಕೆಯೇ ಪರಮಾವಧಿ ಪ್ರಯೋಜನವೆಂದು ಭಾವನೆಯಿರುವ ಈ ಕಾಲದಲ್ಲಿ, ಮೇಲ್ಕಂಡಂತಹ ಮಹತ್ವದ ವಿಚಾರಗಳನ್ನು ಕುರಿತು ಹೇಳುವ ಮಾತುಗಳು ದುರ್ಭಾವನೆಯಿಂದ ಅರ್ಥವಾದರೆ ಅದರಲ್ಲಿ ಆಶ್ಚರ್ಯವಿಲ್ಲ. ನಮ್ಮಲ್ಲಿ ಅಶಕ್ತತೆಯೂ

ತಾಟಸ್ಥ್ಯಭಾವವೂ ಎಷ್ಟು ಮಟ್ಟಿಗೆ ಬೇರುಬಿಟ್ಟುಕೊಂಡಿವೆ ಎಂಬುದರ ಕಲ್ಪನೆಯು ನಮಗೆ ಬಾರದಿದ್ದರೆ ಅದರ ನಿವಾರಣೋಪಾಯವು ಸ್ಫುರಿಸಲಾರದು; ಪ್ರಯತ್ನವೂ ಪ್ರಾರಂಭಿಸಲಾರದು. ಚಿಕಿತ್ಸೆಯಾದರೂ ರೋಗದ ಸ್ಥಿತಿಯನ್ನನುಸರಿಸಿ ಮಾಡಬೇಕಲ್ಲವೆ? ದುರಂತರೋಗಗಳು ಮಹಾತೀಕ್ಷ್ಣಗಳಾದ ಗಂಡೌಷಧಿಗಳಿಂದಲ್ಲದೆ ಪರಿಹಾರವಾಗಲಾರವು. ಅಪಕ್ವತೆಯು ನೀಗಿ, ಸದ್ಭಾವಗಳು ಬೆಳೆದು, ಕರ್ಣಾಟಕರೂ ಜಗದ ಜನಾಂಗಗಳಲ್ಲಿ ಮನುಷ್ಯರೆಂದು ಪರಿಗಣಿತರಾಗಬೇಕಾದರೆ, ರೋಗಗ್ರಸ್ತವಾದ ಅಶಕ್ತದೇಹದಿಂದ ಮುಂದರಿಯುವುದು ಸಾಧ್ಯವಿಲ್ಲ. ಅತ್ಯಂತ ತಾಪದಾಯಕವಾಗಿದ್ದರೂ, ಶಸ್ತ್ರಚಿಕಿತ್ಸೆಗಾದರೂ ಒಡಂಬಟ್ಟು ರೋಗವನ್ನು ಪರಿಹರಿಸಿಕೊಳ್ಳತಕ್ಕುದು ಕರ್ತವ್ಯವು. ಸದ್ಭಾವದಿಂದ ಹೇಳಲ್ಪಡುವ ಈ ಮಾತುಗಳು, ಕಿವಿಗೆ ಸ್ವಲ್ಪ ಕಟುವೆಂದು ತೋರಬಹುದು. ಆದರೂ ಸದುದ್ದೇಶಪೂರಿತಗಳಾದುದರಿಂದ ಕ್ಷಮಾರ್ಹವೆನ್ನಲು ಸಂಶಯವಿಲ್ಲವಲ್ಲವೆ?

ಪ್ರಕೃತ ಈವರೆಗೆ ದೊರೆತು ಪ್ರಕಟವಾಗಿರುವ ಚರಿತ್ರಾಂಶಗಳಿಂದಲೇ ಕರ್ಣಾಟಕವು ಪೂರ್ವದಲ್ಲಿ ಬಹು ವೈಭವಪೂರ್ಣಸ್ಥಿತಿಯನ್ನು ಹೊಂದಿದ್ದಿತೆಂಬುದು ಸ್ಪಷ್ಟವಾಗಿದೆ. ದಕ್ಷಿಣದಲ್ಲಿ ಕಾವೇರಿಯೂ ಉತ್ತರದಲ್ಲಿ ಗೋದಾವರಿಯೂ ಪೂರ್ವಪಶ್ಚಿಮಗಳಲ್ಲಿ ಸಮುದ್ರಗಳೂ ಮೇರೆಗಳಾಗಿ ಕರ್ಣಾಟಕ ರಾಜ್ಯವು ಕ್ರಿಸ್ತಶಕ ಒಂಬತ್ತನೆಯ ಶತಮಾನದಲ್ಲೇ ಅತಿಶಯ ವೈಭವಸಂಪನ್ನತೆಯಿಂದ ಮೆರೆಯುತ್ತಿದ್ದಿತೆಂಬುದು ಸುಪ್ರಸಿದ್ಧವಾಗಿದೆ. ಸುಮಾರು ನಾಲ್ಕನೆಯ ಶತಮಾನದಿಂದಲೂ ಕರ್ಣಾಟಕದ ವಿವಿಧಭಾಗಗಳಲ್ಲಿ ಆಳಿದ ಕರ್ಣಾಟಕ ರಾಜವಂಶಗಳಲ್ಲಿ, ಕದಂಬರು ಗಂಗರಸರು, ಚಾಲುಕ್ಯರು, ಕಾಲಚೂರ್ಯರು, ಯಾದವರು, ಹೊಯ್ಸಳರು, ವಿಜಯನಗರದ ಅರಸರು ಇವರೇ ಸುಪ್ರಸಿದ್ಧರು. ಈ ಒಂದೊಂದು ವಂಶದಲ್ಲೂ ಹಲವು ಮಂದಿ ಧೈರ್ಯ ವೀರ್ಯ ಔದಾರ್ಯಗುಣವಿಶಿಷ್ಟರಾದ ಮಹೀಂಧರರು ಪ್ರಭುತ್ವ ಮಾಡಿರುವರು. ನಮ್ಮ ಕಥಾನಾಯಕನು, ಬಾದಾಮಿನಗರದಲ್ಲಿ ರಾಜ್ಯಭಾರಮಾಡಿದ ಚಾಲುಕ್ಯವಂಶದಲ್ಲಿ ಉದ್ಭವಿಸಿದವನಾದುದರಿಂದ ಆ ಮಹಾಪುರುಷನ ವಂಶವರ್ಣನೆ ರಾಜ್ಯಭಾರ ಮುಂತಾದ ಕೆಲವಿಷಯಗಳನ್ನು ಈ ಸಣ್ಣ ಚರಿತ್ರೆಯಲ್ಲಿ ಕೊಡಲೆಳಿಸಿದ್ದೇವೆ. ವಾಚಕಮಹಾಶಯರು ಸಾವಧಾನದಿಂದ ಮುಂದರಿಸಬೇಕು.

ಕ್ರಿಸ್ತಶಕ ಆರನೆಯ ಶತಮಾನದ ಪ್ರಾರಂಭಕಾಲಕ್ಕೆ ಕರ್ನಾಟಕದಲ್ಲಿ ಕದಂಬರು ಬನವಾಸಿಯಲ್ಲೂ, ಪಲ್ಲವರು ಬಾದಾಮಿಯಲ್ಲೂ, ಗಂಗರಸರು ಈಗಿನ ಮೈಸೂರು ದೇಶದ ಕೋಲಾರ ತಲಕಾಡು ಪ್ರಾಂತಗಳಲ್ಲೂ ರಾಜ್ಯವಾಳುತ್ತ, ತಮ್ಮತಮ್ಮ ಸ್ವಾಮ್ಯಸ್ಥಾಪನೆಗಾಗಿ ಸದಾ ಪರಸ್ಪರ ಬಡಿದಾಡುತ್ತ ಇದ್ದರು. ಈ ಮೂರು ರಾಜವಂಶಗಳಲ್ಲಿ, ಕದಂಬರ ಬಳಿ, ಸತ್ಯಾಶ್ರಯ ದೇವನೆಂಬೊಬ್ಬ ವೀರನು ದಂಡನಾಯಕಸ್ಥಾನವನ್ನು ಪಡೆದು ಅಧಿಕಾರ ಮಾಡುತ್ತಿದ್ದನು. ಸರೀಕರಾದ ನೆರೆಯ ಪಲ್ಲವ ಗಂಗರಸರೊಂದಿಗೆ ಪ್ರಾಪ್ತವಾಗುತ್ತಿದ್ದ ನಿರಂತರಯುದ್ಧದಿಂದ ದಿನದಿನಕ್ಕೆ ಜನಧನಗಳನ್ನು ಕಳೆದುಕೊಂಡು ಕದಂಬವಂಶದ ಕೊನೆಕೊನೆಯ ಅರಸರು ಬಲಹೀನರಾಗುತ್ತ ಸಾಗಿದ್ದರು. ರಾಜನು ಸತ್ವಹೀನನಾಗುತ್ತಿರುವಾಗ ರಾಜ್ಯದಲ್ಲಿನ ಅಧಿಕಾರ ವರ್ಗವು ಮನಬಂದಂತೆ ನಡೆಯತೊಡಗಿ, ಸ್ವಾಧಿಕಾರಸ್ಥಾಪನೆಗಾಗಿ ಪ್ರಯತ್ನಿಸುವುದು ಸ್ವಾಭಾವಿಕವಷ್ಟೆ! ಈ ಕಾಲದಲ್ಲಿ, ರಾಜ್ಯದಲ್ಲಿ ದಂಡಾಧಿಕಾರ ಸ್ಥಾನವನ್ನಲಂಕರಿಸಿದ್ದ ಸತ್ಯಾಶ್ರಯನ ಮಗ-ಮೊಮ್ಮಕ್ಕಳಾದ ಜಯಸಿಂಹ-ರಣರಾಗರು ಕ್ರಮವಾಗಿ ಹೆಚ್ಚು ಹೆಚ್ಚು ಪ್ರಬಲರಾಗುತ್ತ ಬಂದರು. ಮುಂದೆ ರಣರಾಗನ ಮಗ ಒಂದನೆಯ ಪುಲಿಕೇಶಿಯು ಕದಂಬವಂಶದವರನ್ನು ತನ್ನ ಶೌರ್ಯಪ್ರತಾಪಗಳಿಂದ ಓಡಿಸಿ ತಾನೇ ರಾಜಸಿಂಹಾಸನವನ್ನು ಆಕ್ರಮಿಸಿದನು.

ರಾಜ್ಯಾಧಿಪತ್ಯವು ಪ್ರಾಪ್ತವಾದಮೇಲೆ (ಕ್ರಿ. ಶ. ೫೫೦) ಪ್ರಭುವಿಗೆ ಅದಕ್ಕೆ ತಕ್ಕ ಬಿರುದಾವಳಿಗಳೂ ವಂಶಗೋತ್ರಶಾಖೆಗಳೂ ಇತರ ಹಲವು ವೈಭವಗಳೂ ಅವಶ್ಯಕವೆನ್ನಿಸುತ್ತವೆಯಷ್ಟೆ! ಚಾಲುಕ್ಯವಂಶದಲ್ಲಿ ರಾಜಸಿಂಹಾಸನವನ್ನು ಸಂಪಾದಿಸಿ ವಂಶಕರ್ತನಾದುದರಿಂದ ಆತನ ಕಾಲದಿಂದ ಮುಂದೆ ಈ ವಂಶದವರ ಗೋತ್ರಾದಿ ಚರಿತ್ರೆಯು ತಿಳಿಯಲು ಅವಕಾಶವಾಗಿದೆ. ಈ ಚಾಲುಕ್ಯ ಅರಸರು ತಮ್ಮದು ಮಾನವ್ಯಗೋತ್ರವೆಂದೂ, ಹಾರೀತವಂಶವೆಂದೂ ಹೇಳಿಕೊಂಡಿದ್ದಾರೆ. ಈ ವಂಶದ ಪ್ರಾಚೀನತೆಯನ್ನು ತಿಳಿಸುವ ಧಾರವಾಡ ಜಿಲ್ಲಾ ಬಂಕಾಪುರ ತಾಲೂಕು ಕಲ್ಯಾಣದಲ್ಲಿ ದೊರೆತ ಒಂದು ಶಾಸನದ ವಿಚಾರವನ್ನು ಇಲ್ಲಿ ಹೇಳುವುದು ಅಪ್ರಕೃತವೆನ್ನಿಸಲಾರದು. ಸ್ವಾಯಂಭೂ ಮನುವಿನ ಮಗನು, ಹರಿತನೆಂತಲೂ, ಆತನ

ಮಗ ಪಂಚಶಿಖಿ ಹಾರೀತನೆಂತಲೂ, ಈ ಹಾರೀತನು ಸೂರ್ಯನಿಗೆ ಅರ್ಘ್ಯವನ್ನು ಬಿಡುವಾಗ, ಆತನ ಚುಲುಕ ಅಥವ ಬೊಗಸೆಯಿಂದ ವಿಷ್ಣುವರ್ಧನ-ವಿಜಯಾದಿತ್ಯನೆಂಬ ಪುರುಷನೊಬ್ಬನು ಹುಟ್ಟಿದನೆಂದೂ, ಆದುದರಿಂದ ಇವರಿಗೆ ಹಾರೀತಪುತ್ರರೆಂಬ ಹೆಸರು ಬಂತೆಂದೂ ಆ ಶಾಸನದಿಂದ ವ್ಯಕ್ತವಾಗುತ್ತದೆ. ಇವರು ಕಾರ್ತಿಕೇಯನ ಉಪಾಸಕರಾಗಿದ್ದರೆಂದು ಪ್ರಸಿದ್ಧವಿದೆ. ಬ್ರಾಹ್ಮೀ ಮಾಹೇಶ್ವರೀ ಕುಮಾರೀ ವೈಷ್ಣವೀ ವಾರಾಹೀ ಇಂದ್ರಾಣೀ ಚಾಮುಂಡಾ ಎಂಬ ಸಪ್ತಮಾತೃಕೆಗಳನ್ನು, ತಮ್ಮ ರಕ್ಷಕದೇವತೆಗಳೆಂದು ನಂಬಿ ಇವರು ಪೂಜಿಸುತ್ತಿದ್ದರು. ಈ ವಂಶೀಕರಿಗೆ ವರಾಹವೇ ಲಾಂಛನವು. ಈ ವಂಶದಲ್ಲಿ ಮುಂದೆ ರಾಜರಾದ ವಿನಯಾದಿತ್ಯ ವಿಜಯಾದಿತ್ಯರೆಂಬುವರು, ಉತ್ತರಾಪಥದ ರಾಜರನ್ನು ಗೆದ್ದು ಪಾಲಿಧ್ವಜವನ್ನೂ, ಗಂಗಾ ಯಮುನಾ ನದಿಗಳ ಮೂರ್ತಿಗಳನ್ನೂ ಸಂಪಾದಿಸಿದರು. ಇವರ ಕುಲದೇವರು ವಿಷ್ಣುವೇ ಆದರೂ, ಇವರ ಆಳ್ವಿಕೆಯಲ್ಲಿ ವೈಷ್ಣವರೂ, ಶೈವರೂ, ಜೈನರೂ ಸಮಾನವಾಗಿ ಆಶ್ರಯವನ್ನು ಹೊಂದಿದ್ದರು.

ಚಾಲುಕ್ಯವಂಶದ ಉತ್ಪತ್ತಿಯ ವಿಷಯವಾಗಿ ೧೧ನೆಯ ಶತಮಾನದ ಒಂದು ಶಿಲಾಲೇಖನದಲ್ಲಿ ಇನ್ನೊಂದು ಕಥೆಯು ಹೇಳಲ್ಪಟ್ಟಿದೆ. ಅದರಲ್ಲ ಚಾಲುಕ್ಯ ರಾಜಮನೆತನದವರು ಚಂದ್ರವಂಶದವರೆಂದು ಉಲ್ಲೇಖವಿದೆ. "ಶ್ರೀಮಹಾವಿಷ್ಣುವಿನ ನಾಭೀಕಮಲದಿಂದ ಹುಟ್ಟಿದ ಬ್ರಹ್ಮನಿಂದ ಅತ್ರಿಮಹರ್ಷಿಯೂ, ಅವನಿಂದ ಚಂದ್ರನೂ, ಅವನಿಂದ ಬುಧನೂ, ತರುವಾಯ ಪುರೂರವ ಆಯು ಆ ನಹುಷ ಮುಂತಾದ ೫೯ ಮಂದಿ ರಾಜರು ಅಯೋಧ್ಯೆಯಲ್ಲಿ ಆಳಿದರು. ಅವರಲ್ಲಿ ಕೊನೆಯವನೇ ಶತಾನೀಕನ ಪುತ್ರ ಉದಾಯನನೆಂಬುವನು. ಈ ವಂಶದವರಲ್ಲಿ ಒಬ್ಬನಾದ ವಿಜಯಾದಿತ್ಯನೆಂಬಾತನು ಹೊಸ ರಾಜ್ಯಗಳನ್ನು ಜಯಿಸಬೇಕೆಂಬ ಅಪೇಕ್ಷೆಯಿಂದ ನರ್ಮದೆಯನ್ನು ದಾಟಿ ದಕ್ಷಿಣದೇಶಕ್ಕೆ ಬಂದನು. ಆತನಿಗೂ ತ್ರಿಲೋಚನಪಲ್ಲವನೆಂಬ ರಾಜನಿಗೂ ಯುದ್ಧವಾಗಿ ವಿಜಯಾದಿತ್ಯನು ಆ ರಣದಲ್ಲೇ ಮಡಿದನು. ಆಗ್ಗೆ ಗರ್ಭಿಣಿಯಾಗಿದ್ದ ಅವನ ರಾಣಿಯು ತನ್ನ ಕೆಲಮಂದಿ ಪರಿವಾರದೊಂದಿಗೆ, ಶತ್ರುಗಳ ಬಳಿಗೆ ಸಿಕ್ಕದೆ ಪಲಾಯನವಾಗಿ ವಿಷ್ಣುಭಟ್ಟ ಸೋಮಯಾಜಿ ಎಂಬ ಒಬ್ಬ ಬ್ರಾಹ್ಮಣನ ಮನೆಹೊಕ್ಕಳು. ಮಹಾಸಾಧುಪ್ರಕೃ

ತಿಯ ಆ ಬ್ರಾಹ್ಮಣನು ಅನಾಥಳಾದ ಆಕೆಯ ಸ್ಥಿತಿಗಾಗಿ ಮರುಗಿ, ತನ್ನ ಮನೆಯಲ್ಲೇ ಇಟ್ಟುಕೊಂಡು ಕಾಪಾಡಿದನು. ಮುಂದೊಂದು ಸುದಿನದಲ್ಲಿ ಆ ರಾಜಪತ್ನಿಯು ಪುರುಷಶಿಶುವನ್ನು ಹೆತ್ತಳು. ಆ ಶಿಶುವಿನ ಸುಲಕ್ಷಣಗಳನ್ನು ಕಂಡು ಪರಮಾನಂದಪಟ್ಟ ಆ ಬ್ರಾಹ್ಮಣನು, ಅದಕ್ಕೆ ವಿಷ್ಣುವರ್ಧನನೆಂಬ ನಾಮಧೇಯವನ್ನಿಟ್ಟು ಬಹು ಪ್ರೀತಿಯಿಂದ ಆ ತಾಯಿಮಕ್ಕಳಿಬ್ಬರನ್ನೂ ಕಾಪಾಡುತ್ತಾ ಬಂದನು. ಕಾಲಾಂತರದಲ್ಲಿ ಯೋಗ್ಯವಯಸ್ಕನಾದ ಆ ಬಾಲಕನಿಗೆ ಸೋಮಯಾಜಿಯು ವೇದಶಾಸ್ತ್ರಾದಿ ವೈದಿಕ ವಿದ್ಯಾಭ್ಯಾಸವನ್ನೂ, ಕ್ಷತ್ರಿಯಯೋಗ್ಯವಾದ ಶಸ್ತ್ರವಿದ್ಯಾಭ್ಯಾಸವನ್ನೂ ಮಾಡಿಸಿ ರಾಜಪದವಿಗೆ ಯೋಗ್ಯನನ್ನಾಗಿ ಮಾಡಿದನು. ತರುವಾಯ ಬಾಲಕನು ವಿಷ್ಣುಭಟ್ಟನ ಆಜ್ಞೆಯಿಂದ ಚಾಲುಕ್ಯಗಿರಿ ಎಂಬ ಬೆಟ್ಟದಮೇಲೆ ನೆಲೆಸಿದ್ದ ಗೌರೀದೇವಿಯನ್ನು ಆರಾಧಿಸಿ, ಆ ದೇವತೆಯ ಅನುಗ್ರಹಬಲದಿಂದ ಕದಂಬರು ಗಂಗರು ಮುಂತಾದ ರಾಜರನ್ನು ಜಯಿಸಿ, ದಕ್ಷಿಣಭಾರತದೇಶಕ್ಕೇ ಚಕ್ರವರ್ತಿಯಾದನು. ದಕ್ಷಿಣದಲ್ಲಿ ಕನ್ಯಾಕುಮಾರಿ-ರಾಮಸೇತುಗಳಿಂದ ಉತ್ತರಕ್ಕೆ ನರ್ಮದಾ ನದಿಯವರೆಗೂ ಆತನ ರಾಜ್ಯಭಾರವು ವಿಸ್ತರಿಸಿದ್ದಿತು. ಪರರಾಯರಮೇಲೆ ಜಯಸಂಪಾದನೆ ಮಾಡಿದಾಗ ವಿಷ್ಣುವರ್ಧನನು, ಶ್ವೇತಛತ್ರ, ಶಂಖ, ಪಂಚಮಹಾಶಬ್ದ, ಪಾಲಿಧ್ವಜ, ವರಾಹಲಾಂಛನ, ಜೋಡುನಗಾರಿ, ಸಿಂಹಾಸನ, ಮಕರತೋರಣ ಇವುಗಳನ್ನೂ ಗಂಗಾ ಯಮುನಾನದಿಗಳ ಚಿನ್ಹೆಗಳನ್ನೂ ಉಪಯೋಗಿಸಿ ಶೋಭಿಸಿದನು. ಈ ವಿಷ್ಣುವರ್ಧನನ ಮಗನೇ ಎರಡನೆಯ ವಿಜಯಾದಿತ್ಯನು. ಈತನ ಮಗನೇ ಒಂದನೆಯ ಪುಲಿಕೇಶಿಯು'' ಎಂದು ಅದರಲ್ಲಿ ಹೇಳಲ್ಪಟ್ಟಿದೆ.

ಈ ಪುಲಿಕೇಶಿ ರಾಜನ ಬಾಲ್ಯದಲ್ಲಿ ಒಂದು ವಿಚಿತ್ರ ಪ್ರಸಂಗವು ನಡೆಯಿತೆಂದು ಪ್ರಚಾರದಲ್ಲಿರುವ ಒಂದು ದಂತಕಥೆಯುಂಟು. ಯುದ್ಧಜೀವಿಯಾದ ಈತನ ತಂದೆ ರಣರಾಗನು, ಒಂದುವೇಳೆ ಕಾಳಗದಲ್ಲ ಪರಾಜಿತನಾಗಿ, ಪ್ರಾಣರಕ್ಷಣೆಗಾಗಿ ಕುಟುಂಬ ಪರಿವಾರಗಳೊಂದಿಗೆ ಓಡುತ್ತಿದ್ದನಂತೆ ! ಆಗ ಬಾದಾಮಿಪ್ರಾಂತದ ಒಂದು ಸಣ್ಣಗುಡ್ಡದಲ್ಲಿ, ಗರ್ಭಿಣಿಯಾಗಿದ್ದ ಆತನ ರಾಣಿಯು ಒಂದು ಪುರುಷ ಶಿಶುವನ್ನು ಪ್ರಸವಿಸಿದಳಂತೆ ! ಕೇವಲ ಅಸಹಾಯಸ್ಥಿತಿಯಲ್ಲಿದ್ದ ಅವರು ಶಿಶುವನ್ನು ತಮ್ಮ ಜೊತೆಗೆ ಕೊಂಡೊಯ್ಯಲು

ಸಾಧ್ಯವಿಲ್ಲದೆ, ಆಯುಸ್ಸಿದ್ದರೆ ಬದುಕಿಕೊಳ್ಳಲೆಂದು, ಅದನ್ನು ಅಲ್ಲೇ ಬಿಟ್ಟು ಓಡಿದರಂತೆ ! ಆಗ-"ಅರಕ್ಷಿತಂ ತಿಷ್ಠತಿ ದೈವರಕ್ಷಿತಂ | ............... ಜೀವತ್ಯನಾಥೋಽಪಿ ವನೇ ವಿಸರ್ಜಿತಃ ... ...." ಎಂಬೀ ಆರ್ಯೋಕ್ತಿಗಳನ್ನು ಸಾರ್ಥಕಗೊಳಿಸಲೋ ಎಂಬಂತೆ, ಆ ಪ್ರಾಂತ ಆಹಾರಾರ್ಥವಾಗಿ ತಿರುಗಾಡುತ್ತ ಬಂದ ಒಂದು ಹೆಣ್ಣು ಹುಲಿಯು, ಆ ಶಿಶುವನ್ನು ಕಂಡು ಅಪೂರ್ವ ಪ್ರೇಮಭಾವವು ದೈವಪ್ರೇರಣೆಯಿಂದ ಉಕ್ಕಿಬಂದು ತನ್ನ ಮೊಲೆಹಾಲನ್ನು ಕೊಟ್ಟು ಅದನ್ನು ಕಾಪಾಡಿತೆಂದೂ ಈ ದಂತಕಥೆಯು ಹೇಳುತ್ತದೆ. ಈಚೆಗೆ ಮೊನ್ನೆಮೊನ್ನೆ, ತೋಳಗಳಿಂದ ಹದಿನೈದು ವರ್ಷಕಾಲ ಸಂರಕ್ಷಿತವಾಗಿ, ಈಗ ಬೇಟೆಗಾರರಿಗೆ ದೊರೆತಿರುವುದೆಂದು ಒಂದು ಹುಡುಗಿಯ ವೃತ್ತಾಂತವು. ಪತ್ರಿಕೆಗಳಲ್ಲಿ ಪ್ರಕಟವಾಗಿರುವುದಾದುದರಿಂದ, ಮೇಲಿನ ದಂತಕಥಾ ವಿಚಾರವಾದರೂ ಪ್ರಪಂಚದ ಹಲವು ವಿಚಿತ್ರಗಳಲ್ಲಿ ಒಂದೆಂದು ಭಾವಿಸಿ ನಂಬಲು ಅಡ್ಡಿಯಿಲ್ಲವಾಗಿ ತೋರುತ್ತದೆ.

ಮೇಲ್ಕಂಡಂತೆ ಸ್ವಶೌರ್ಯದಿಂದ ರಾಜ್ಯಾಧಿಪತ್ಯವನ್ನು ಸಂಪಾದಿಸಿ, ಸಿಂಹಾಸನಾರೂಢನಾದ ಪುಲಿಕೇಶಿಯು ಪಲ್ಲವ ಅರಸರ ಸ್ವಾಧೀನದಲ್ಲಿದ್ದ ವಾತಾಪಿ ಅಥವ ಬಾದಾಮಿ ಪಟ್ಟಣವನ್ನು ಸಾಧಿಸಿ ಸ್ವಾಧೀನಗೊಂಡು, ಅದನ್ನು ಕೋಟೆಕೊತ್ತಲು, ರಾಜಮಾರ್ಗಗಳು, ರಾಜಧಾನಿಗೆ ಯೋಗ್ಯವೆನಿಸುವ ದೊಡ್ಡದೊಡ್ಡ ಕಟ್ಟಡಗಳು ಮುಂತಾದುವುಗಳಿಂದ ಸಿಂಗರಿಸಿ ನಗರವೆನ್ನಿಸಿ ರಾಜಾವಾಸಯೋಗ್ಯವಾದುದನ್ನಾಗಿ ಮಾಡಿದನು. ತರುವಾಯ ಮಹಾಪ್ರತಾಪಿಯೂ ಕಷ್ಟಸಹಿಷ್ಣುವೂ ವೀರನೂ ಆದ ಆತನು ದಂಡೆತ್ತಿಹೊರಟು, ಗಂಗ ಪಲ್ಲವ ಕುಲಗಳ ಅರಸರನ್ನು ಹಲವು ರಣರಂಗಗಳಲ್ಲಿ ಪರಾಜಯಗೊಳಿಸಿ, ತನಗೆ ಮಾಂಡಲಿಕರನ್ನಾಗಿ ಮಾಡಿಕೊಂಡು, ತನ್ನ ರಾಜ್ಯವನ್ನು ವಿಸ್ತಾರಗೊಳಿಸಿದನು. ಈತನಿಗೆ ಸತ್ಯಾಶ್ರಯ ರಣವಿಕ್ರಮ ಎಂಬ ಬಿರುದುಗಳಿದ್ದುವು. ಈತನನ್ನು ಶ್ರೀ ಪೃಥ್ವೀವಲ್ಲಭ ಪುಲಿಕೇಶಿ ಎಂದೂ ಒಂದಾನೊಂದು ಶಿಲಾಲೇಖನದಲ್ಲಿ ಹೊಗಳಿದ್ದಾರೆ. ತರುವಾಯ ಆ ರಾಜವರೇಣ್ಯನು ಬಹು ದಕ್ಷಿಣಾಕವಾದ ಅಶ್ವಮೇಧಯಾಗವನ್ನು ಮಾಡಿ, ಮುಂದೆ ಹದಿನೇಳು ವರ್ಷಕಾಲ ಧರ್ಮದಿಂದ ರಾಜ್ಯಭಾರಮಾಡಿ, ಕ್ರಿ.ಶ. ೬೪೭ನೆಯ ಸಂವತ್ಸರದಲ್ಲಿ ಕೀರ್ತಿಶೇಷನಾದನು.

ಪುಲಿಕೇಶಿಗೆ ಇಬ್ಬರು ಹೆಂಡಿರು. ಅವರಲ್ಲಿ ಒಬ್ಬಳು ಈಗಿನ ಗೋವೆ
ಯ ಬಳಿ ಇದ್ದ ರೇವತೀ ದ್ವೀಪದ ಬಟ್ಟೂರ ಮನೆತನದ ರಾಜನ ಮಗಳು.
ಕೀರ್ತಿವರ್ಮ, ಮಂಗಳೇಶ ಎಂಬಿಬ್ಬರು ಅತನಿಗೆ ಗಂಡು ಮಕ್ಕಳು.
ಕೀರ್ತಿವರ್ಮನು, ಪುಲಿಕೇಶಿಯ ಪಟ್ಟದರಾಣಿ ಬಟ್ಟೂರುವಂಶದ ದುರ್ಲಭಾ
ದೇವಿಯ ಉದರ ಸಂಭೂತನು. ಪುಲಿಕೇಶಿಯನಂತರ ಈ ಕೀರ್ತಿವರ್ಮನೇ
ಸಿಂಹಾಸನವನ್ನೇರಿದನು. ಇವನೂ ತಂದೆಯಂತೆಯೇ ಮಹಾ ಬಲಶಾಲಿ
ಯೂ, ರಣಪಂಡಿತನೂ ಆಗಿದ್ದು ಸ್ವತಂತ್ರರಾಗತೊಡಗಿದ್ದ ಮಂಡಲಾಧಿಪ
ರನ್ನೆಲ್ಲ ಗೆದ್ದು ತನಗೆ ಅಧೀನರನ್ನಾಗಿ ಮಾಡಿಕೊಂಡನು. ಈತನ ಪರಾಕ್ರ
ಮದ ಅನ್ವರ್ಥಕ್ಕಾಗಿಯೋ ಎಂಬಂತೆ ಈತನನ್ನು 'ರಣಪರಾಕ್ರಮ ಕೀರ್ತಿ
ವರ್ಮ' ಎಂಬ ನಾಮಧೇಯದಿಂದ ಆಂಗ್ಲಚರಿತ್ರಕಾರರು ಸಂಬೋಧಿಸಿ
ದ್ದಾರೆ. ತರುವಾಯ ಆತನು ನೆರೆಯ ಕೊಂಕಣದೇಶದಮೇಲೆ ದಂಡೆತ್ತಿ ಅದ
ನ್ನೂ ಸ್ವಾಧೀನಪಡಿಸಿಕೊಂಡು, ಅದಕ್ಕೆ ತನ್ನ ಕಡೆಯವನಾದ ಸತ್ಯಾಶ್ರಯ
ಧ್ರುವರಾಜ ಇಂದುವರ್ಮನೆಂಬಾತನನ್ನು ಸರ್ವಾಧಿಕಾರಿಯಾಗಿ ನಿಯಮಿ
ಸಿದನು. ಮಾತ್ರವಲ್ಲ, ಈಗಿನ ಬಳ್ಳಾರಿ ಕರ್ನೂಲು ಪ್ರಾಂತ್ಯಗಳಲ್ಲಿ
ಆಳುತ್ತಿದ್ದ ಸಣ್ಣ ಪುಟ್ಟ ರಾಜರೂ ಈತನ ಪರಾಕ್ರಮಕ್ಕೆ ಬಲಿಬಿದ್ದು
ಮಾಂಡಲಿಕರಾದರು. ಈತನಾದರೂ ತಂದೆಯಂತೆಯೇ ಸನಾತನ
ಧರ್ಮಾನುಷ್ಠಾನದಲ್ಲಿ ಶ್ರದ್ಧಾಭಕ್ತಿಗಳುಳ್ಳವನಾಗಿ, ಬಹು ದಕ್ಷಿಣಾಯುಕ್ತ
ವಾದ ಅಗ್ನಿಷ್ಟೋಮಾದಿ ಯಜ್ಞಗಳನ್ನು ಮಾಡಿ, ಮಹಾ ಯಶಸ್ವಿಯಾದನು.
ಬದಾಮಿಯ ಬಳಿ ವಿಷ್ಣುಗವಿಯಲ್ಲಿರುವ ನಾರಸಿಂಹ ವಿಗ್ರಹವು ಈತನ ಕಾಲ
ದಲ್ಲೇ, ಕೊರೆಯಿಸಲ್ಪಟ್ಟಿತೆಂದು ಹೇಳಿಕೆಯಿದೆ. ಈ ದೇವರ ಪೂಜಾ
ನೈವೇದ್ಯ ಉತ್ಸವಾದಿಗಳಿಗಾಗಿ, ಲಂಜೀಶ್ವರವೆಂಬೊಂದು ಗ್ರಾಮವನ್ನೇ
ಉಂಬಳಿಹಾಕಿಕೊಟ್ಟಿದ್ದಾನೆಂದು ಒಂದಾನೊಂದು ಶಾಸನವು ಹೇಳುತ್ತದೆ.
ಈತನು ಅನೇಕಮಂದಿ ವಿದ್ವಾಂಸರಿಗೆ ಆಶ್ರಯದಾತೃವಾಗಿದ್ದನೆಂದೂ,
ಈತನ ತಂದೆಯ ಕಾಲದಲ್ಲಿ ಸ್ಥಾಪಿತವಾಗಿದ್ದ ಮಹಾಪಾಠಶಾಲೆಯು ಈತನ
ಕಾಲದಲ್ಲಿ, ಉತ್ತಮರೀತಿಯಿಂದ ಸಂರಕ್ಷಿತವಾಗಿ ದೇಶದಲ್ಲಿ ವಿದ್ಯಾಭಿವೃದ್ಧಿ
ಕಾರ್ಯವು ಅವ್ಯಾಹತವಾಗಿ ಸಾಗುತ್ತಿತ್ತೆಂದೂ ಚರಿತ್ರೆಯು ಹೇಳುತ್ತದೆ.
ತನ್ನ ತಂದೆಯಿಂದ ಸ್ಥಾಪಿತವಾದ ರಾಜ್ಯಾಧಿಪತ್ಯವನ್ನು ಇಪ್ಪತ್ತು ವರ್ಷಕಾಲ

ಧರ್ಮದಿಂದ ನಡೆಸಿ, ಕೀರ್ತಿವರ್ಮರಾಜನು ಕ್ರಿ.ಶ.೫೯೭ರಲ್ಲಿ ದಿವಂಗತನಾದನು. ಈ ಕಿಂಚಿತ್ಪೂರ್ವಕಥೆಯಿಂದ ನಮ್ಮ ಕಥಾನಾಯಕನ ವಂಶಪರಿಚಯವನ್ನು ಮಾಡಿಕೊಂಡ ನಾವು ಇನ್ನು ಮುಂದರಿಸಬಹುದು.



## ಅಧ್ಯಾಯ ೩ "ಮಂಗಳೇಶ"

ಕೀರ್ತಿವರ್ಮನು ಕೀರ್ತಿಶೇಷನಾದ ತರುವಾಯ, ಪುಲಿಕೇಶಿ, ಕುಬ್ಜ ವಿಷ್ಣುವರ್ಧನ, ಜಯಸಿಂಹವರ್ಮ ಎಂಬ ಆತನ ಮೂವರು ಮಕ್ಕಳಲ್ಲಿ ಹಿರಿಯನಾದ ಪುಲಿಕೇಶಿಯು ಸಿಂಹಾಸನಾರೋಹಣ ಮಾಡಬೇಕಾಗಿದ್ದಿತು. ಆದರೆ ಅವನು ಇನ್ನೂ ಅಲ್ಪವಯಸ್ಕನಾಗಿದ್ದುದರಿಂದ ಅವನ ಪರವಾಗಿ ಕೀರ್ತಿವರ್ಮನ ಒಲತಮ್ಮನೂ ರಾಜಪುತ್ರರ ಚಿಕ್ಕತಂದೆಯೂ ಆದ ಮಂಗಳೇಶನು ರಾಜ್ಯಾಧಿಕಾರವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ನಡೆಯಿಸ ತೊಡಗಿದನು.

ರಾಜಸಿಂಹಾಸನಕ್ಕೆ ನಿಜವಾಗಿ ಬಾಧ್ಯಸ್ಥನಾದ ಪುಲಿಕೇಶಿಯು ಬಾಲಕನಾಗಿ ತಾನು ರಾಜ್ಯಾಧಿಕಾರಸೂತ್ರಗಳನ್ನು ವಹಿಸಿದ್ದನಾದರೂ, ಮಂಗಳೇಶನಿಗೆ, ಅಧಿಕಾರಸ್ಥಾನವು ಪ್ರಾಪ್ತವಾದೊಡನೆಯೇ ಬುದ್ಧಿ ಭ್ರಮಿಸದಿರಲಿಲ್ಲ. ತನ್ನ ಅಣ್ಣ ಕೀರ್ತಿವರ್ಮನ ಕಾಲದಲ್ಲಿ ಕೋಶಕ್ಕೆ ಸರ್ವಾಧಿಕಾರಿಯಾಗಿ ನಿಯಮಿತನಾಗಿದ್ದ ತನ್ನ ಮಗನಾದ ಸತ್ಯಾಶ್ರಯಧ್ರುವರಾಜ ಇಂದುವರ್ಮನನ್ನು ಬಾದಾಮಿಯ ಸಿಂಹಾಸನಕ್ಕೆ ತರಬೇಕೆಂಬುದು ಅವನ ಆಶಯವಾಗಿದ್ದಿತು. ಪುಲಿಕೇಶಿಯೂ ಅವನ ಇಬ್ಬರು ತಮ್ಮಂದಿರೂ ಮಂಗಳೇಶನ ಈ ಕಾರ್ಯಕ್ಕೆ ವಿಘ್ನಸ್ವರೂಪರಾಗಿದ್ದರೆಂಬುದು ಹೇಳಬೇಕಾದುದಿಲ್ಲವಷ್ಟೆ! ಅವರನ್ನು ತೀರಿಸಲು ಸಾಧ್ಯವಿಲ್ಲದಿದ್ದರೂ, ಅವರು ಪ್ರಬುದ್ಧರಾಗುವುದರೊಳಗಾಗಿ ತನ್ನ ಸರ್ವತೋಮುಖ ಬಲವನ್ನು ಅಭಿವೃದ್ಧಿಪಡಿಸಿಕೊಳ್ಳುವ ಹಲವು ಪ್ರಯತ್ನಗಳನ್ನು ನಡೆಯಿಸಿದನು. ತನ್ನ ಅಣ್ಣನ ಕಾಲದಲ್ಲಿ ಬಾದಾಮಿಯ ಗುಡ್ಡದಲ್ಲಿ ಗುಹೆಯನ್ನು ಕೊರೆಯಿಸಿ ಅದರಲ್ಲಿ ನೃಸಿಂಹವಿಗ್ರಹವನ್ನು ಪ್ರತಿ

ಷ್ಠಿಸಿದುದೂ, ಮಹಾಕೂಟವೆಂಬಲ್ಲಿ ಧರ್ಮದ ಜಯಸ್ತಂಭವೊಂದನ್ನು ನಡಿಸಿದುದೂ, ತನ್ನ ಪ್ರಜೆಗಳಲ್ಲಿ ತಾನು ಧಾರ್ಮಿಕಪ್ರಭುವೆಂಬ ಕೀರ್ತಿಯನ್ನು ಗಳಿಸಬೇಕೆಂಬ ಉದ್ದೇಶದಿಂದಲೇ ಎಂದು ತೋರುತ್ತದೆ. ಧಾರ್ಮಿಕಭಾವನೆಯಿಂದ ಪ್ರಜಾಭಿಪ್ರಾಯವನ್ನು ತನ್ನ ಕಡೆಗೆ ಸೆಳೆದುಕೊಳ್ಳುವುದರೊಂದಿಗೆ, ಪರಪ್ರಾಂತಗಳನ್ನು ಜಯಿಸಿ, ತನ್ನ ಸೇನಾಬಲವನ್ನು ಹೆಚ್ಚಿಸಿಕೊಳ್ಳಬೇಕೆಂಬುದೂ, ಹಾಗೆ ಮಾಡಿಕೊಂಡರೇನೇ, ರಾಜ್ಯಕ್ಕೆ ನ್ಯಾಯವಾದ ಅಧಿಕಾರಿಗಳಾದ ತನ್ನ ಸೋದರನ ಮಕ್ಕಳನ್ನು ಮೂಲೆಗೊತ್ತಿ, ಚಾಲುಕ್ಯಸಿಂಹಾಸನವನ್ನು ತನಗೂ ತನ್ನ ಮಕ್ಕಳಿಗೂ ದಕ್ಕಿಸಿಕೊಳ್ಳಲು ಸಾಧ್ಯವಾಗುವುದೆಂದೂ ಯೋಚಿಸಿದನು. ತನ್ನ ಬಲಪ್ರದರ್ಶನಕ್ಕೆ ಎಲ್ಲಾದರೂ ಮಾರ್ಗ ದೊರೆಯುವುದೇ ಎಂದು ಅತ್ತಿತ್ತ ನೋಡತೊಡಗಿದನು. ನೆರೆಯವರೊಡನೆ ಜಗಳ ತೆಗೆಯಬೇಕೆಂದು ಹವಣಿಸುತ್ತಿರುವವನಿಗೆ ಕಾರಣ ದೊರೆಯುವುದು ಕಷ್ಟವೆ? ಎಲ್ಲಾದರೂ ದಂಡಯಾತ್ರೆ ಹೊರಟು, ರಾಜ್ಯಕೋಶಗಳನ್ನು ಗಳಿಸಬೇಕೆಂದು ಮಂಗಳೇಶನು ಅಪೇಕ್ಷಿಸುತ್ತಿದ್ದ ವೇಳೆಗೆ ಸರಿಯಾಗಿ ಒಂದು ಅನುಕೂಲಸಂದರ್ಭವು ದೊರೆಯಿತು.

ಚಾಲುಕ್ಯವಂಶದ ಮಂಗಳೇಶನು ರಾಜ್ಯಾಧಿಕಾರವಾಡುತ್ತಿದ್ದ ಸಮಕಾಲದಲ್ಲೇ ಕಟಚೂರಿ ಅಥವ ಕಲಚೂರಿವಂಶದಲ್ಲಿ ಶಂಕರಗಣನ ಮಗನಾದ ಬುದ್ಧರಾಜನೆಂಬುವನು ಕಲ್ಯಾಣ ಪ್ರಾಂತದಲ್ಲಿ ಆಧಿಪತ್ಯವಾಡುತ್ತಿದ್ದನು. ಮಂಗಳೇಶನು ತನ್ನ ಅಧಿಕಾರ ಪ್ರತಿಷ್ಠೆಗಳನ್ನು ಮೆರೆಯಿಸುತ್ತ ದಿನ ದಿನಕ್ಕೆ ಹೆಚ್ಚುತ್ತಿದ್ದುದನ್ನು ಕಂಡು ಸಹಿಸಲಾರದೆ, ಬುದ್ಧರಾಜನು ಯಾವುದಾದರೂ ಒಂದು ಕಾರಣದಿಂದ, ಅವನೊಂದಿಗೆ ಯುದ್ಧವನ್ನು ಹೂಡಿ, ಅದರಲ್ಲಿ ಅವನ ಮದವನ್ನು ಇಳಿಸಬೇಕೆಂದು ಸಮಯ ನಿರೀಕ್ಷಣೆಯಲ್ಲಿದ್ದನು. ಹೀಗಿರುವಲ್ಲಿ ಕೊಂಕಣದಲ್ಲಿ ಚಾಲುಕ್ಯರ ಕಡೆಯ ಒಬ್ಬ ಅಧಿಕಾರಿಯಾಗಿದ್ದ ಸ್ವಾಮಿರಾಜನೆಂಬುವನ ಸಹಾಯವು ಅವನಿಗೆ ದೊರೆಯಿತು. ಸ್ವಾಮಿರಾಜನು, ಸ್ವಾಮಿದ್ರೋಹಕ್ಕೆ ಹೆದರದೆ, ಬುದ್ಧರಾಜನ ಒಳಸಂಚಿಗೆ ಒಡಂಬಟ್ಟು ತನ್ನ ಸ್ವಾಮಿಗೆ ವಿರುದ್ಧವಾಗಿ ನಡೆಯಲು ಸಿದ್ಧನಾದನು. ಒಡನೆ ಆ ಇಬ್ಬರೂ ದಂಡೆತ್ತಿಹೊರಟು, ವೆಂಗುರ್ಲೆಯಿಂದ ಎಂಟು ಮೈಲು ದೂರದಲ್ಲಿ ಚಾಲುಕ್ಯರ ಆಡಳಿತಕ್ಕೆ ಒಳಪಟ್ಟಿದ್ದ ರೇವತಿ ಎಂಬ ದ್ವೀಪವನ್ನು

ಕೈವಶ ಮಾಡಿಕೊಂಡರು. ಈ ಸಂಗತಿಯು ಒಡನೆ ಬೇಹಿನವರ ಮೂಲಕ ಮಂಗಳೇಶನಿಗೆ ತಿಳಿದುಹೋಯಿತು. ಯಾರಿಗಾದರೂ ಯುದ್ಧ ಭೋಜನವು ದೊರೆತೀತೇ ಎಂದು ಬೆಟ್ಟದಷ್ಟು ಆಸೆಯನ್ನಿಟ್ಟುಕೊಂಡು ಎದುರುನೋಡಿಕೊಂಡು ಕುಳಿತಿದ್ದ ಮಂಗಳೇಶನು ಈ ಸುಸಂಧಿಯನ್ನು ಕಳೆದುಕೊಳ್ಳುವನೆ ! ಒಡನೆ ಸೈನ್ಯವನ್ನು ಸಿದ್ಧಗೊಳಿಸಿಕೊಂಡು, ಯುದ್ಧಕ್ಕೆ ಸಾಗಿ, ಶತ್ರುರಾಜನಿಂದ ಆಕ್ರಾಂತವಾಗಿದ್ದ ರೇವತಿ ದ್ವೀಪವನ್ನು ಮುತ್ತಿದನು. ಆ ಕಾಲದಲ್ಲಿ ದ್ವೀಪದ ಈಚೆಯ ದಡದಲ್ಲಿ ನಿಂತಿದ್ದ ಚಾಲುಕ್ಯರ ದಂಡು ನೀರಿನಲ್ಲಿ ಪ್ರತಿಬಿಂಬಿಸಿರಲು, ಅದು ವರುಣದೇವನ ಸೈನ್ಯವು ಮಂಗಳೇಶನ ಬೆಂಬಲಕ್ಕೆ ಬಂದಿತ್ತೋ ಎಂಬ ಭ್ರಾಂತಿಯನ್ನುಂಟುಮಾಡುತ್ತಿದ್ದಿತೆಂದು ಐಹೊಳೆಯ ಶಾಸನವೊಂದರಲ್ಲಿ ಹೊಗಳಲ್ಪಟ್ಟಿದೆ. ಉಭಯ ಸೈನ್ಯಗಳಿಗೂ ಯುದ್ಧವು ಕೈಗಟ್ಟಿತು. ತರುವಾಯ ಕೆಲವು ದಿನಗಳ ಯುದ್ಧದೊಳಗಾಗಿಯೇ ಮಹಾಪರಾಕ್ರಮಿಯಾದ ಮಂಗಳೇಶನ ಅಗಾಧ ಸೈನ್ಯದ ಹೊಡೆತವನ್ನು ತಡೆದುಕೊಳ್ಳಲಾರದೆ, ಬುದ್ಧರಾಜನ ಸೈನ್ಯವು ಮುತ್ತಿಗೆಯನ್ನೆತ್ತಿ ಪಲಾಯನವಾಗಲಾರಂಭಿಸಿತು. ಮಂಗಳೇಶನು ಓಡಿಹೋಗುತ್ತಿದ್ದ ಶತ್ರುವನ್ನ ಬೆನ್ನಟ್ಟಿ ನಾಲ್ಕಾರು ಕಡೆ ಮೇಲಿನಮೇಲೆ ಸೋಲಿಸಿ, ಕಿಮ್ನದಿಯ ವರೆಗೂ, ಮುಂದೆ ಮಹೀನದಿಯವರೆಗೂ ವ್ಯಾಪಿಸಿದ್ದ ಅವನ ರಾಜ್ಯವನ್ನೆಲ್ಲ ಸ್ವಾಧೀನಗೊಳಿಸಿಕೊಂಡು, ಕೈತಪ್ಪಿಹೋಗಿದ್ದ ಕೊಂಕಣ ಪ್ರಾಂತಕ್ಕೂ ಹೊಸದಾಗಿ ಜಯಿಸಲ್ಪಟ್ಟ ಪ್ರಾಂತಕ್ಕೂ ಬೇರೊಬ್ಬ ಮಂಡಲಾಧೀಶನನ್ನು ನಿಯಮಿಸಿದನು. ಶತ್ರುದಳದ ಆಶ್ರಯಗಳಲ್ಲಿ ಪ್ರಾಣಭಯದಿಂದ ತತ್ತಳಿಸುತ್ತಿದ್ದ ಸ್ವಾಮಿರಾಜನು, ಮಂಗಳೇಶನ ಎದುರಿಗೆ ತರಲ್ಪಟ್ಟನು. ಧೂರ್ತನೂ ಚಂಡಶಾಸನನೂ ಆದ ಆ ಸರ್ವಾಧಿಕಾರಿಯು ಸ್ವಾಮಿದ್ರೋಹಿಯಾದ ಅವನನ್ನು ಶಿರಚ್ಛೇದನ ಮಾಡುವಂತೆ ಆಜ್ಞಾಪಿಸಿ, ಜಯಭೇರಿಯನ್ನು ಹೊಡೆಯಿಸುತ್ತ ಹಿಂದಿರುಗಿ ರಾಜಧಾನಿಯನ್ನು ಸೇರಿದನು. ಈ ವಿಜಯಯಾತ್ರೆಯು ಕ್ರಿ. ಶ. ೬೦೧ರಲ್ಲಿ ನಡೆಯಿತು.

ಶತ್ರುವಾದ ಬುದ್ಧರಾಜನಮೇಲೆ ತಾನು ಕೈಕೊಂಡ ಮೊದಲನೆಯ ದಂಡಯಾತ್ರೆಯಲ್ಲಿ ತನಗೆ ಜಯಲಭ್ಯವಾದುದು, ಮಹತ್ವಾಕಾಂಕ್ಷಿಯೂ ಆಡಂಬರಪ್ರಿಯನೂ ಆದ ಮಂಗಳೇಶನನ್ನು ಉಬ್ಬಿಸಿಬಿಟ್ಟಿತು. ತಾನು

ಅಸಹಾಯಶೂರನೆಂಬ ಹೆಮ್ಮೆಯೂ, ತನಗೆ ಈಡಾಗುವ ವೀರನು ಯಾರೂ ಇಲ್ಲವೆಂಬ ಅಹಂಕಾರವೂ ಅವನ ತಲೆಯಲ್ಲಿ ಮನೆಮಾಡಿಕೊಂಡುವು. ಆಗಲವನು ರಾಜಸಭೆಯಲ್ಲಿ ವಂದಿಮಾಗಧರಿಂದ 'ಉರುರಣವಿಕ್ರಾಂತ' ಎಂಬ ಬಿರುದಿನಿಂದ ಹೊಗಳಿಸಿಕೊಂಡನು. ರಣವಿದ್ಯೆಯಲ್ಲಿ ತಾನು ಭಾರತವೀರರಾದ ಕರ್ಣಾರ್ಜುನರಿಗೆ ಸರಿಸಾಟಿಯಾದವನೋ ಎಂದು ಭಾವಿಸಿಕೊಂಡು, ಆ ವಿಜಯಯಾತ್ರೆಯನ್ನು ಹಾಗೇ ಮುಂದರಿಸಿ ಆಚಂದ್ರಾರ್ಕ ತನ್ನ ಕೀರ್ತಿ ಚಂದ್ರತಾರೆಯು ಮೆರೆಯುತ್ತಿರುವಂತೆ ಭಾಗೀರಥಿಯ ದಂಡೆಯಮೇಲೂ ಒಂದು ಜಯಸ್ತಂಭವನ್ನು ಸ್ಥಾಪಿಸಿಬರಬೇಕೆಂದು ಹಂಬಲಿಸಿದನು. ಆದರೆ ಇದು ಕಾರ್ಯತಃ ನಡೆಯಲಿಲ್ಲ. ಅವನಿಗೆ ಪರರಾಜ್ಯವನ್ನು ಜಯಿಸಿ ಹೆಸರು ಪಡೆಯುವುದಕ್ಕಿಂತಲೂ, ಕೈಯಲ್ಲಿದ್ದ ರಾಜ್ಯವನ್ನೇ ಸ್ಥಿರಪಡಿಸಿಕೊಂಡು, ತನ್ನ ಅಧಿಕಾರವನ್ನು ರೂಢಮೂಲಗೊಳಿಸಿಕೊಳ್ಳಲು, ಸ್ವಸ್ಥಳದಲ್ಲಿದ್ದ ಪ್ರಜಾಪ್ರಮುಖರನ್ನು ತನ್ನ ಕಡೆಯವರನ್ನಾಗಿ ಮಾಡಿಕೊಳ್ಳುವುದು ಹೆಚ್ಚು ಆವಶ್ಯಕವೆಂದು ತೋರಿತು. ಒಡನೆ ಉತ್ತರದೇಶದ ದಂಡಯಾತ್ರೆಯ ಉದ್ಯೋಗವನ್ನು ಬದಿಗೊತ್ತಿದನು.

ಮಂಗಳೇಶನು, ತಾನು ರಣಧೀರನೆಂದೂ, ತನ್ನ ಸಮಾನ ಬಲಶಾಲಿಗಳೇ ಯಾರೂ ಇಲ್ಲವೆಂದು ಭಾವಿಸಿದ್ದರೂ, ರಾಜ್ಯಾಧಿಕಾರವನ್ನು ತಾನೇ ಅಪಹರಿಸಬೇಕೆಂದು ಹೊಂಚಿಕೊಂಡಿದ್ದರೂ. ಮಹತ್ವದ ರಾಜಕಾರ್ಯಗಳನ್ನು ಸ್ವತಂತ್ರವಾಗಿ ಮಾಡಲು ಅವಕಾಶವಿರಲಿಲ್ಲವೆಂದು ತೋರುತ್ತದೆ. ಅವನ ನಿರಂಕುಶಾಧಿಕಾರಕ್ಕೆ ಒಂದುಬಗೆಯಿಂದ ತಡೆಯೂ ಇದ್ದಿರಬೇಕು. ಏಕೆಂದರೆ ಕ್ರಿ. ಶ. ೬೦೨ನೆಯ ಏಪ್ರೆಲ್ ೧೫ರಲ್ಲಿ ಎಂದರೆ ಸಿದ್ಧಾರ್ಥಿ ಸಂ|| ವೈಶಾಖ ಶುದ್ಧ ೧೫ ರಲ್ಲಿ ಅವನು ಮಹಾಕೂಟವೆಂಬಲ್ಲಿ ನೆಡಿಸಿರುವ ಜಯಸ್ತಂಭದಲ್ಲಿ, ಬರೆಯಲ್ಪಟ್ಟು ಪ್ರಕಟವಾಗಿರುವ ಸಂಗತಿಯಿಂದ ಅವನು, ತನ್ನ ಬಲತಾಯಿಯ ಆಜ್ಞೆಗೆ ಬದ್ಧನಾಗಿಯೇ ಮಹತ್ವದ ರಾಜಕೀಯ ವಿಚಾರಗಳಲ್ಲಿ ನಡೆಯಬೇಕಾಗಿದ್ದಿತೆಂದು ಸ್ಪಷ್ಟಪಡುತ್ತದೆ. ಬುದ್ಧರಾಜನನ್ನು ಜಯಿಸಿ ಹಿಂದಿರುಗಿ ಬಂದ ತರುವಾಯ ಅವನು, ತನ್ನ ಬಲತಾಯಿಯಾದ ದುರ್ಲಭಾದೇವಿಯನ್ನು ಕಂಡು— 'ನಾನು ಕಲಚುರಿ ಮನೆತನದ ಬುದ್ಧರಾಜನನ್ನು ಯುದ್ಧದಲ್ಲಿ ಸೋಲಿಸಿ ಗೆದ್ದು ತಂದ ಸಂಪತ್ತೆಲ್ಲವೂ, ರಾಜ್ಯದ

ಹಲವು ಕೆಲಸಗಳಿಗಾಗಿ ಖರ್ಚಾಗಿಹೋಯಿತು. ಪೂಜ್ಯರಾದ ನಮ್ಮ ತಂದೆಯೂ ಅಣ್ಣನೂ ಶ್ರೀ ಮಕುಟೇಶ್ವರನಾಥನ ದೇವಸ್ಥಾನಕ್ಕೆ ಬಿಟ್ಟುಕೊಟ್ಟಿರುವ ಉಂಬಳಿಯು ದೇವಸ್ಥಾನದ ಖರ್ಚಿಗೆ ಸಾಕಾಗುವುದಿಲ್ಲ ಆದುದರಿಂದ ತ್ರಿಯಂಬಾಕ, ಕಿಸುವೊಳಲ, ಪ್ರಿಹಿಮುಖಗ್ರಾಮ, ಕೆಂದೋರಮಾನ್ಯ ನಂದಿಗ್ರಾಮ ಮುಂತಾದ ಹತ್ತು ಗ್ರಾಮಗಳನ್ನು ಆ ದೇವರಿಗೆ ದಾನವಾಗಿ ಹಾಕಿಕೊಡುತ್ತೇನೆ" ಎಂದು ತಿಳಿಸಿ ಆಮೇರೆಗೆ ಮಾಡಿದನೆಂದು ಆ ಜಯಸ್ತಂಭದಿಂದ ವ್ಯಕ್ತವಾಗುತ್ತದೆ. ದೇವರಿಗಾಗಿ ಬಿಡಲ್ಪಟ್ಟಿರುವ ಮಾನ್ಯದ ಸ್ಥಿರೀಕರಣಕ್ಕಾಗಿಯೇ ನೆಡಲ್ಪಟ್ಟಿರುವ ಈ ಧರ್ಮಜಯಸ್ತಂಭವು-ಮಂಗಳೇಶನು ಸ್ವತಂತ್ರರಾಜನಾಗಿರಲಿಲ್ಲ, ರಾಜಪುತ್ರ ಪುಲಿಕೇಶಿಗಾಗಿ, ಅತನ ಪಾಲಕಳಾದ ರಾಜಮಾತೃ ದುರ್ಲಭಾದೇವಿಯು ಇಚ್ಛಾನುಸಾರ ರಾಜ್ಯಭಾರ ಮಾಡುತ್ತಿದ್ದವನು-ಎಂಬೀ ಸಂಗತಿಗಳನ್ನು ದೃಢಪಡಿಸುತ್ತದೆ.

ತಾನು ಸ್ವತಃ ಮಕುಟಾಭಿಷಿಕ್ತನಲ್ಲದಿದ್ದರೂ, ತಾನು ರಣವೀರನೆಂದೂ ಹತ್ತು ಗ್ರಾಮಗಳ ದಾನ ಕೊಟ್ಟುದರಿಂದ ಧರ್ಮವೀರನೆಂದೂ ಹೆಮ್ಮೆ ಪಡುವುದರಲ್ಲಿ ಮಂಗಳೇಶನಿಗೆ ಅಸಹ್ಯತೋರಲಿಲ್ಲ. ಎಂದು ಧರ್ಮಜಯಸ್ತಂಭವನ್ನು ಸ್ಥಾಪಿಸಿ, ಅವನು ಇನ್ನು ಕೃತಕೃತ್ಯನಾದೆನೆಂದು ಹಿಗ್ಗಿದನೋ ಅಂದೇ ಅವನ ವಿನಾಶಕ್ಕೂ ಬೀಜಾವಾಪನೆಯಾಯಿತು. ಏಕೆಂದರೆ, ಅವನು ರಾಜಮಾತೃವಿಗೆ ಹತ್ತು ಗ್ರಾಮಗಳ ದಾನದ ವಿಷಯದಲ್ಲಿ ತಿಳಿಸಿದುದು ನಾಮಮಾತ್ರ, ಸರ್ವಾಧಿಕಾರವೂ ತನ್ನದಾದುದರಿಂದ ನಿಜವಾಗಿ ದಾನಕೊಟ್ಟವನೂ, ಕೊಡಲು ಅಧಿಕಾರಿಯೂ ತಾನೇ ಎಂಬ ಅಹಂಕಾರ ಮಮಕಾರಗಳು ದಿನದಿನಕ್ಕೆ ಅವನಲ್ಲಿ ಹೆಚ್ಚಾಗತೊಡಗಿದುವು. ತನ್ನ ಅಧಿಕಾರವನ್ನು ಪ್ರತಿಬಂಧಗೊಳಿಸತಕ್ಕವರು ಯಾರೂ ಇಲ್ಲವೆಂಬ ನಂಬಿಕೆಯು ಅವನ ಮನಸ್ಸಿನಲ್ಲಿ ದೃಢಪಟ್ಟಿತು. ಇನ್ನು ಸಾವಕಾಶಮಾಡದೆ ತರುಣ ಪುಲಿಕೇಶಿಯ ಪಕ್ಷದವರ ಬಲವನ್ನು ಸಾಧ್ಯವಾದಷ್ಟು ಕುಂದಿಸಿ, ತನ್ನ ಪಕ್ಷವನ್ನು ಬಲಪಡಿಸಿಕೊಳ್ಳಬೇಕೆಂಬ ಪ್ರಯತ್ನವು ಅವ್ಯಾಹತವಾಗಿ ನಡೆಯಿಸಾಗಿತು. ಅವನ ಮತ್ತು ಅವನ ಬೆಂಬಲದಿಂದ ಕುಣಿಯತೊಡಗಿದ ಅವನ ಪಕ್ಷದವರ ದಂಭದರ್ಪಗಳಿಗೆ ಮೇರೆಯಿಲ್ಲವಾಯಿತು. ದಿನದಿನಕ್ಕೆ ಬಾಲರಾಜನಾದ ಪುಲಿಕೇಶಿಯ ಪಕ್ಷದವರಿಗೆ ಈ ಸರ್ವಾಧಿಕಾರಿಯ ಕಿರುಕುಳದಿಂದ

ನಡೆಯತೊಡಗಿದ ಕಿರುಕುಳಗಳಿಗೂ ತಡೆಬಡೆಗಳಿಲ್ಲವಾದುವು. ಪ್ರಜಾ ಸಮೂಹವು ಬಾಲರಾಜನ ಪಕ್ಷ, ಸರ್ವಾಧಿಕಾರಿಯ ಪಕ್ಷ, ಬಾಲರಾಜನ ಪಕ್ಷದಲ್ಲಿದ್ದರೂ ಮಂಗಳೇಶನಿಗೆ ವಿರುದ್ಧವಾಗಿ ನಡೆಯಲು ಹೆದರಿದ ಭೀರುಗಳ ಪಕ್ಷ, ಯಾವ ಪಕ್ಷವನ್ನೂ ವಹಿಸದೆ, ರಾಜ್ಯವಿಚಾರವನ್ನೇ ತಲೆಗೆ ಹಚ್ಚಿಕೊಳ್ಳದೆ ತಟಸ್ಥರಾಗಿದ್ದವರ ಪಕ್ಷ ಹೀಗೆ ನಾಲ್ಕು ಪಕ್ಷಗಳಾದುವು.

ಈ ವೇಳೆಯಲ್ಲಿ ತರುಣನಾಗಿದ್ದರೂ ನಮ್ಮ ಕಥಾನಾಯಕನು ಎಂತಹ ಬುದ್ಧಿಶಾಲಿಯೂ ಉಪಾಯಚತುರನೂ ಆಗಿದ್ದನೆಂಬುದರ ಒಂದು ಉದಾಹರಣೆಯು ಪ್ರದರ್ಶಿತವಾಯಿತು. ಪುಲಿಕೇಶಿಯು ಕೇವಲ ರಾಜ್ಯಲೋಭ-ಅಧಿಕಾರತೃಷ್ಣೆಗಳಿಂದ ಅಂಧನಾಗಿರುವ ತನ್ನ ಚಿಕ್ಕಪ್ಪನನ್ನು ಬಲಪ್ರದರ್ಶನದಿಂದ ಎದುರಿಸುವುದು-ಅಪಾಯಕಾರಿಯೆಂದೂ, ಅನ್ಯಾಯವಾಗಿ ಪ್ರಜಾನಾಶಕ್ಕೆ ಕಾರಣವಾಗುವುದೆಂದೂ ಯೋಚಿಸಿ ಉಪಾಯಾಂತರದಿಂದ, ತನ್ನ ಕಾರ್ಯಸಾಧನೆ ಮಾಡಿಕೊಳ್ಳಲು ಯೋಚಿಸಿದನು. 'ನನಗೆ ರಾಜ್ಯಭೋಗವೂ ಈ ಐಶ್ವರ್ಯವೂ ಅಧಿಕಾರವೂ ಬೇಕಾಗಿಲ್ಲ. ನನ್ನ ಮರಣಾವಧಿ ತೀರ್ಥಕ್ಷೇತ್ರಗಳ ಸಂದರ್ಶನದಲ್ಲೂ ದೇವತಾರಾಧನೆಯಲ್ಲೂ ಕಾಲಕಳೆದು ಈ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಲು ಉದ್ದೇಶಿಸಿದ್ದೇನೆ' ಎಂದು ರಾಜಸಭೆಯಲ್ಲಿ ಸ್ಪಷ್ಟವಾಗಿನುಡಿದು, ತೀರ್ಥಯಾತ್ರೆಗೆ ಬೇಕಾದ ಸಾಧನಸಾಮಗ್ರಿಗಳನ್ನೆಲ್ಲಾ ಸಿದ್ಧಪಡಿಸಿಕೊಂಡು ರಾಜಧಾನಿಯನ್ನು ಬಿಟ್ಟುಹೊರಟನು. ರಾಜ್ಯಾಧಿಪತ್ಯಕ್ಕೆ ಅನಧಿಕಾರಿಯೂ ಅನರ್ಹನೂ ಆದ ದುರುಳ ಮಂಗಳೇಶನು ಊರಲ್ಲೇ ನಿಂತು, ತರುಣನೂ ನ್ಯಾಯ್ಯವಾಗಿ ರಾಜ್ಯಾಧಿಪತ್ಯಕ್ಕೆ ಬಾಧ್ಯನೂ ಅರ್ಹನೂ ಪ್ರಜಾನುರಾಗಿಯೂ ಆದ ತಮ್ಮ ರಾಜಪುತ್ರನು ಪರದೇಶಿಯಂತೆ ತೀರ್ಥಾಟನೆಗೆಂದು ದೇಶಾಂತರ ಗತನಾಗುತ್ತಿದ್ದುದನ್ನು ಕಂಡು ರಾಜಧಾನಿಯ ಪ್ರಜಾವರ್ಗವು ಗೋಳಿಟ್ಟಿತು. ಅಂದು ಆ ರಾಜಧಾನಿಯ ದೃಶ್ಯವು, ಶ್ರೀರಾಮನು ಅಯೋಧ್ಯೆಯನ್ನು ಬಿಟ್ಟು ಸೀತಾಲಕ್ಷ್ಮಣರೊಂದಿಗೆ ಅರಣ್ಯವನ್ನು ಕುರಿತು ಹೊರಟ ದಿನದ ಜ್ಞಾಪಕವನ್ನು ತರುತ್ತಿತ್ತು. ಮಂಗಳೇಶನು ಔಪಚಾರಿಕವಾಗಿ ಆ ರಾಜಪುತ್ರನನ್ನು ತೀರ್ಥಾಟನಾ ಉದ್ಯೋಗದಿಂದ ನಿವಾರಿಸಲು ಯತ್ನಿಸಿದನಾದರೂ ಅಂತರ್ಯದಲ್ಲಿ, ತನ್ನ ಮಾರ್ಗದಲ್ಲಿದ್ದೊಂ

ದು ಕಂಟಕವು ಹೀಗೆ ಪರಿವಾರವಾಯಿತಲ್ಲಾ ಎಂದು ಹಿಗ್ಗದಿರಲಿಲ್ಲ. ಆದರೆ ಆ ಹೆಗ್ಗಳಿಕೆಯು ಬಹುಕಾಲ ನಿಲ್ಲಲಿಲ್ಲ.

ರಾಜಪುತ್ರನು ತನ್ನ ಮಿತಪರಿವಾರದೊಂದಿಗೆ ರಾಜಧಾನಿಯನ್ನು ಬಿಟ್ಟು ಪ್ರಯಾಣಮಾಡಿ ಕೆಲವು ಕ್ರೋಶಗಳಷ್ಟು ದೂರ ಹೋಗುವುದರೊಳಗಾಗಿಯೇ ರಾಜಧಾನಿಯ ಕೆಲಮಂದಿ ಪ್ರಮುಖ ಪ್ರಜೆಗಳೂ, ಮಂತ್ರಿಮುಖ್ಯರೂ ಬಹು ಆತುರದಿಂದ ಬಂದು, ಸರ್ವಾಧಿಕಾರಿ ಮಂಗಳೇಶನು ಮೃತನಾದನೆಂದೂ ನೀವು ಬಂದು ರಾಜ್ಯಾಧಿಪತ್ಯವನ್ನು ವಹಿಸಬೇಕೆಂದೂ ವಿಜ್ಞಾಪಿಸಿಕೊಂಡರು. ಅಕಸ್ಮಾತ್ತಾಗಿ ಸಂಭವಿಸಿದ ಈ ಕಾರ್ಯಕ್ಕೆ ಕಾರಣವೇನೆಂದು ಆತನಿಗೆ ಮಹದಾಶ್ಚರ್ಯವೂ ಆತಂಕವೂ ಉಂಟಾಯಿತಾದರೂ, ರಾಜಧಾನಿಯನ್ನು ಅರಾಜಕವಾಗಿ ಬಿಟ್ಟಿರುವುದು ಯುಕ್ತವೆಂದು ತೋರಲಿಲ್ಲ. ಮೇಲೆ ಹೇಳಿದಂತೆ ನಾಲ್ಕು ಪಂಗಡಗಳಾಗಿದ್ದ ಪ್ರಜಾವರ್ಗದಲ್ಲಿ ಈ ಕಾರಣದಿಂದ ಪರಸ್ಪರ ವಿರುದ್ಧಾಭಿಪ್ರಾಯಗಳು ಬೆಳೆದು ಪ್ರಜಾಕ್ಷೋಭೆಗೆ ಅವಕಾಶವುಂಟಾಗಬಹುದೆಂದು ಯೋಚಿಸಿ, ಒಡನೆ, ರಾಜಧಾನಿಗೆ ಬಂದು ಕ್ಷುಬ್ಧವಾತಾವರಣವನ್ನು ಶಾಂತಗೊಳಿಸಿದನು. ಮಂಗಳೇಶನ ಮರಣ ಕಾರಣವು ಇಂಥದೆಂದು ಸ್ಪಷ್ಟವಾಗಿ ತಿಳಿಯಲಿಲ್ಲ. ಅವನ ಮರಣದಲ್ಲಿ ಪುಲಿಕೇಶಿಯ ಸಂಬಂಧವಿದ್ದಿತೋ ಇಲ್ಲವೋ ಎಂಬುದು ಎಲ್ಲೂ ಸ್ಪಷ್ಟವಾಗಿ ಹೊರಪಟ್ಟಿಲ್ಲ. ಮೇಲ್ಕಂಡಂತೆ ಉಪಾಯಾಂತರದಿಂದ ರಾಜಪುತ್ರನು ರಾಜಧಾನಿಯಿಂದ ಹೊರಬಿದ್ದ ಸಂದರ್ಭದಲ್ಲಿ, ತರುಣರಾಜನ ಪಂಗಡದವನೊಬ್ಬನು ಆ ದುರುಳನಮೇಲೆ ಬಿದ್ದು ಘಾತಿಸಿ ಕೊಂದಿರಬಹುದು. ಅಥವ ಅವನು ವಿರೋಧಿ ಪಕ್ಷದವರ ವಿಷಪ್ರಯೋಗದಿಂದ ಮೃತನಾಗಿರಬಹುದು. ಎಂತೂ ತನ್ನ ಸೋದರನ ಮಗನಿಗೆ ದ್ರೋಹಮಾಡಿಯಾದರೂ ಧೂರ್ತ ರೀತಿಯಿಂದ ಸಿಂಹಾಸನಾಕ್ರಮಣ ಮಾಡಿ ಚಾಲುಕ್ಯ ಚಕ್ರೇಶ್ವರನೆಂದು ಮಕುಟಾಭಿಷಿಕ್ತನಾಗಲೆಣಿಸಿದ್ದ ಮಂಗಳೇಶನು, ದುರ್ಮರಣದಿಂದ ಅಸುವನ್ನು ನೀಗಿ, ಅಪಕೀರ್ತಿಯ ಆಸ್ತಿಯನ್ನು ಗಳಿಸಿಕೊಂಡು 'ಏನಕೇನ ಪ್ರಕಾರೇಣ' ಚರಿತ್ರೆಯಲ್ಲಿ ಪ್ರಸಿದ್ಧ ಪುರುಷನೇ ಆದನು.



## ಅಧ್ಯಾಯ ೩ "ದಿಗ್ವಿಜಯಯಾತ್ರೆ"

ಕ್ರಿ. ಶ. ೬೦೮ನೆಯ ಸಂವತ್ಸರದಲ್ಲಿ ಮಂಗಳೇಶನು ಮೇಲ್ಕಂಡಂತೆ ದುರ್ಮರಣಕ್ಕೆ ತುತ್ತಾಗಲು, ಪುಲಿಕೇಶಿಯೇ ರಾಜ್ಯಾಧಿಕಾರವನ್ನು ಸ್ವೀಕರಿಸಬೇಕಾಯಿತು. ಚಾಲುಕ್ಯ ರಾಜಮನೆತನದಲ್ಲಿ ಒಡಕುಹುಟ್ಟಿದ ಸಂಗತಿಯು ಮಂಗಳೇಶನ ಜೀವಿತ ಕಾಲದಲ್ಲೇ ಸುತ್ತಮುತ್ತಲೂ ಹಬ್ಬಿದ್ದುದರಿಂದ, ರಾಜ್ಯಾಕಾಂಕ್ಷಿಗಳಾದ ಹಲವರು ರಾಜರು, ಬಾದಾಮಿಯ ರಾಜ್ಯಾಧಿಪತ್ಯವನ್ನು ಹಾರೈಸಿ ಸಮಯ ನಿರೀಕ್ಷಣೆಯಲ್ಲಿದ್ದರು. ಸಾಲದುದಕ್ಕೆ, ಮಂಗಳೇಶನೇ ತನ್ನ ಕೈಕೆಳಗಿನ ಅನೇಕಮಂದಿ ರಾಜರಿಗೆ, ತಮ್ಮತಮ್ಮ ಸೇನೆಗಳೊಂದಿಗೆ ಸರ್ವಸಿದ್ಧತೆಯಿಂದ ಇದ್ದು ತಾನು ಹೇಳಿ ಕಳುಹಿಸಿದ ಒಡನೆಯೇ, ಸಹಾಯಕ್ಕಾಗಿ ಬರಬೇಕೆಂದು ಗುಪ್ತ ಪತ್ರಗಳನ್ನು ಬರೆದಿದ್ದನು. ಅನೇಕಮಂದಿ, ಅವನ ಅಭಿಪ್ರಾಯವನ್ನು ಒಪ್ಪಿಕೊಂಡು ಸಿದ್ಧಪಡಿಸಿಕೊಂಡು ಇದ್ದರು. ಹಾಗೆ ಆತನ ಹಿತಾಕಾಂಕ್ಷಿಗಳಾಗಿ, ತಮ್ಮ ಸರ್ವಶಕ್ತಿಯಿಂದ ಆತನಿಗೆ ಬೆಂಬಲರಾಗಿ ನಿಲ್ಲಲು ಯೋಚಿಸಿದ್ದವರಲ್ಲಿ, ಭೀಮಾನದಿಯ ಉತ್ತರ ಪ್ರದೇಶದಲ್ಲಿ ಆಧಿಪತ್ಯಮಾಡುತ್ತಿದ್ದ ಅಪ್ಪಾಯಿಕ ಮತ್ತು ಗೋವಿಂದ ಎಂಬಿಬ್ಬರು ಮಾಂಡಲಿಕರು ಮುಖ್ಯರು. ಅವರು, ಬಹು ದುಡುಕು ಸ್ವಭಾವದವರೂ ಮದಮಾತ್ಸರ್ಯ ಪೂರಿತರೂ ಮಹತ್ವಾಕಾಂಕ್ಷಿಗಳೂ ಆಗಿದ್ದರು. ಪ್ರಬಲನೂ ಬಾದಾಮಿಯ ಅರಸನೂ ಆದ ಮಂಗಳೇಶನೇ ತಮ್ಮ ಸಹಾಯವನ್ನಪೇಕ್ಷಿಸಿದುದರಿಂದ ತಮ್ಮ ಪ್ರತಿಷ್ಠೆಯು ಎಷ್ಟು ಹೆಚ್ಚಿನದೆಂಬ ಅಹಂಕಾರವು ಅವರ ತಲೆಯನ್ನು ತಿರುಗಿಸಿದ್ದಿತು. ಹೀಗೆ ಪ್ರತಿಷ್ಠಾಕಾಮಿಗಳಾಗಿ ಮಂಗಳೇಶನಿಂದ ಕರೆ ಬಂದೊಡನೆಯೇ, ದಿಗ್ವಿಜಯಯಾತ್ರೆಗೆ ಪ್ರಯಾಣಮಾಡಬೇಕೆಂದು ಸರ್ವಸನ್ನಾಹದಿಂದ ಸಿದ್ಧರಾಗಿ ಕುಳಿತು ಒಂಟಿಗಾಲಿನಿಂದ ನಿಂತಿದ್ದ ಅವರಿಗೆ ಮಂಗಳೇಶನು ಮೃತನಾದನು ಎಂಬ ವಾರ್ತೆಯು ಸಿಡಿಲಿನಂತೆ ಕೇಳಿಸಿತು. ತಮ್ಮ ಮಿತ್ರನಾದ ಅವನನ್ನು ಕೊಲೆ ಮಾಡಿದವರನ್ನು ಶಿಕ್ಷಿಸತಕ್ಕುದು ತಮ್ಮ ಕರ್ತವ್ಯವೆಂದು ಬಗೆದರು. ಮುಂದಾಲೋಚನೆಯನ್ನು ಮಾಡಲರಿಯದ ಆ ಪುಂಡಮಾಂಡಲಿಕರು, ಸ್ವಶಕ್ತಿ ಪರಶಕ್ತಿಗಳನ್ನು ಕುರಿತು ಸಹ ವಿಚಾರಮಾಡುವಷ್ಟು ಸಾಮರ್ಥ್ಯ

ವಿಲ್ಲದೆ ಏಕಾಏಕಿ ಬಾದಾಮಿ ರಾಜಧಾನಿಯಮೇಲೆ ದಂಡೆತ್ತಿ ಹೊರಟರು. ರಾಜತಂತ್ರಕುಶಲನೂ ವೀರನೂ ಆದ ತರುಣ ಪುಲಿಕೇಶಿಯು, ರಾಜಕಾರ್ಯವು ಆ ಸ್ಥಿತಿಯಲ್ಲಿದ್ದರೆ, ಪರರಾಜರು ತಪ್ಪದೆ ದಂಡೆತ್ತಿಬರುವರೆಂಬುದನ್ನು ಊಹಿಸಿ ಮೊದಲೇ ಸಿದ್ಧನಾಗಿದ್ದುದರಿಂದ, ಪ್ರಾರಂಭಕ್ಕೆ ಬಂದ ಗೋವಿಂದನೆಂಬುವನನ್ನು ಸಾಮದಾನೋಪಾಯಗಳಿಂದ ವಶಪಡಿಸಿಕೊಂಡನು. ತರುವಾಯ ಅಪ್ಪಾಯಿಕನ ದಂಡು ರಾಜಧಾನಿಯನ್ನು ಸಮೀಪಿಸಿದೊಡನೆಯೇ, ಪುಲಿಕೇಶಿಯು ತನ್ನ ಸಮಸ್ತ ಬಲದೊಂದಿಗೂ ಅವನಮೇಲೆ ಬಿದ್ದು ಬದಿಬೋಡಿಸಿದನು. ಸಂಪೂರ್ಣವಾಗಿ ಪರಾಜಿತನಾದ ಆ ಪುಂಡ ಮಾಂಡಲಿಕನು ಪುನಃ ಬಾದಾಮಿಯಕಡೆ ತಿರುಗಿನೋಡದಂತೆ-ದಿಕ್ಕುದೆಸೆಗಳನ್ನರಿಯದೆ ಓಡಿಹೋದನು.

ಈ ಜಯದಿಂದ ಪುಲಿಕೇಶಿಯು ಸಂತುಷ್ಟನಾದರೂ ಮುಂದೆ ನಿರಾತಂಕವಾಗಿ ರಾಜಧಾನಿಯಲ್ಲಿ ಕುಳಿತುಕೊಳ್ಳುವಂತಿರಲಿಲ್ಲ. ಸ್ವಾರ್ಥಿಯಾದ ಮಂಗಳೇಶನ ಅವ್ಯವಸ್ಥಿತ ಆಡಳಿತದಿಂದ, ದೇಶದ ಅನೇಕ ಸ್ಥಳಗಳಲ್ಲಿ ಅಧಿಕಾರದ ಬಿಗಿ ತಪ್ಪಿತ್ತು. ಅಂತಹ ಅವ್ಯವಸ್ಥ ಸ್ಥಿತಿಯಲ್ಲೇ ಅದನ್ನು ಇನ್ನೂ ಅಷ್ಟು ಕೆಳಕ್ಕೆ ಒತ್ತಿ ಚಾಲುಕ್ಯ ರಾಜವಂಶವನ್ನು ನಿರ್ನಾಮವಾಗಿಸಬೇಕೆಂದು ಹೊಂಚಿ ಕುಳಿತಿದ್ದ ಮಾಂಡಲಿಕರು ಇನ್ನೂ ಹಲವರಿದ್ದರು. ಮೇಲ್ಕಂಡ ಅಪ್ಪಾಯಿಕ ಗೋವಿಂದರ ಪರಾಭವವಾರ್ತೆಯು ಎಲ್ಲೆಡೆಯಲ್ಲೂ ಹಬ್ಬಲು, ಹಾಗೆ ಯೋಚಿಸಿದ್ದ ತಾವು ಒಬ್ಬೊಬ್ಬರಾಗಿ ದಂಡೆತ್ತಿಬರುವುದಕ್ಕಿಂತಲೂ ಎಲ್ಲರೂ ಏಕವಾಗಿ ವಿಶೇಷಬಲದೊಂದಿಗೆ ಬಾದಾಮಿಯಮೇಲೆ ಏರಿಹೋಗುವುದು ಸೂಕ್ತವೆಂದು ನಿಶ್ಚಯಿಸಿಕೊಂಡರು. ಮೇಲ್ಕಂಡಂತೆ ಆ ಇಬ್ಬರು ಮಾಂಡಲಿಕರನ್ನು ಪರಾಭವಗೊಳಿಸಿದ ನಂತರ ಪುಲಿಕೇಶಿಯು ವಿಶ್ರಾಂತಿ ತೆಗೆದುಕೊಳ್ಳಲಾಶಿಸಿ ರಾಜಧಾನಿಯಲ್ಲಿ ಕುಳಿತಿದ್ದನಾದರೆ, ಅವರೆಲ್ಲರೂ ತಮ್ಮ ಬಲವನ್ನು ವೃದ್ಧಿಗೊಳಿಸಿಕೊಂಡು ಅವನನ್ನೂ ಅವನ ರಾಜ್ಯವನ್ನೂ ನಿರ್ನಾಮವನ್ನಾಗಿಸುವುದು ಅತಿಶಯವಾಗಿರಲಿಲ್ಲ. ಆದರೆ ಆ ನಮ್ಮ ತರುಣವೀರನು ದೇಶಸ್ಥಿತಿಯನ್ನು ಕುರಿತು ದೀರ್ಘವಾಗಿ ಯೋಚಿಸಿದ್ದನಾದುದರಿಂದ, ಆ ವೇಳೆಯಲ್ಲಿ ಆಲಸನಾದರೆ, ಶತ್ರುಗಳು ಪ್ರಬಲಿಸುವರೆಂಬ ಸಂಗತಿಯನ್ನು ಅರಿತವನಾಗಿ, ಅವರಿಗೆ ತಮ್ಮ ಸ್ಥಿತಿಯೆಂತಿರುವುದೆಂದು ಯೋಚಿಸಿಕೊಳ್ಳ

ಲಿಕರ್ಗೆ ಅವಕಾಶಕೊಡದಂತೆ ಮಾಡಬೇಕೆಂದು ಬಗೆದು, ನಿದ್ರಾಹಾರಗಳನ್ನು ಅಪೇಕ್ಷಿಸದೆ, ಕಷ್ಟನಷ್ಟಗಳನ್ನು ಗಮನಿಸದೆ, ಕದಂಬರಾಜ್ಯದಮೇಲೆ ದಂಡೆತ್ತಿದನು. ತಮ್ಮ ಪರಸ್ಪರ ಒಪ್ಪಂದದಂತೆ, ಮಾಂಡಲಿಕರು ಒಬ್ಬೊಬ್ಬರಾಗಿ ಸಹಾಯಕ್ಕೆ ಬರುತ್ತಿದ್ದಾರೆಂದು ಎಣಿಸಿಕೊಂಡು ಕುಳಿತಿದ್ದಂತೆಯೇ, ಬಾದಾಮಿಯ ಪುಲಿಕೇಶಿಯ ಪ್ರಬಲದಂಡು ಬನವಾಸಿ ರಾಜಧಾನಿಯನ್ನು ಸಮೀಪಿಸಿ ರಾಜನಗರಿಯ ಹೊರವಳಯದಲ್ಲಿ ಬೀಡುಬಿಟ್ಟಿತು.

ತನ್ನ ರಾಜಧಾನಿಯಕಡೆ ಸಾಗಿಬರುತ್ತಿದ್ದುದು ತನ್ನ ಮಿತ್ರಮಂಡಲಿಯವರ ದಂಡೆಂದು ತಿಳಿದು ನೈಮರೆತು ಕುಳಿತಿದ್ದ ಕದಂಬ ಅರಸನು, ತಾನು ಯಾರಮೇಲೆ ದಂಡೆತ್ತಬೇಕೆಂದು ಹವಣಿಸಿಕೊಂಡಿದ್ದನೋ, ಆ ಚಾಲುಕ್ಯ ವೀರಪುಲಿಕೇಶಿಯೇ ಪ್ರಬಲಸೈನ್ಯದೊಂದಿಗೆ ಬಂದಿದ್ದಾನೆಂಬ ವಾರ್ತೆಯನ್ನು ಕೇಳಿ, ಗಾಬರಿಯಾದನು. ಅವನ ಧೈರ್ಯಜಲದ ಒರತೆಯು ಬತ್ತಿಹೋಯಿತು. ಮುಂದೇನು ಮಾಡಬೇಕೆಂದು ತೋರದೆ ಕಂಗೆಟ್ಟು ಕುಳಿತನು. ಶತ್ರುಸೇನೆಯು ರಾಜಧಾನಿಯ ಸುತ್ತಲೂ ಆಕ್ರಮಿಸಿ ಕುಳಿತಿದ್ದುದರಿಂದ ತಾನು ಯೋಚಿಸಿದ್ದಂತೆ ಹೊರಗಿನ ಯಾವ ಸಹಾಯವೂ ಒದಗಲು ಅವಕಾಶವಿರಲಿಲ್ಲ. ಊರೊಳಗೆ ಇದ್ದ ತನ್ನ ಸ್ವಂತಸೈನ್ಯವು ಬಹು ಪ್ರಬಲಸಂಖ್ಯೆಯ ಚಾಲುಕ್ಯಸೈನ್ಯವನ್ನು ಎದುರಿಸಲು ಅಸಮರ್ಥವಾಗಿದ್ದಿತು. ಆದರೂ ಮುಂದೆ ಮಾಡುವುದೇನು ? ಇದ್ದುದರಲ್ಲೇ ಸ್ವಲ್ಪ ಸೈನ್ಯವನ್ನು ನಗರರಕ್ಷಣೆಗಾಗಿ ಬಿಟ್ಟು ಮಿಕ್ಕುದನ್ನು ತೆಗೆದುಕೊಂಡು ಶತ್ರುಸೈನ್ಯಕ್ಕೆ ಯುದ್ಧಭಿಕ್ಷೆಯನ್ನು ಕೊಡಲು ಎದುರಾದನು. ಆ ನಗರವಾಸಿಗಳೂ ಆಗ ಹಿಂದುಳಿಯದೆ ತಮ್ಮ ಹೆಂಡಿರುಮಕ್ಕಳನ್ನು ಒಂದೆಡೆ ಭದ್ರವಾಗಿರಿಸಿ, ತಮ್ಮ ಸೈನಿಕರಿಗೆ ಬೆಂಬಲರಾಗಿ ಹಗೆಗಳೊಡನೆ ಹೋರಾಡಲು ನಡುಕಟ್ಟಿ ಸಿದ್ಧರಾದರು. ಆದರೂ ಸುಶಿಕ್ಷಿತವಾದ ಪ್ರಬಲ ಚಾಲುಕ್ಯಸೈನ್ಯದ ವೇಗವನ್ನು ತಡೆದುನಿಲ್ಲುವುದು ಬನವಾಸಿಯ ಸೈನ್ಯಕ್ಕೆ ಸಾಧ್ಯವಾಗಲಿಲ್ಲ. ಎರಡುಮೂರು ಕಾಳಗಗಳಲ್ಲೇ ಕದಂಬ ಅರಸನ ಸೈನ್ಯವು ಹಣ್ಣಾಯಿತು. ಸಾಲದುದಕ್ಕೆ, ಪಟ್ಟಣದಲ್ಲಿ ಆಹಾರಸಾಮಗ್ರಿಯಿಲ್ಲದೆ ಹೊರಗಿನಿಂದಲೂ ಏನೂ ಸಹಾಯವೊದಗದೆ ಹೋದ್ದರಿಂದ, ಹೀಗೆ ಅವರ ಸ್ಥಿತಿಯು ಬಹು ಶೋಚನೀಯವಾಯಿತು. ಶತ್ರುಸೇನೆಯೊಂದಿಗೆ ಯುದ್ಧಮಾಡಿ ಸಾಯುವವರ ಸಂಖ್ಯೆಗಿಂ

ತಲೂ, ಕೊಳ್ಳಿಲ್ಲದೆ ಕೊರಗಿ ಸಾಯುವವರ ಸಂಖ್ಯೆಯೇ ಹೆಚ್ಚಾಯಿತು. ಈ ಸ್ಥಿತಿಯು ಕದಂಬರಾಜನ ಕರುಳನ್ನು ಮರುಗಿಸಿತು, ಹೃದಯವನ್ನು ಕರಗಿಸಿತು. ತನ್ನ ಪ್ರಜೆಗಳ ನಿಷ್ಕಾರಣನಾಶವನ್ನು ನೋಡಲಾರದೆ ಆ ರಾಜನು ತನ್ನ ಪ್ರತಿಷ್ಠೆಯನ್ನು ಹಿಂದಕ್ಕಿಟ್ಟು, ವೀರಶಿರೋಮಣಿಯಾದ ಪುಲಿಕೇಶಿರಾಜನಿಗೆ ಶರಣಾಗತನಾದನು. ಉದಾರಹೃದಯದ ಪುಲಿಕೇಶಿಯಾದರೂ ಅವನನ್ನು ಆದರಿಸಿ ಜೀವದೊಂದಿಗೆ ರಕ್ಷಿಸಿದನು. ಬನವಾಸಿ ರಾಜ್ಯವನ್ನು ತನ್ನ ಆಡಳಿತಕ್ಕೆ ತೆಗೆದುಕೊಂಡು ಅಲ್ಲಿಗೊಬ್ಬ ಮಾಂಡಲಾಧಿಪನನ್ನು ನಿಯಮಿಸಿದನು. ವಿಜಯಿಯಾದ ಚಾಲುಕ್ಯಸೈನ್ಯವು, ರಾಜಧಾನಿಯಲ್ಲಿ ಕೊಲೆಸುಲಿಗೆಗಳನ್ನು ಮಾಡಕೂಡದೆಂದು ಪುಲಿಕೇಶಿರಾಜನ ಕಟ್ಟಪ್ಪಣೆಯಾಯಿತು. ಹೀಗೆ ವಿಜಯ ಲಕ್ಷ್ಮಿಯಿಂದ ಮಾಲಿಕೆಯನ್ನು ಸ್ವೀಕರಿಸಿ ಚಾಲುಕ್ಯ ರಾಜಶೇಖರನು, ಸೈನ್ಯದೊಂದಿಗೆ ನಾಲ್ಕು ದಿನಗಳು ಬನವಾಸಿಯಲ್ಲಿ ವಿಶ್ರಾಂತಿಹೊಂದಲಪೇಕ್ಷಿಸಿದನು.

ತರುಣವೀರ ಪುಲಿಕೇಶಿರಾಜನು ವಿಶ್ರಾಂತಿಗಾಗಿ ನಿಂತನೆಂದರೆ ಯುದ್ಧಗಳಿಂದ ಆಯಾಸಹೊಂದಿ ಮುಂದೆ ಆ ಪ್ರಯತ್ನನಿಂದ ವಿಮುಖನಾಗಿ ಕುಳಿತನೆಂದು ಅರ್ಥವಲ್ಲ! ಗಂಗರಸರು ಕದಂಬರಿಗೆ ಸಹಾಯವಾಗಿ ಬರಲು ಎಣಿಸಿದ್ದರು. ಅವರನ್ನು ಹಣಿದು ಹಿಂದಕ್ಕಟ್ಟದಿದ್ದರೆ ಕದಂಬರ ಮೇಲೆ ಆದ ವಿಜಯವೂ ನಿರರ್ಥಕವೇ ಆಗುವಂತಿದ್ದಿತು. ಆದುದರಿಂದ ಕೇವಲ ಒಂದೆರಡು ದಿನಗಳು ಮಾತ್ರ, ಬನವಾಸಿಯಲ್ಲಿ ಉಳಿದಿದ್ದು, ಒಡನೆ ಪ್ರಯಾಣಮಾಡಿ ಗಂಗರಾಜರಮೇಲೆ ದಂಡೆತ್ತಿ ಹೊರಟನು.

ಮಂಗಳೇಶನ ತರುವಾಯ, ರಾಜ್ಯಸೂತ್ರಗಳನ್ನು ತನ್ನ ಕೈಗೆ ತೆಗೆದುಕೊಂಡ ಅತ್ಯಲ್ಪ ಕಾಲದೊಳಗಾಗಿಯೇ ಹಲವು ಶತ್ರುಗಳನ್ನು ಲಕ್ಷ್ಯವೇಯಿಲ್ಲದೆ ಜಯಿಸಿ ಮುಂದೆ ನುಗ್ಗುತ್ತಿದ್ದ ವೀರಶಿರೋಮಣಿಯ ಪ್ರತಾಪಭೇರಿಯು ಈವರೆಗೇ ಕರ್ಣಾಟಕದ ಸಕಲ ದಿಗ್ದೆಸೆಗಳಲ್ಲಿಯೂ ಮೊಳಗತೊಡಗಿದ್ದಿತು. ರಣ ಭೀಮನಾದ ಆತನನ್ನು ಯುದ್ಧರಂಗದಲ್ಲಿ ಎದುರಿಸಿ ಪ್ರಾಣದೊಂದಿಗೆ ಹಿಂದಿರುಗುವುದು ಅಸಾಧ್ಯವೆಂಬ ಮಾತು ದಕ್ಷಿಣ ಕರ್ಣಾಟಕದಲ್ಲೆಲ್ಲ ಹಬ್ಬಿದ್ದಿತು. ಚಾಲುಕ್ಯವೀರನ ಅದ್ವಿತೀಯ ಪರಾಕ್ರಮ ವಿಚಾರವೂ ಆ ಅಸಹಾಯಶೂರನ ಯುದ್ಧ ವಿದ್ಯಾಚಾತುರ್ಯವೂ ಗಂಗರಾಜನ

ಕಿವಿಗೂ ಬಿದ್ದಿತು. ವಿವೇಕಿಯೂ ಸಮಯಜ್ಞನೂ ಆದ ಆತನು ಈ ಸ್ಥಿತಿಯಲ್ಲಿ ಚಾಲುಕ್ಯ ಸೈನ್ಯದೊಂದಿಗೆ ಹೋರಲೆತ್ನಿಸುವುದು ಬುದ್ಧಿಗೇಡಿತನವೆಂದು ತಿಳಿದುಕೊಂಡು, ಆತನೊಡನೆ ಮೈತ್ರಿಯನ್ನಪೇಕ್ಷಿಸಿ, ವಿಶೇಷ ವಸ್ತ್ರಾಭರಣಗಳೊಂದಿಗೆ ತನ್ನ ರಾಯಭಾರಿಯನ್ನು ಕಳುಹಿಸಿದನು. ಹಾಗೆ ಅನಪೇಕ್ಷಿತವಾಗಿಯೂ ಆಕಸ್ಮಾತ್ತಾಗಿಯೂ ಪ್ರಾಪ್ತವಾದ ಜಯಲಾಭವನ್ನು ಎಂತಹ ಅವಿವೇಕಿಯಾದರೂ ಕಾಲಿಲೊದ್ದು ಯುದ್ಧಕ್ಕೆ ಕಾಲುಕೆದರುವನೇ ? ಪುಲಿಕೇಶಿಯು, ಬಹು ಆದರದಿಂದ ಆ ರಾಯಭಾರಿಯನ್ನು ಬರಮಾಡಿಕೊಂಡು ಆದರಿಸಿ, ಆತನೇ ಮನವೊಪ್ಪಿ ಹೇಳಿಕಳುಹಿಸಿದ್ದ ನಿಬಂಧನೆಗಳಿಗೆ ಸಮ್ಮತಿಸಿ ಗಂಗರಾಜನನ್ನು ಮಿತ್ರನನ್ನಾಗಿ ಸ್ವೀಕರಿಸಿ ಪ್ರತಿಯಾಗಿ ವಸ್ತ್ರಭೂಷಣಾದಿಗಳನ್ನು ಕೊಡಿಸಿ, ಪ್ರೇಮಪೂರ್ಣ ಸಂದೇಶವನ್ನೂ ಕಳುಹಿಸಿದನು. ಸ್ವಪ್ರತಿಷ್ಠೆಯಿಂದ ಉಬ್ಬಿ ತನ್ನ ಸ್ವಾಮ್ಯವನ್ನು ಪ್ರತಿಭಟಿಸದೆ, ವಿಧೇಯರಾಗಿ ಶರಣು ಬಂದವರನ್ನು ಮನ್ನಿಸುವಲ್ಲಿ, ಪುಲಿಕೇಶಿ ರಾಜನಲ್ಲಿದ್ದ ದಯಾಸ್ವಭಾವದ ವೃತ್ತಾಂತವಾದರೂ ಒಡನೆ ಹಬ್ಬಿತು. ಗಂಗರಸನು ಶರಣುಬಂದ ನಂತರ ಬಹು ಸ್ವಲ್ಪ ಕಾಲದಲ್ಲೇ ಬನವಾಸಿಯ ಈಶಾನ್ಯದಲ್ಲಿದ್ದ ಇಡುವೊಳಲನ್ನು ಆಳುತ್ತಿದ್ದ ನಾಗಕುಲದ ಅಲೂಪ ಅರಸನೂ ಪುಲಿಕೇಶಿರಾಜನ ಸಾಮಂತನಾಗಿರಲು ಸಮ್ಮತಿಸಿ, ಆತನ ಮಿತ್ರತ್ವವನ್ನಪೇಕ್ಷಿಸಿ ರಾಯಭಾರಿಯನ್ನು ಕಳುಹಿಸಿದನು. ಚಾಲುಕ್ಯ ವೀರನು ಆತನನ್ನೂ ಉಚಿತವಚನಗಳಿಂದ ಆದರಿಸಿ, ಅಲೂಪರಾಜನಿಗೆ ಆ ಪ್ರಾಂತದ ಮಂಡಲಾಧಿಪತ್ಯವನ್ನೇ ಪುನಃ ವಹಿಸಿ, ತನಗೆ ಸಾಮಂತನಾಗಿ ಆಳಿಕೊಂಡು ಬರಲು ನಿಯಮಿಸಿದನು.

ಕೀರ್ತಿವರ್ಮನ ಕಾಲದಲ್ಲಿ ಕೊಂಕಣ ಪ್ರಾಂತವು ಜಯಿಸಲ್ಪಟ್ಟು ಚಾಲುಕ್ಯ ಪ್ರಭುತ್ವಕ್ಕೆ ಅಧೀನವಾಗಿದ್ದಿತಲ್ಲವೆ ? ಈಚೆಗೆ ಮಂಗಳೇಶನ ಆಳ್ವಿಕೆಯ ಕೊನೆಯ ಭಾಗದಲ್ಲಿ ನಡೆದ ಅವ್ಯವಸ್ಥೆಯಿಂದ ರಾಜ್ಯಭಾರದ ಬಿಗಿ ತಪ್ಪಿದುದರಿಂದ ಅದೇ ಸುಸಮಯವೆಂದು ಯೋಚಿಸಿ ಕೊಂಕಣ ಪ್ರಾಂತದ ಮಂಡಲಾಧಿಪನು ತಾನೂ ಸ್ವತಂತ್ರನಾಗಲಿಚ್ಛಿಸಿ, ಪುಲಿಕೇಶಿಯಮೇಲೆ ತಿರುಗಿ ಬಿದ್ದನು. ಅರಿವೀರನ ವಿನಯ ವಿಧೇಯತೆಗಳಿಗೆ, ಬೆಣ್ಣೆಯಂತೆ ಕರಗಿ ವಶವಾಗಿ ದಯಾಮೃತ ಪ್ರವಾಹವನ್ನು ಸುರಿಸುವ ವೀರ ಪುಲಿಕೇಶಿಯ

ಹೃದಯವು, ದಾಂಭದರ್ಪಗಳಿಗೆ ಪ್ರತಿಭಟಿಸಿ ಎದುರಿಸುವಲ್ಲಿ ವಜ್ರಮಯ ಗುರಾಣಿಯಂತೆ ಕಾಠಿಣ್ಯವನ್ನು ವಹಿಸುತ್ತಿತ್ತು. ಹಾಗೆ ತನಗೆ ವಿರೋಧವಾಗಿ ನಡೆದ ಆ ಮೌರ್ಯರಾಜನನ್ನು ಜಯಿಸಿ ಹಣಿದು ಹಣ್ಣು ಮಾಡದಿದ್ದರೆ, ಪ್ರತಿಷ್ಠೆಗೆ ಕುಂದು ಬರುವುದು ಮಾತ್ರವಲ್ಲದೆ, ಅವನ ಆಶ್ರಯದಲ್ಲಿ ಶತ್ರುವರ್ಗವು ಬೆಳೆಯಲು ಅವಕಾಶವಾಗುವುದೆಂದಾದರೂ ಆ ಪ್ರಾಜ್ಞನು ಯೋಚಿಸದಿರಲಿಲ್ಲ. ಗುಡ್ಡಬೆಟ್ಟಗಳಿಂದ ಆವೃತವಾದ, ತನ್ನ ರಾಜಧಾನಿಯಮೇಲೆ ಪುಲಿಕೇಶಿಯ ಆನೆ ಕುದುರೆಗಳ ಸೈನ್ಯಸಹಾಯವು ಉಪಯೋಗಪಡಲಾರದೆಂದೂ ಆದುದರಿಂದ ತನ್ನ ರಾಜಧಾನಿಯು ಸರಕ್ಷಿತವಾಗಿರಬಲ್ಲುದೆಂದೂ ಎಣಿಸಿ ಹೆಮ್ಮೆಯಿಂದ ವೈಮರೆತಿದ್ದ ಆ ಮೌರ್ಯನನ್ನು ಜಯಿಸಿಯೇ ತೀರಬೇಕೆಂದು ವೀರಸಂಕಲ್ಪಮಾಡಿ, ಪುಲಿಕೇಶಿಯು ಹಡಗುಪಡೆಯ ಸಹಾಯದಿಂದ ತನ್ನ ಸೈನ್ಯವನ್ನು ಸಮುದ್ರ ಮಾರ್ಗವಾಗಿ ಕಳುಹಿಸಿ, ಅವನ ರಾಜಧಾನಿಯಾದ 'ಪುರಿ' ಎಂಬ ಪಟ್ಟಣವನ್ನು ಮುತ್ತಿ ಕೈವಶ ಮಾಡಿಕೊಂಡನು. ಮೌರ್ಯ ಚಾಲುಕ್ಯ ಸೈನ್ಯಗಳೆರಡಕ್ಕೂ ಭಯಂಕರ ಯುದ್ಧವು ಕೈಗಟ್ಟಿ, ಉಭಯದಳಗಳಲ್ಲೂ ಅನೇಕ ಸೈನಿಕರು ಲಯವಾದರು. ಕೊನೆಗೆ ಗರ್ವಿಯಾದ ಆ ಮೌರ್ಯರಾಜನು ಯುದ್ಧದಲ್ಲಿ ಸತ್ತನೋ ಅಥವ ನೋತನೋ ಎಂಬುದಕ್ಕೆ ಎಲ್ಲೂ ಉಲ್ಲೇಖವಿಲ್ಲ. ಅಂತೂ ವಿಜಯಿಯಾದ ಪುಲಿಕೇಶಿಯು, ಕೊಂಕಣಪ್ರಾಂತಕ್ಕೆ ತನ್ನ ಕಡೆಯ ಬೇರೊಬ್ಬ ಮಂಡಲಾಧೀಶನನ್ನು ನಿಯಮಿಸಿ ಆಡಳಿತವನ್ನು ಕ್ರಮಪಡಿಸಿದನು.

ಈವರೆಗೆ ನಮ್ಮ ವೀರಶಿರೋಮಣಿಯಿಂದ ಜಯಿಸಲ್ಪಟ್ಟ ರಾಜ್ಯಗಳೆಲ್ಲವೂ ಚಾಲುಕ್ಯ ಅಧಿಪತ್ಯಕ್ಕೆ, ಇಂದಲ್ಲ-ಹಿಂದೆ ಕೀರ್ತಿವರ್ಮರಾಜನ ಕಾಲದಲ್ಲೇ ಅಧೀನವಾಗಿದ್ದುವು. ಈಚೆಗೆ ಕೈತಪ್ಪಿಹೋಗಿದ್ದ ಅವುಗಳನ್ನು ಪ್ರಾರಂಭಕ್ಕೆ ಜಯಿಸಿ ಸ್ವಾಧೀನಗೊಂಡಲ್ಲದೆ ಹೊಸ ಪ್ರಾಂತಗಳನ್ನು ಜಯಿಸತಕ್ಕುದು ಉಚಿತವಲ್ಲವೆಂದೆಣಿಸಿ ಪುಲಿಕೇಶಿರಾಜನು ಮೇಲ್ಕಂಡಂತೆ ಕೊಂಕಣಾದಿ ಪ್ರಾಂತಗಳ ಆಕ್ರಮಣದಲ್ಲಿ ತೊಡಗಿ ಕೃತಕೃತ್ಯನಾದನು. ಆದರೆ, ಅಷ್ಟು ಪ್ರಾಂತಗಳನ್ನು ಜಯಿಸಿದುದರಿಂದಲೇ ಅತನಿಗೆ ತೃಪ್ತಿಯುಂಟಾಗಲಿಲ್ಲ. ರಾಜ್ಯತೃಷ್ಣೆಯಣಗಲಿಲ್ಲ. ಸಾಧ್ಯವಿರುವಲ್ಲಿ ಹೊಸಪ್ರಾಂತಗಳನ್ನೂ ಜಯಿಸಿ ರಾಜ್ಯವನ್ನು ಪಕೆ ವಿಸ್ತರಿಸಬಾರದೆಂದು ಯೋಚಿಸಿದನು. ಆವೇಳೆಗೆ

ಒಂದು ಸುಸಂದರ್ಭವೂ ದೊರೆಯಿತು. ಕೊಂಕಣದಲ್ಲಿ ಪರಾಜಿತನಾದ ಮೌರ್ಯರಾಜನು, ಲಾಟರನ್ನು ಮಾಳವ ಗುರ್ಜರರಾಜರನ್ನು ಆಶ್ರಯಿಸಿ, ಅವರ ಬೆಂಬಲವನ್ನು ಪಡೆದು ಚಾಲುಕ್ಯವಿಕ್ರಮಿ ಪುಲಿಕೇಶಿಯಮೇಲೆ ಪುನಃ ದಂಡೆತ್ತಿ ಹೊರಡಬೇಕೆಂದು ಹವಣಿಸಿದ್ದಾನೆಂಬ ವಾರ್ತೆ ಬಂತು. ಒಡನೆ ಕ್ಷಣಮಾತ್ರವೂ ಸಾವಕಾಶಮಾಡದೆ ಎದ್ದು ಸೈನ್ಯದೊಡನೆ ಹೊರಟು ಅವರ ರಾಜ್ಯಗಳಮೇಲೆ ಏರಿಹೋದನು. ಅವರೂ ಸೈನ್ಯಸಹಾಯದಿಂದ ಯಥಾಶಕ್ತಿ ಕಾದಿದರಾದರೂ ಪುಲಿಕೇಶಿಯ ಪ್ರಬಲಬಲವನ್ನು ಎದುರಿಸಲಾರದೆ, ಶರಣುಬಿದ್ದು, ಕಪ್ಪಕಾಣಿಕೆಗಳನ್ನೊಪ್ಪಿಸಿ, ಚಾಲುಕ್ಯರಾಜ್ಯಕ್ಕೆ ಸಾಮಂತರೆಂದು ಭಾವಿಸಿ ತಮ್ಮನ್ನು ಕಾಪಾಡಬೇಕೆಂದು ಬೇಡಿಕೊಂಡರು. ಪುಲಿಕೇಶಿಯು ಅದಕ್ಕೊಪ್ಪಿ ಆ ರಾಜ್ಯವನ್ನು ಬಾದಾಮಿಯ ರಾಜ್ಯಭಾರಕ್ಕೆ ಅಂಕಿತವನ್ನಾಗಿ ಮಾಡಿಕೊಂಡು, ಆ ಪ್ರಾಂತಗಳಿಗೆ ಆಯಾ ರಾಜರನ್ನೇ ಮಾಂಡಲಿಕರನ್ನಾಗಿ ಇಟ್ಟು ದಿಗ್ವಿಜಯಯಾತ್ರೆಯನ್ನು ಮುಗಿಸಿ, ಜಯಭೇರಿಯನ್ನು ಹೊಡೆಯಿಸಿಕೊಂಡು, ಕಹಳೆ ತುತೂರಿಗಳು ತನ್ನ ವಿಜಯವಾರ್ತೆಗಳನ್ನು ದಿಕ್ಕುದಿಕ್ಕುಗಳಲ್ಲಿಯೂ ಮೊಳಗಿಸುತ್ತಿರಲು, ಭದ್ರಗಜವನ್ನೇರಿ ರಾಜಧಾನಿಯನ್ನು ಹೊಕ್ಕನು.



## ಅಧ್ಯಾಯ ೪ "ಸಾರ್ವಭೌಮಪದ"

ಲಾಟ ಮಾಳವ ಗುರ್ಜರಾಧಿಪರನ್ನು ಸೋಲಿಸಿ ಮಾಂಡಲಿಕರನ್ನಾಗಿ ಮಾಡಿಕೊಂಡು ರಾಜಧಾನಿಗೆ ಬಂದು ಸೇರಿದ ತರುವಾಯವಾದರೂ ಸಮಾಧಾನದಿಂದ ಕುಳ್ಳಿರಲು ನಮ್ಮ ಕಥಾನಾಯಕನಿಗೆ ಸಮಯ ದೊರೆಯಲಿಲ್ಲ. ಆ ರಾಜರು ಈಗಿನ ಸಂಯುಕ್ತ ಪ್ರಾಂತದಲ್ಲಿರುವ ಕನೋಜ್ ಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು, ಉತ್ತರಹಿಂದೂಸ್ಥಾನದಲ್ಲೇ ಪ್ರಬಲತಮ ರಾಜನೆಂದು ಪ್ರಖ್ಯಾತನಾಗಿದ್ದ ಹರ್ಷವರ್ಧನನೆಂಬ ರಾಜನ ಮಾಂಡಲಿಕರಾಗಿದ್ದುದರಿಂದ, ಪುಲಿಕೇಶಿಯು ಅವರನ್ನು ಸೋಲಿಸಿದುದು ತನ್ನನ್ನೇ ಸೋಲಿಸಿದಂತಾಯಿತೆಂದು ಅವನು ಭಾವಿಸಿ, ಬಾದಾಮಿಯ ಈ ಕರ್ಣಾಟ

ವೀರನನ್ನು ದಂಡಿಸಬೇಕೆಂದು ಇಚ್ಛಿಸಿದನು. ಉತ್ತರಭಾರತದ ರಾಜಶ್ರೇಷ್ಠ ಹರ್ಷವರ್ಧನನು ತನ್ನಮೇಲೆ ದಂಡೆತ್ತಿಬರುತ್ತಿರುವನೆಂಬ ಸಂಗತಿಯು ಪುಲಿಕೇಶಿಗೆ ತಿಳಿಯಿತು. ಪುಲಿಕೇಶಿಯಾದರೂ ಸಾಮಾನ್ಯನಲ್ಲ-ಮಹಾ ಬಲಾಢ್ಯ ನರಪತಿ ಎಂಬ ವರ್ತಮಾನವು ಹರ್ಷವರ್ಧನನಿಗೆ ತಿಳಿಯದಿರಲಿಲ್ಲ. ಉಭಯರೂ ಸೈನ್ಯಸಾಮಗ್ರಿಗಳನ್ನು ಸಿದ್ಧಪಡಿಸಿಕೊಳ್ಳತೊಡಗಿದರು. ಹರ್ಷವರ್ಧನನಿಗೆ ಸಹಾಯಕವಾಗಿ ಉತ್ತರಭಾರತದ ಆತನ ಸಾಮಂತರಾಜರೆಲ್ಲರೂ, ವಿಶೇಷ ಸೈನ್ಯವನ್ನೂ ದ್ರವ್ಯವನ್ನೂ ಕಳುಹಿಸಿದರು. ಹಸ್ತ್ಯಶ್ವರಥಪದಾತಿಗಳೆಂಬ ಚತುರಂಗಸೈನ್ಯವು ಒಂದೊಂದು ರಾಜ್ಯದಿಂದಲೂ ಸಾವಿರಸಾವಿರವಾಗಿ ನಡೆದುಬಂದು ಕನೋಜು ರಾಜಧಾನಿಯ ಬಳಿ ಸೇರತೊಡಗಿತು. ಉತ್ತರಭಾರತದವರು ದಾಕ್ಷಿಣಾತ್ಯರೊಂದಿಗೆ ಯುದ್ಧಕ್ಕೆ ಸಿದ್ಧರಾದುದಕ್ಕೆ ಇದೇ ಮೊದಲು. ಒಬ್ಬರೊಬ್ಬರ ಬಲಪ್ರದರ್ಶನಕ್ಕೆ ಅದು ಸಂಧಿಕಾಲವೋ ಎಂಬಂತೆ ಇದ್ದುದರಿಂದ, ಒಬ್ಬೊಬ್ಬ ಸೈನಿಕನೂ ಅತ್ಯಧಿಕ ರಣೋತ್ಸಾಹದಿಂದ ಮುಂಬರಿದಿದ್ದನು. ಹಾಗೆ ಮಹೋತ್ಸಾಹೀ ಯೋಧರಿಂದ ಕೂಡಿ ಶತ್ರುಭೀಕರವೆನ್ನಿಸುವಂತಿದ್ದ ಆ ಸೈನ್ಯವನ್ನು ನಡೆಯಿಸಿಕೊಂಡು ಹರ್ಷವರ್ಧನರಾಜನು ನರ್ಮದಾನದಿಯ ಉತ್ತರದ ದಂಡೆಯನ್ನು ಸಮೀಪಿಸಿ ಅಲ್ಲಿ ಬೀಡುಬಿಟ್ಟನು. ಆದರೆ, ಆ ಮೊದಲೇ ಆ ನದಿಯ ದಕ್ಷಿಣದಂಡೆಯಲ್ಲಿ ಬಂದು ಬೀಡುಬಿಟ್ಟಿದ್ದ ಅಗಾಧಸೈನ್ಯಸಾಗರವು ಯಾರದಿರಬಹುದೆಂಬ ಸಂಶಯವು ಶ್ರೀಹರ್ಷರಾಜನಿಗುಂಟಾಯಿತು. ಬೇಹಿನವರು ವಿಚಾರಿಸುವಲ್ಲಿ ಅದು ಕರ್ಣಾಟಕ ವೀರಾಗ್ರಣಿ ಪುಲಿಕೇಶಿಯದೆಂಬ ಸಂಗತಿಯು ಹೊರಪಟ್ಟಿತು. ಇತ್ತ ಹರ್ಷವರ್ಧನನು ದಕ್ಷಿಣಾಪಥದಮೇಲೆ ಸಾಗಿಬರಲಿದ್ದಾನೆಂಬ ವಾರ್ತೆಯು ಕಿವಿಗೆ ಬಿದ್ದೊಡನೆಯೇ, -ಯುದ್ಧವೆಂದರೆ ಒಂಟಿಗಾಲಿನಿಂದ ನಿಂತಿರುತ್ತಿದ್ದ ಪುಲಿಕೇಶಿಯು ಕ್ಷಣಮಾತ್ರವೂ ಸಾವಕಾಶಮಾಡದೆ, ತನ್ನ ರಾಜ್ಯದ ಎಲ್ಲಾ ಭಾಗಗಳಿಂದಲೂ ಸೈನ್ಯವನ್ನು ತರಿಸಿಕೊಂಡು ಅಗಾಧ ದಂಡಿನೊಡನೆ ಉತ್ತರಾಭಿಮುಖವಾಗಿ ಪ್ರಯಾಣಮಾಡಿ ನರ್ಮದೆಯ ತೆಂಕು ದಂಡೆಯನ್ನು ಸೇರಿ ಅಲ್ಲಿ ಬೀಡುಬಿಟ್ಟಿದ್ದನು. ತನಗಿಂತಲೂ ನಾಲ್ಕುದಿನ ಮುಂಚಿತವಾಗಿಯೇ ಸಿದ್ಧನಾಗಿಬಂದು ಸೈನ್ಯವನ್ನು ಸುವ್ಯವಸ್ಥೆಯಲ್ಲಿಟ್ಟುಕೊಂಡು ಕುಳಿತಿದ್ದ ಆ ಪ್ರತಿವೀರನ ರಣೋತ್ಸಾಹವೂ ಧೈರ್ಯಸಾಮರ್ಥ್ಯಗಳೂ

ಎಷ್ಟಿರಬಹುದೆಂಬ ವಿಷಯದಲ್ಲಿ ಹರ್ಷವರ್ಧನನಿಗೆ ವಿಚಾರವುಂಟಾಗದಿರಲಿಲ್ಲ. ಮುಂದೆ ನಾಲ್ಕಾರು ದಿನಗಳು ಯಾರೂ ಮುಂದರಿಯದೆ ತಟಸ್ಥರಾಗಿ ಸಮಯನಿರೀಕ್ಷಣೆಯಲ್ಲಿದ್ದರು. ಉತ್ತರಭಾರತಕ್ಕೆ ಏಕಚ್ಛತ್ರಾಧಿಪತಿಯಾದ ತನ್ನ ಸ್ವಾಮ್ಯವನ್ನು ಮನ್ನಿಸಿ, ಪುಲಿಕೇಶಿಯು ತನಗೆ ಬಂದು ಶರಣಾಗತನಾಗಬೇಕೆಂಬುದು ಹರ್ಷವರ್ಧನನ ಇಷ್ಟವಾಗಿದ್ದಿತು. ಆದರೆ ಪುಲಿಕೇಶಿಗೆ ಅಂತಹ ಶ್ರೀಮದ್ಗಾಂಭೀರ್ಯವಿರಲಿಲ್ಲ. ನರ್ಮದೆಯ ದಕ್ಷಿಣಪ್ರಾಂತವೆಲ್ಲಾ ಕರ್ಣಾಟಕ ಸಿಂಹಾಸನಕ್ಕೆ ಒಳಪಟ್ಟುದೆಂಬುದಕ್ಕೆ ಶ್ರೀಹರ್ಷನು ಒಡಂಬಡಬೇಕು ಎಂದು ಮಾತ್ರ ಆತನು ಅಪೇಕ್ಷಿಸಿದ್ದನು. ಆದರೆ ಯಾರೊಬ್ಬರ ಇಷ್ಟವೂ ಯುದ್ಧಮುಖದಿಂದಲ್ಲದೆ ಇತ್ಯರ್ಥವಾಗುವಂತಿರಲಿಲ್ಲ. ಪುಲಿಕೇಶಿಯು ತನ್ನ ಅಭಿಪ್ರಾಯವಿದೆಂದು ಸ್ಪಷ್ಟೋಕ್ತಿಯಿಂದ ಹೇಳಿಕಳುಹಿಸಿದನು. ಅದಕ್ಕೆ ಯೋಗ್ಯಸಮಾಧಾನವು ದೊರೆಯಲಿಲ್ಲ. ತನ್ನ ಅಪ್ಪಣೆಯಿಲ್ಲದೆ ತನ್ನ ಸಾಮಂತರಮೇಲೆ ದಂಡೆತ್ತಿಬಂದುದೇಕೆಂದು ಹರ್ಷವರ್ಧನನು ಆಕ್ಷೇಪಿಸಿ ಕೇಳಿದನು. ರಾಯಭಾರಿಗಳ ಮೂಲಕ ಕೆಲದಿನಗಳು ಈ ವಾಗ್ಯುದ್ಧವು ನಡೆದ ತರುವಾಯ ಇನ್ನು ಕತ್ತಿಗಳನ್ನು ಒರೆಗಳಿಂದ ಹೊರಕ್ಕೆ ತೆಗೆಯದೆ ಮುಂದೆ ಪಥ ಸಾಗದೆಂಬುದು ನಿಶ್ಚಯವಾಯಿತು. ಹರ್ಷವರ್ಧನನು ಗೋದಾವರಿಯನ್ನು ದಾಟಿ ಶತ್ರುಸೇನೆಯ ಮೇಲೆ ಬೀಳಲು ತನ್ನ ದಂಡಿಗೆ ಅಪ್ಪಣೆ ಮಾಡಿದನು. ಅವರು ನದಿಯನ್ನು ದಾಟಲು ಹಲವು ಸ್ಥಳಗಳಲ್ಲಿ ಪ್ರಯತ್ನಮಾಡಿದರು. ಆದರೆ, ವೀರಕರ್ಣಾಟಕ ದಂಡಾಳುಗಳು ಅವರಿಗೆ ಅವಕಾಶಕೊಡಲಿಲ್ಲ. ಒಂದೆರಡು ಸ್ಥಳಗಳಲ್ಲಿ ಕನೋಜಿನವರ ಬಲವು ಹೆಚ್ಚಾಗಿ ಅವರು ಮುಂದರಿಸಿದಂತೆ ತೋರಿತು. ಆ ಸ್ಥಳಗಳಲ್ಲಿ ಒಡನೆ ನಮ್ಮ ವೀರಾಗ್ರಣಿ ಪುಲಿಕೇಶಿಯು ಕಾಣಿಸಿಕೊಂಡು, ತನ್ನ ಸೇನೆಯವರಿಗೆ ಒತ್ತಾಸೆಕೊಟ್ಟು ಅರಿಸೈನಿಕರನ್ನು ಹೊಡೆದಟ್ಟಿಸಿದನು. ಉಭಯಸೈನಿಕರೂ ನಿಶಿತಬಾಣಗಳ ಮಳೆಯನ್ನು ಸುರಿಸಿದರು. ಉಭಯದಳದಲ್ಲೂ ಅನೇಕರು ಹತರಾಗಿ ಬಿದ್ದು ನದಿಯಲ್ಲಿ ತೇಲಿಹೋದರು. ನದಿಯನೀರೆಲ್ಲಾ ರಕ್ತಮಯವಾಯಿತು. ಬಾಣಗಳ ಎಸುಗೆಯಿಂದ ದಂಡೆಗಳಲ್ಲಿದ್ದವರನೇಕರು ಮೃತರಾಗಿ ಹೆಣಗಳು ದಿಕ್ಕಾಪಾಲಾಗಿ ಬಿದ್ದುವು. ಕನೋಜಸೈನಿಕರು ಕನ್ನಡಿಗರ ಹೊಡೆತವನ್ನು ಸಹಿಸಿಕೊಂಡು ಮುಂದರಿಯಲು ಸಾ

ಧ್ಯವಿಲ್ಲದೆ ಹಿಂದಕ್ಕೋಡಿದರು. ಆ ಸಮಯವನ್ನೇ ಕಾಯ್ದುಕೊಂಡಿದ್ದ ವೀರಪುಲಿಕೇಶಿಯು ತನ್ನ ಸರ್ವಬಲದೊಂದಿಗೆ ಒಂದೇ ಉಸಿರಿಗೆ ಹರಿಹೋಗಿ ಶ್ರೀಹರ್ಷನ ಸೈನ್ಯದಮೇಲೆ ಬಿದ್ದನು. ಉಭಯಸೈನ್ಯಕ್ಕೂ ಪುನಃ ಕೈ ಕೈ ಕಲೆತು ಘೋರಯುದ್ಧವಾಯಿತು. ಕತ್ತಿಭರ್ಜಿಗಳ ಹೊಡೆತ, ಬಾಣಗಳ ಎಸುಗೆ, ಭರ್ಜಿಗಳ ತಿವಿತ ಇವುಗಳಿಂದ ಶತ್ರುಸೈನಿಕರ ದೇಹಗಳು ಝರ್ಝರಿತವಾದುವು. ಕಿವಿ ಮೂಗುಗಳು ಹರಿದು, ಕೈಕಾಲುಗಳು ಮುರಿದು, ಕಂಠವು ಕತ್ತರಿಸಿ, ಕಣ್ಣುಗುಡ್ಡೆಗಳು ಹೊರಕ್ಕೆ ಬಂದು, ಹೀಗೆ ಸೈನಿಕರ ದೇಹಗಳು ವಿಚಿತ್ರರೀತಿಯಿಂದ ಛೇದಿಸಲ್ಪಟ್ಟು, ಶವಗಳು ರಣಭೂಮಿಯಲ್ಲಿ ರಾಸಿರಾಸಿಯಾಗಿ ಬಿದ್ದುವು. ರಕ್ತವು ಬೆಟ್ಟದ ತಪ್ಪಲಿನ ಹಳ್ಳದಲ್ಲಿ ಹರಿವ ನೀರಿನಂತೆ ನೊರೆಗಟ್ಟಿ ಹರಿಯಸಾಗಿತು. ಭರದಿಂದ ನಾಲ್ಕಾರು ಗಂಟೆಗಳಕಾಲ ಯುದ್ಧವು ನಡೆದ ತರುವಾಯ ಕನೋಜಿನವರ ಬಲವು ಕುಂದಸಾಗಿದಂತೆ ಕನ್ನಡಿಗರ ಭುಜಬಲವಾದರೂ ಕ್ಷಣಕ್ಷಣಕ್ಕೆ ಏರತೊಡಗಿತು. ಹರ್ಷವರ್ಧನನ ಸೈನಿಕರು, ರಣರಂಗದಿಂದ ತಲೆತಪ್ಪಿಸಿಕೊಂಡು ಪ್ರಾಣಭಯದಿಂದ ಓಡಲನುವಾದರು. ರಾಜನೂ ಅವನ ದಳವಾಯಿಗಳೂ ಹೇಗೋ ಪ್ರಾಣವನ್ನುಳಿಸಿಕೊಂಡು ಯುದ್ಧಭೂಮಿಯಿಂದ ಸರಿದುಹೋದರು. ಪುಲಿಕೇಶಿಯ ಕೊರಳಿಗೆ ರಣಲಕ್ಷ್ಮಿಯು ವಿಜಯಮಾಲಿಕೆಯನ್ನು ಹಾಕಿದಳು. ಶತ್ರುಸೈನ್ಯದವರು ಬಿಟ್ಟುಹೋದ ಅಪಾರದ್ರವ್ಯವೂ ವಸ್ತ್ರಾಭರಣಾದಿಗಳೂ, ಯುದ್ಧಸಾಮಗ್ರಿಗಳೂ ಕನ್ನಡಿಗರಿಗೆ ಲಭ್ಯವಾದುವು. ಪುಲಿಕೇಶಿಯು ಆ ಸಮಸ್ತವನ್ನೂ ಹೇರಿಸಿಕೊಂಡು ರಣಭೇರಿಯನ್ನು ಹೊಡೆಯಿಸುತ್ತ, ನದಿಯನ್ನು ದಾಟಿ ತೆಂಕುದೆಸೆಯಲ್ಲಿದ್ದ ತನ್ನ ಪಾಳೆಯವನ್ನು ಸೇರಿದನು.

ಕನ್ನಡಿಗರು ತಮ್ಮ ಸ್ವದೇಶದಲ್ಲಿ ಒಬ್ಬರೊಡನೊಬ್ಬರು ಹೊಡೆದಾಡಿಕೊಂಡು ಈವರೆಗೆ ಬಲಪ್ರದರ್ಶನ ಮಾಡಿಕೊಂಡಿದ್ದಂತೆ ಅಲ್ಲದೆ, ಈಗ ಪರಕೀಯರೊಂದಿಗೆ ಹೋರಾಡಿ ಜಯಶಾಲಿಗಳಾದ್ದರಿಂದ ಇಂದು ಅವರ ನಿಜವಾದ ಸಾಮರ್ಥ್ಯವು ಲೋಕಕ್ಕೆ ಚೆನ್ನಾಗಿ ಪ್ರದರ್ಶಿತವಾಯಿತು. ಉತ್ತರಭಾರತದವರ ದೃಷ್ಟಿಯಲ್ಲಿ ದಕ್ಷಿಣದೇಶೀಯರೆಂದರೆ ನಾಗರಿಕವನ್ನರಿಯದ ಕಾಡುಪ್ರಾಣಿಗಳೆಂಬ ಭಾವನೆಯೇ ಈವರೆಗೆ ಇದ್ದಿತು. ಈ ಯುದ್ಧದಿಂದ ಆ ಭಾವನೆಯು ಹಾರಿತು. ಮುಂದೆ ವ್ಯಾಪಾರಾದಿ ಲೌಕಿಕವ್ಯವಹಾರಗಳ

ವಿಷಯದಲ್ಲಿ ಉಭಯರಲ್ಲೂ ಪರಸ್ಪರ ಒಳಕೆಯು ಹೆಚ್ಚತೊಡಗಿತು. ಕ್ರಮ ಕ್ರಮವಾಗಿ ಪ್ರೀತಿವಿಶ್ವಾಸಗಳೂ ನೆಲೆಸತೊಡಗಿದುವು. ತನ್ಮೂಲಕ ಪರಸ್ಪರದಲ್ಲಿ ಗೌರವಾಭಿಮಾನಗಳೂ ಉಂಟಾದುವು. ದಕ್ಷಿಣದೇಶವೂ ಸುಖಾವಾಸಕ್ಕೆ ಅರ್ಹವಾದ ದೇಶವೆಂದು ತೋರಿ ಉತ್ತರಭಾರತದ ಹಲವುಮಂದಿ ವಿದ್ವಾಂಸರೂ, ಯೋಧರೂ, ಸುಪ್ರಸಿದ್ಧ ವ್ಯಾಪಾರಿಗಳೂ ದಕ್ಷಿಣದೇಶದ ಮುಖ್ಯಮುಖ್ಯ ನಗರಗಳಲ್ಲಿ ಬಂದು ನೆಲೆಗೊಳ್ಳತೊಡಗಿದರು. ಈ ಯುದ್ಧದಿಂದ ಹರ್ಷವರ್ಧನನಾಗಲೀ ಮತ್ತಾರೇ ಆಗಲೀ ಒಪ್ಪಬೇಕಾದ ಆವಶ್ಯಕತೆಯೇ ಇಲ್ಲದೆ, ಚಾಲುಕ್ಯರಾಜ್ಯದ ಉತ್ತರದ ಮೇರೆಯು ಗೋದಾವರಿಯ ದಕ್ಷಿಣದ ದಂಡೆಯವರೆಗೆ ವಿಸ್ತರಿಸಿತು.

ಈ ಯುದ್ಧದಿಂದ ಉಂಟಾದ ಮತ್ತೊಂದು ಪ್ರಯೋಜನವೂ ಉಂಟು. ಕನ್ನಡಿಗರಿಗೆ ತಮ್ಮ ಸಾಮರ್ಥ್ಯವು ಎಷ್ಟುಮಟ್ಟಿನದೆಂಬುದರ ಪ್ರಮಾಣವೂ ಗೊತ್ತಾಯಿತು. ಕರ್ಣಾಟಕ ಸೈನಿಕರೂ ಅವರ ರಾಜನಾದ ಪುಲಿಕೇಶಿಯೂ ಈ ಜಯದಿಂದ ಬಹುಸಂತೋಷಪಟ್ಟು ಉಬ್ಬಿದರು. ಸೈನ್ಯದ ಬಿಡಾರದಲ್ಲಿ ಹಲವು ವಿಜಯೋತ್ಸವಗಳನ್ನು ನಡೆಯಿಸಿದರು. ಹರ್ಷವರ್ಧನನನ್ನು ಹಾಗೆಯೇ ಬೆನ್ನಟ್ಟಿಹೋಗಿ, ಆತನ ರಾಜಧಾನಿಯನ್ನೂ ಹಿಡಿದುಕೊಳ್ಳುವುದು ಪುಲಿಕೇಶಿಗೆ ಕಷ್ಟವೆನ್ನಿಸಿರಲಿಲ್ಲ. ಆದರೆ, ಹಾಗೆ ಮಾಡುವುದು ಯುಕ್ತವಲ್ಲವೆಂದು ಯೋಚಿಸಿ, ಆತನು ತನ್ನ ಗಮನವನ್ನು ಪೂರ್ವರಾಜ್ಯಗಳಮೇಲೆ ತಿರುಗಿಸಿದನು. ಪೂರ್ವಭಾಗದ ರಾಜರುಗಳಲ್ಲಿ ಹಲವರು ಕನೂಜ ದರ್ಬಾರಿಗೆ ಮಾಂಡಲಿಕರಾಗಿದ್ದರು. ಅವರನ್ನು ಜಯಿಸಿ ಅಂಕಿತರನ್ನಾಗಿ ಮಾಡಿಕೊಳ್ಳಲಿಚ್ಛಿಸಿ ಸೈನ್ಯದೊಂದಿಗೆ ನರ್ಮದೆಯ ತೆಂಕಣ ದಂಡೆಯನ್ನೇ ಅನುಸರಿಸಿ ಪ್ರಯಾಣಮಾಡಿದನು. ಕೋಸಲದೇಶದ ರಾಜನು ಕರ್ಣಾಟಕರಾಜನ ಆ ದೊಡ್ಡ ದಂಡನ್ನು ಕಂಡು ಭೀತನಾಗಿ, ವಿಶೇಷವಸ್ತ್ರಾಭರಣಾದಿಗಳನ್ನೂ ಮುಖ್ಯಾಧಿಕಾರಿಗಳನ್ನೂ ಪುರಪ್ರಮುಖರನ್ನೂ ಮುಂದಿಟ್ಟುಕೊಂಡು ಬಂದು ಪುಲಿಕೇಶಿಗೆ ಶರಣಾಗತನಾಗಿ, ಆತನ ಮಾಂಡಲಿಕನಾಗಿರಲು ಒಪ್ಪಿದನು. ಪುಲಿಕೇಶಿಯಾದರೂ, ಉಚಿತರೀತಿಯಿಂದ ಆತನನ್ನು ಮನ್ನಿಸಿ ಗೌರವಿಸಿ ಬೀಳ್ಕೊಟ್ಟನು. ರಾಜ್ಯತೃಷ್ಣೆಯು ಅಲ್ಲಿಗೂ ಅಡಗಲಿಲ್ಲ. ಮುಂಬರಿದನು. ಆ ರಾಜ್ಯದ ಒತ್ತಿನಲ್ಲೇ ಇದ್ದ ಕಳಿಂಗರಾಜ್ಯದಮೇಲೂ ಆತನ

ದೃಷ್ಟಿ ಬಿದ್ದಿತು. ಕಳಿಂಗರಾಜ್ಯವು ಪೂರ್ವಸಮುದ್ರದ ಕರೆಯಲ್ಲಿ ವ್ಯಾಪಿಸಿ ವಿಸ್ತಾರವಾಗಿಯೂ ಫಲವತ್ತಾಗಿಯೂ ಜನಭರಿತವಾಗಿಯೂ ಇದ್ದಿತು. ಶ್ರೀ ಹರ್ಷವರ್ಧನನನ್ನು ಸೋಲಿಸಿ ಅಟ್ಟಿದ ವೀರಪುಲಿಕೇಶಿಯು ತಮ್ಮ ರಾಜ್ಯದಮೇಲೆ ದಂಡೆತ್ತಿ ಬರುತ್ತಿದ್ದಾನೆಂಬ ವಾರ್ತೆಯು ಆ ದೇಶದಲ್ಲಿ ಹಬ್ಬಿತು. ಆ ವೀರಕರ್ಣಾಟಕರಾಜನ ಶೌರ್ಯವೀರ್ಯಗಳ ಕೀರ್ತಿಯು ಈ ಮೊದಲೇ ಆ ಪ್ರಾಂತದಲ್ಲಿ ಜನಜನಿತವಾಗಿದ್ದುದರಿಂದ ಕಳಿಂಗದೇಶದ ರಾಜನಾದರೂ ವಿಷಪರೀಕ್ಷೆಗಾಗಿ ನಿರೀಕ್ಷಿಸದೆ ಕೋಸಲದೇಶಾಧೀಶನಂತೆಯೇ ವಿಧೇಯನಾಗಿ, ಬಾದಾಮಿಯ ಸಿಂಹಾಸನಕ್ಕೆ ಸಾಮಂತನಾಗಿರಲು ಒಪ್ಪಿಕೊಂಡು ಕಪ್ಪಕಾಣಿಕೆಗಳನ್ನೊಪ್ಪಿಸಿ ಗೌರವದಿಂದ ಬೀಳ್ಕೊಟ್ಟನು. ಈ ಒಪ್ಪಂದದಿಂದ ಕರ್ಣಾಟಕದ ಅರಸರ ಸ್ವಾಮ್ಯವು, ಈಗಿನ ಮದ್ರಾಸ್ ಇಲಾಖೆಗೆ ಸೇರಿದ ಗುಂಟೂರು ಕೃಷ್ಣಾ ಗೋದಾವರೀ ವಿಶಾಖಪಟ್ಟಣ ಮತ್ತು ಗಂಜಾಂ ಜಿಲ್ಲೆಗಳಿರುವ ಪ್ರಾಂತದಲ್ಲೆಲ್ಲ ವ್ಯಾಪಿಸಿತು. ಅವರ ಕೀರ್ತಿಚಂದ್ರಿಕೆಯಾದರೋ ಇದ್ಯಂತ ಭರತಖಂಡದಲ್ಲೇ ಉಜ್ವಲರೀತಿಯಿಂದ ವ್ಯಾಪಿಸಿತು.

ಆವೇಳೆಗೆ ಎಂದರೆ ಸುಮಾರು ಕ್ರಿ. ಶ. ೬೨೦ನೆಯ ಸಂವತ್ಸರಕ್ಕೆ, ರಾಜಧಾನಿಯನ್ನು ಬಿಟ್ಟು ನಾಲ್ಕೈದು ವರ್ಷಗಳ ಕಾಲವಾಗಿದ್ದುದರಿಂದ ಪುಲಿಕೇಶಿರಾಜನು ಮುಂದೆ ದಂಡಯಾತ್ರೆಯನ್ನು ಸಾಕುಮಾಡಿ ರಾಜಧಾನಿಯ ಕಡೆಗೆ ತಿರುಗಿದನು. ಸುಪ್ರಸಿದ್ಧ ಶ್ರೀ ಹರ್ಷರಾಜನನ್ನೂ, ಕೋಸಲಕಳಿಂಗಾದಿ ರಾಜ್ಯಗಳ ಪ್ರಭುಗಳನ್ನೂ ಸೋಲಿಸಿ, ಕರ್ಣಾಟಕದ ಕೀರ್ತಿಯನ್ನು ಆಚಂದ್ರಾರ್ಕ ಮೆರೆಯುವಂತೆ ಉಜ್ವಲಗೊಳಿಸಿದ ತಮ್ಮ ವೀರವರೇಣ್ಯನನ್ನು ಉಚಿತರೀತಿಯಿಂದ ಎದುರುಗೊಂಡು ಗೌರವಿಸಲು, ರಾಜಧಾನಿಯಲ್ಲಿ ವಿಶೇಷವಾದ ಹಲವು ಏರ್ಪಾಟುಗಳು ನಡೆದುವು. ರಾಜನಗರಿಯನ್ನು ಬಗೆಬಗೆಯಿಂದ ಸಿಂಗರಿಸಿದರು. ರಾಜಬೀದಿಗಳನ್ನು ಮಂಟಪ ತೋರಣ ಮೇಲ್ಕಟ್ಟುಗಳಿಂದ ಅಲಂಕರಿಸಿದರು. ಮನೆಗಳಿಗೆ ಸುಣ್ಣಕಾರಣೆಗಳನ್ನು ಬಳಿದು, ತೋರಣಪತಾಕೆಗಳನ್ನು ಕಟ್ಟಿ ಅಂದಗೊಳಿಸಿದರು. ಬಾದಾಮಿ ನಗರವು, ಪರದೇಶಕ್ಕೆ ಹೋಗಿದ್ದು ಬಹುಕಾಲದಮೇಲೆ ಹಿಂದಿರುಗುವ ತನ್ನ ಪ್ರಾಣವಲ್ಲಭನನ್ನು-ವಸ್ತ್ರಾಭರಣಾದಿಗಳಿಂದ ಅಲಂಕೃತಳಾಗಿ ಎದುರುಗೊಳ್ಳುವ

ಪತಿವ್ರತೆಯಾದ ಮಹಿಳೆಯಂತೆ ಸುಸಂಭ್ರಮದಿಂದ ಸಿಂಗರಿಸಲ್ಪಟ್ಟಿತು. ಪುಲಿಕೇಶಿರಾಜನು ಭದ್ರಗಜವನ್ನೇರಿ ವಂದಿಮಾಗಧರ ಹೊಗಳಿಕೆಯನ್ನು ಲಾಲಿಸುತ್ತ, ಪುರಪ್ರಮುಖರೂ, ಪಂಡಿತರೂ ಒಪ್ಪಿಸಿದ ಪೂರ್ಣಕುಂಭ, ಪಕ್ವಫಲಾದಿಗಳನ್ನು ಸ್ವೀಕರಿಸುತ್ತ, ಉಪ್ಪರಿಗೆಯಮೇಲೆ ನಿಂತು ಪುರನಾರಿಯರು ತನ್ನಮೇಲೆ ಸುರಿಸುತ್ತಿದ್ದ ಪುಷ್ಪವೃಷ್ಟಿಯ ಸೊಬಗನ್ನು ಅವಲೋಕಿಸುತ್ತ,-'ವಿಜಯವಾಗಲಿ ನಮ್ಮ ಪುಲಿಕೇಶಿ ಸಾರ್ವಭೌಮನಿಗೆ; ಅಖಂಡ ವಿಜಯವಾಗಲಿ ನಮ್ಮ ವೀರನರಪತಿಗೆ,' ಎಂದು ಜಯಗರ್ಜನೆ ಮಾಡುವ ಅಸಂಖ್ಯಬಾಲಕರ ಕೋಲಾಹಲವನ್ನು ಹಸನ್ಮುಖದಿಂದ ಮನ್ನಿಸುತ್ತ, ಕೈಯೆತ್ತಿ ಮುಗಿವ ರಾಜಭಕ್ತಿಯುತರಾದ ಪ್ರಜಾಸಮೂಹಕ್ಕೆ ವಿಶ್ವಾಸಪೂರ್ವಕ ಪ್ರತಿವಂದನೆಗಳನ್ನರ್ಪಿಸುತ್ತ, ಸಕಲರ ಕಣ್ಮನಗಳಿಗೂ ತೃಪ್ತಿಯನ್ನುಂಟುಮಾಡಿ ರಾಜಧಾನಿಯನ್ನು ಪ್ರವೇಶಿಸಿ ಅರಮನೆಯನ್ನು ಹೊಕ್ಕು, ಆ ರಾಜಚಂದ್ರಮನು, ತನಗಾಗಿ ಕಾದು ಕಾತರಿಸುತ್ತಿದ್ದ ರಾಜಹೆಂಗಳೆಯರ ಮನಃಚಕೋರಗಳ ಆಶಯವನ್ನೂ ತೃಪ್ತಿಗೊಳಿಸಿದನು.

ವಾತಾಪಿ (ಬಾದಾಮಿ) ನಗರರಮಣೀರಮಣನಾದ ವೀರ ನರಪತಿ ಪುಲಿಕೇಶಿಯು ಯಾವಾಗ ಪಟ್ಟಾಭಿಷಿಕ್ತನಾದನು ಎಂಬುದಕ್ಕೆ ಆತನ ಆದ್ಯಂತ ಚರಿತ್ರೆಯಲ್ಲಿ ಎಲ್ಲೂ ಸ್ಪಷ್ಟೋಕ್ತಿಯಿಲ್ಲ. ಪ್ರಾಚೀನ ಕರ್ಣಾಟಕದ ಇತಿಹಾಸ ಸಂಶೋಧನೆಯಲ್ಲಿ ಹೆಚ್ಚು ಪರಿಶ್ರಮ ಮಾಡಿರುವ ಡಾಕ್ಟರ್ ಫ್ಲೀಟ್, ಜಿ. ಜಿ. ಡುಬ್ರಿಲ್, ಡಾಕ್ಟರ್ ಭಂಡಾರಕರ್ ಮುಂತಾದ ಸುಪ್ರಸಿದ್ಧ ಐತಿಹಾಸಿಕರಲ್ಲಿ ಈ ವಿಚಾರವಾಗಿ ಏಕವಾಕ್ಯತೆಯಿಲ್ಲ-ಒಬ್ಬರು,-'ಕೀರ್ತಿವರ್ಮನು ಮೃತನಾದ ಒಡನೆಯೇ, ಪುಲಿಕೇಶಿಗೆ ರಾಜ್ಯಾಭಿಷೇಕವಾಯಿತು; ಆದರೆ ಮಂಗಳೇಶನೇ ರಾಜ್ಯಭಾರವನ್ನು ಮಾಡುತ್ತಿದ್ದನಾದುದರಿಂದ ಅದು ಆಗ ಹೆಸರಿಗೆ ಬರಲಿಲ್ಲ'ವೆಂದೂ; ಇನ್ನೊಬ್ಬರು, 'ಹಾಗಲ್ಲ-ಕೀರ್ತಿವರ್ಮನು ಮೃತನಾದ ಕಾಲದಲ್ಲಿ ಪುಲಿಕೇಶಿಯೇ ಮುಂತಾದ ಅವನ ಪುತ್ರರು ಅಪ್ರಾಪ್ತವಯಸ್ಕರಾಗಿದ್ದುದರಿಂದ, ಆಗ ರಾಜ್ಯಾಭಿಷೇಕ ಸಮಾರಂಭದ ಪ್ರಸ್ತಾಪವೇ ಹುಟ್ಟದೆ, ಮೃತರಾಜನ ತಮ್ಮ ಮಂಗಳೇಶನು ಆಡಳಿತವು ಅರಾಜಕವಾಗದಂತೆ ರಾಜ್ಯಸೂತ್ರಗಳನ್ನು ಕೈಗೆ ತೆಗೆದುಕೊಂಡು, ಕೇವಲ ರಾಜಕಾರ್ಯಗಳಲ್ಲಿ ಸರ್ವಾಧಿಕಾರಿಯಾಗಿ ವರ್ತಿಸುತ್ತಿದ್ದ'ನೆಂದೂ, ಬೇರೊಬ್ಬರು,-'ಹಾಗೂ

ಅಲ್ಲ; ಕೋಸಲ ಕಳಿಂಗಾದಿ ಸಕಲ ರಾಜ್ಯಗಳನ್ನೂ, ಕನೋಜದ ಹರ್ಷವರ್ಧನನನ್ನೂ ಜಯಿಸಿ ರಣವೀರನೆಂದು ಪ್ರಖ್ಯಾತನಾಗಿ ರಾಜಧಾನಿಗೆ ಹಿಂದಿರುಗಿದ ತರುವಾಯ ಸಾರ್ವಭೌಮನೆಂದು ಪಟ್ಟಾಭಿಷೇಕ ಮಾಡಿಕೊಂಡು. ದೇಶ ವಿದೇಶದ ಸಾಮಂತ ಪ್ರಭುಗಳಿಂದ ಕಪ್ಪ ಕಾಣಿಕೆಗಳನ್ನು ಸ್ವೀಕರಿಸಿದನೆಂದೂ, ಹೀಗೆ ಬಗೆಬಗೆಯ ಅಭಿಪ್ರಾಯಗಳನ್ನು ಕೊಡುತ್ತಾರೆ. ಈ ಮಹತ್ವದ ವಿಚಾರದಲ್ಲಿ ಸುಪ್ರಸಿದ್ಧ ಐತಿಹಾಸಿಕರು ಭಿನ್ನಾಭಿಪ್ರಾಯವುಳ್ಳವರಾಗಿರುವುದರಿಂದ ಈ ವಿಚಾರವನ್ನು ಹೀಗೇ ಎಂದು ನಿರ್ಧರಿಸುವುದು ಕಷ್ಟ. ಈ ಮೂವರಲ್ಲಿ ಡಾ. ಫ್ಲೀಟರು ಆತನ ರಾಜ್ಯಾಭಿಷೇಕ ಮಹೋತ್ಸವವು, ಸಂವತ್ ಶಕೆ ೫೩೨ನೆಯ ಭಾದ್ರಪದ ಶು. ಪ್ರತಿಪದೆಯಿಂದ ಶಕೆ. ೫೩೩ನೆಯ ಭಾದ್ರಪದ ಕೃ. ೩೦, (ಕ್ರಿ. ಶ. ೬೦೮-೬೦೯) ರೊಳಗೆ ನಡೆದಿರಬಹುದೆಂದು ಸಂದೇಹಿಸುತ್ತಾರೆ. ಆದರೆ ಆತನು, ಹರ್ಷವರ್ಧನನನ್ನು ಸೋಲಿಸಿ ಓಡಿಸಿದ ನರ್ಮದಾ ನದಿಯ ಬಳಿಯ ಕಾಳಗ ನಡೆದುದು ಕ್ರಿ. ಶ. ೬೧೯ರಲ್ಲಿ ಎಂದು ಹೇಳಲ್ಪಟ್ಟಿದೆ. ಕೋಸಲ ಕಳಿಂಗರಾಜ್ಯಗಳನ್ನು ಸಾಮಂತ ರಾಜ್ಯ ಪಾಲನೆಗೆ ಒಳಪಡಿಸಿಕೊಂಡು ಹಿಂದಿರುಗಿದುದು ಕ್ರಿ. ಶ. ೬೧೭-೬೩೦ರಲ್ಲಿ ಎಂದು ಉಕ್ತವಾಗಿದೆ. ಪರಸ್ಪರ ವಿರುದ್ಧಗಳಾದ ಈ ಐತಿಹಾಸಿಕರ ಅಭಿಪ್ರಾಯಗಳಲ್ಲಿ ಯಾವುದನ್ನು ತೆಗೆದುಕೊಂಡು ಒಂದು ಗೊತ್ತಾದ-ವರ್ಷ ಮಾಸ ತಿಥಿ ವಾರ ಮುಹೂರ್ತ-ಗಳನ್ನು ಈಗ ಸಿದ್ಧಪಡಿಸಲಾಗದಿದ್ದರೂ, ನಾವು ಮತ್ತೊಂದು ಬಗೆಯಿಂದ ಅದನ್ನು ಊಹಿಸಲು ಅನುವು ದೊರೆಯುತ್ತದೆ. ಎಲ್ಲಾ ಚರಿತ್ರಕಾರರೂ ತಮ್ಮ ಹೇಳಿಕೆಗಳಿಗೆ ತಮ್ಮ ಊಹೆಗಳನ್ನೇ ಆಧಾರವಾಗಿಟ್ಟುಕೊಂಡಿರುವುದರಿಂದ, ನಮ್ಮ ಊಹೆಯನ್ನಾದರೂ ನಾವು ಹೇಳಿಬಿಡಬಾರದೇಕೆ! -ಕೀರ್ತಿವರ್ಮನು ಮೃತನಾದ ಒಡನೆಯೇ ಚಿಕ್ಕ ಬಾಲಕನಾಗಿದ್ದ ಪುಲಿಕೇಶಿಗೆ-ರಾಜ್ಯಕ್ಕೆ ನ್ಯಾಯವಾದ ಬಾಧ್ಯಸ್ಥನೆಂಬುದನ್ನು ಸ್ಥಾಪಿಸುವ ಮರ್ಯಾದೆಯನ್ನನುಸರಿಸಿ ರಾಜ್ಯಾಭಿಷೇಕ ಕಾರ್ಯವು ಆಗ ನಡೆದಿರಬಹುದು. ತರುವಾಯ, ಮಂಗಳೇಶನು ಪ್ರಬಲನಾಗಿ ರಾಜ್ಯನಾಳಿ ಮೃತನಾದ ತರುವಾಯ, ಅವ್ಯವಸ್ಥ ಸ್ವರೂಪದಲ್ಲಿ ಸಾಗುತ್ತಿದ್ದ ರಾಜ್ಯಭಾರ ಶಕಟವನ್ನು ಯೋಗ್ಯ ಶಾಸನಕ್ಕೆ ಒಳಪಡಿಸಿ-ಅಂತೆಯೇ ಹಲವು ಮಂದಿ ರಾಜರನ್ನು ಜಯಿಸಿ ಮಾಂಡಲಿಕರನ್ನಾಗಿ ಮಾಡಿಕೊ

ಳ್ಳುವವರೆಗೆ ಮಧ್ಯಕಾಲದಲ್ಲಿ ಪಟ್ಟಾಭಿಷೇಕ ಮಹೋತ್ಸವಕ್ಕಾಗಿ ಕುಳಿತು
ಕೊಳ್ಳಲು ಆತನಿಗೆ ಸಮಾಧಾನವೇ ದೊರೆಯಲಿಲ್ಲವೆಂಬುದು ಸ್ಪಷ್ಟವಿದೆ.
ಆದುದರಿಂದ, ಲಾಟ ಮಾಳ ಗುರ್ಜರ ಕೊಂಕಣ ದೇಶಗಳನ್ನು ಜಯಿಸಿ
ಸ್ವಾಧೀನಗೊಂಡು, ತನ್ನಮೇಲೆ ದಂಡೆತ್ತಿಬಂದ ಹರ್ಷವರ್ಧನನನ್ನು ಸೋ
ಲಿಸಿ ಹಿಂದಕ್ಕೆ ಓಡಿಸಿ, ತರುವಾಯ ಕೋಸಲಕಳಿಂಗ ರಾಜ್ಯಗಳ ಮೇಲೆ
ಧಾಳಿಮಾಡಿ, ದೇಶವಿದೇಶಗಳಲ್ಲೂ ತನ್ನ ಕೀರ್ತಿಧ್ವಜವನ್ನು ನೆಟ್ಟು, ವಿಜಯ
ಯಾತ್ರೆಯನ್ನು ಮುಗಿಸಿಕೊಂಡು ಮಹದ್ವೈಭವದಿಂದ ಹಿಂದಿರುಗಿದ ಸಂ
ತೋಷಕರಸಮಯದಲ್ಲೇ ಸಾರ್ವಭೌಮ ಪಟ್ಟಾಭಿಷೇಕಮಹೋತ್ಸವವನ್ನು
ನಡೆಯಿಸಿಕೊಂಡನೆಂದು ಹೇಳುವುದು ಸೂಕ್ತವೆಂದು ತೋರುತ್ತದೆ. ಪೂರ್ವ
ಪಶ್ಚಿಮೋತ್ತರದಿಕ್ಕುಗಳ ರಾಜ್ಯಾಧಿಪರು ಸಾಮಂತರಾಗಿ ಸೊಂಟಕಟ್ಟಿ ಕೈ
ಜೋಡಿಸಿಕೊಂಡು ನಿಂತಿರುವಾಗ್ಗೆ, ವಂಧಿಮಾಗಧರು—"ಸತ್ಯಾಶ್ರಯ
ಶ್ರೀ ಪೃಥ್ವೀವಲ್ಲಭ, ಪರಮಭಟ್ಟಾರಕ, ಪರಮಮಹೇಶ್ವರ, ಮಹಾರಾಜಾ
ಧಿರಾಜ, *ಮೂರು ಮಹಾರಾಷ್ಟ್ರಗಳ ಸಾರ್ವಭೌಮ" ಎಂದು ಉಚ್ಚಸ್ವರ
ದಿಂದ ಹೊಗಳುತ್ತಿರುವಾಗ್ಗೆ-'ಹರ್ಷವಿಚ್ಛೇದ ಹೇತುಃ'-"ಸಮರಸಂಸಕ್ತಃ
-ಸಕಲೋತ್ತರಾಪಥೇಶ್ವರ ಶ್ರೀ ಹರ್ಷವರ್ಧನಪರಾಜಯೋಪಲಬ್ಧ ಪರಮೇ
ಶ್ವರಾಪರನಾಮಧೇಯಃ, ಸತ್ಯಾಶ್ರಯಃ ಶ್ರೀವಲ್ಲಭೋ ಮಹಾರಾಜಾಧಿ
ರಾಜಃ" ಎಂದು ದಿಗಂತಧ್ವನಿತವಾಗುವಂತೆ ಕೀರ್ತಿಸುತ್ತಿದ್ದಾಗ್ಗೆ ನಮ್ಮ
ಕಥಾನಾಯಕನ ಸಾರ್ವಭೌಮಪದಪ್ರಾಪ್ತಿ ಸೂಚಕವಾದ ಪಟ್ಟಾಭಿಷೇಕ
ಮಹೋತ್ಸವವು ಮಹದ್ವೈಭವದಿಂದ ನಡೆಯಿತೆಂದು ಹೇಳುವುದರಲ್ಲಿ ಏನು
ದೋಷವಿದೆ ? ಹೀಗೆ ಪುಲಿಕೇಶಿರಾಜವರೇಣ್ಯನು ಬೃಹತ್ಕರ್ಣಾಟಕ ಸಾರ್ವ
ಭೌಮನೆಂದು ಪ್ರಖ್ಯಾತನಾಗಿ ಚರಿತ್ರಪ್ರಸಿದ್ಧವಾದ ವಾತಾಪಿನಗರದಲ್ಲಿ ಪ್ರಜೆ
ಪರಿವಾರ ಪತ್ನೀಪುತ್ರರಿಂದ ಕೂಡಿ ಪ್ರಜೆಗಳಿಗೆ ತಂದೆಯಾಗಿ, ಶರಣರಿಗೆ ಶರ
ಣ್ಯನಾಗಿ, ಭೀತರಿಗೆ ಅಭಯದಾತನಾಗಿ, ಆರ್ತರಿಗೆ ರಕ್ಷಕನಾಗಿ, ಯಾಚಕ

---

*ಈಗಿನ ಕರ್ಣಾಟಕ ಕೊಂಕಣಾದಿಗಳನ್ನೊಳಗೊಂಡಿದ್ದ ಮಹಾರಾಷ್ಟ್ರ ವೊಂದು, ಗುಜರಾತು ರಾಷ್ಟ್ರವೊಂದು ಮತ್ತು ಕಳಿಂಗಕೋಸಲರಾಜ್ಯಗಳು ಸೇರಿದ ಮಹಾರಾಷ್ಟ್ರವೊಂದು ಇಂತು ಮೂರು ರಾಷ್ಟ್ರಗಳು.

ರಿಗೆ ಕೊಡುಗೈದಾತನಾಗಿ, ಸ್ವಕಾಮಿನಿಯರಿಗೆ ಮನ್ಮಥನಾಗಿ, ಅರಿವೀರರಿಗೆ ಪ್ರತಿವೀರನಾಗಿ-ರಣಭೀಮನಾಗಿ, ರತ್ನಸಿಂಹಾಸನಾರೂಢನಾಗಿ, ಶ್ವೇತಚ್ಛತ್ರಾಧಿಪತಿಯಾಗಿ, ಕರ್ನಾಟಕ ಸಾಮ್ರಾಜ್ಯರಮಾರಮಣನಾಗಿ ವಿರಾಜಿಸಿದನು.



## ಅಧ್ಯಾಯ ೫ "ರಾಜ್ಯವೈಭವ"

ಉತ್ತರಭಾರತದ ವೀರನರಪತಿ ಶ್ರೀ ಹರ್ಷವರ್ಧನನಮೇಲೆ ನಮ್ಮ ಕಥಾನಾಯಕನಿಗೆ ಪ್ರಾಪ್ತವಾದ ವಿಜಯದಿಂದ ಆತನ ಕೀರ್ತಿಯು ಆಸೇತುಹಿಮಾಚಲವಾಗಿ ಪಸರಿಸಿದುದು ಮಾತ್ರವಲ್ಲ, ಭಾರತದೇಶದ ಹೊರಗೆ ದೇಶಾಂತರಗಳಲ್ಲೂ ಹಬ್ಬಿತು. ಆತನು ರಣಧೀರನೂ, ಮಹಾ ಪ್ರಬಲರಾಜ್ಯಾಧಿಪನೂ ಎಂಬ ಅಭಿಪ್ರಾಯದಿಂದ ಆತನ ಸಹಾಯವನ್ನು ದೇಶಾಂತರಗಳವರೂ ಅಪೇಕ್ಷಿಸುವಂತಾಯಿತು. ಇದನ್ನು ನಿದರ್ಶನಗೊಳಿಸುವ ಒಂದು ಶಿಲಾಚಿತ್ರವು ಅಜಂಟಾ ಗುಹೆಗಳಲ್ಲಿ ಕೆತ್ತಲ್ಪಟ್ಟಿದೆ. ಅದರಲ್ಲಿ, ಈಗಿನ ಪಾರ್ಶೀ (ಇರಾಣ) ದೇಶಕ್ಕೆ ಆಗ ರಾಜನಾಗಿದ್ದ ಎರಡನೆಯ ಖುಸ್ರು ಎಂಬವನ, ರಾಯಭಾರಿಯು ರಾಜಯೋಗ್ಯವಾದ ಕಾಣಿಕೆಗಳೊಂದಿಗೆ ಬಂದು ಒಡ್ಡೋಲಗದಲ್ಲಿ ಪುಲಿಕೇಶಿ ಸಾರ್ವಭೌಮನಿಗೆ ಒಪ್ಪಿಸಿ, ಗೌರವಿಸುತ್ತಿರುವಂತೆ ಚಿತ್ರಿಸಲ್ಪಟ್ಟಿದೆ. ಇರಾಣ ದೇಶದ ಖುಸ್ರುರಾಜನು, ತನಗೆ ರೋಮನರಿಂದ ಪ್ರಾಪ್ತವಾಗಲಿದ್ದ ಯುದ್ಧದಲ್ಲಿ ಬೆಂಬಲವಾಗಿ ಸಹಾಯಮಾಡಬೇಕೆಂದು, ನಮ್ಮ ಕಥಾನಾಯಕನ ಬಳಿಗೆ ಮೇಲ್ಕಂಡ ರಾಯಭಾರಿಯ ಮೂಲಕ ವಿಜ್ಞಾಪನೆ ಮಾಡಿಕೊಂಡಿದ್ದನೆಂದೂ, ಪುಲಿಕೇಶಿಯೂ ಅದಕ್ಕೆ ಯೋಗ್ಯಪ್ರತ್ಯುತ್ತರವನ್ನೂ, ರಾಜಯೋಗ್ಯಬಹುಮಾನಗಳನ್ನೂ, ಆ ರಾಯಭಾರಿಯೊಂದಿಗೆ ಪುನಃ ಕಳುಹಿಸಿದನೆಂದೂ ಚರಿತ್ರೆಯು ಹೇಳುತ್ತದೆ. ಈ ಬಗೆಯ ಐತಿಹಾಸಿಕ ಸಾಮಗ್ರಿಯಿಂದ ನಮ್ಮ ದೇಶದ ಪೂರ್ವಚರಿತ್ರೆಯ ಮೇಲೆ ವಿಶೇಷಪ್ರಭೆ ಬೀಳುವುದರಲ್ಲಿ ಸಂಶಯವಿಲ್ಲವಲ್ಲವೆ ?

ಕೋಸಲಕಳಿಂಗಾದಿ ರಾಜ್ಯಗಳನ್ನು ಜಯಿಸಿ ರಾಜ್ಯವನ್ನು ವಿಸ್ತರಿಸಿದ ನಂತರವೂ ಪುಲಿಕೇಶಿಗೆ ರಾಜ್ಯತೃಷ್ಣೆಯಡಗಲಿಲ್ಲ. ಅಲ್ಲದೆ ಆತನಿಗೆ ವಿಷಯೋಪಭೋಗ, ಆಟನೋಟಗಳು, ಕಾಮಿನಿಯರ ವಿಲಾಸ ಮುಂತಾದುವುಗಳ ವಿಷಯದಲ್ಲಿ ಭ್ರಮೆಯಿರದೆ, ಕೇವಲ ಯುದ್ಧವಿಚಾರದಲ್ಲೇ ವಿಶೇಷ ಆಸಕ್ತಿಯಿದ್ದುದರಿಂದ ಜಯಿಸಿದ ರಾಜ್ಯಗಳ ಆಳ್ವಿಕೆಯ ವಿಷಯದಲ್ಲಿ ಸಹ ಹೆಚ್ಚು ನಿಯಮನಿಬಂಧನೆಗಳನ್ನು ನಿರ್ಮಿಸುವ ಗೋಜಿಗೆ ಹೋಗದೆ, ಸದಾ ಒಂದಾದಮೇಲೊಂದರಂತೆ ರಾಜ್ಯಗಳನ್ನು ಜಯಿಸುವುದರಲ್ಲೇ ಮಗ್ನನಾಗಿ ಸೈನ್ಯದೊಂದಿಗೆ ಸಂಚರಿಸುತ್ತಿದ್ದನು. ದಕ್ಷಿಣದೇಶದಮೇಲೆ ದಂಡಯಾತ್ರೆಗಾಗಿ ಹೊರಟ ಆತನಿಗೆ ಈಗಿನ ಗೋದಾವರಿ ಜಿಲ್ಲೆಯಲ್ಲಿರುವ ಪಿಠಾಪುರಂ ಎಂಬ ವಿಷ್ಣುಪುರದ ಕೋಟೆಯೇ ಪ್ರಾರಂಭಕ್ಕೆ ತುತ್ತಾಯಿತು. ಅದು ಆಗಿನ ಕಾಲದ ಆ ಪ್ರಾಂತದ ಕೋಟೆಗಳಲ್ಲೆಲ್ಲಾ ಭದ್ರವಾದುದೆಂದು ಪ್ರಸಿದ್ಧವಾಗಿದ್ದಿತು. ಪುಲಿಕೇಶಿಯು ಆ ಕೋಟೆಯನ್ನು ಆರೇಳು ತಿಂಗಳಕಾಲ ಮುತ್ತಿ, ಕೊನೆಗೂ ಸ್ವವಶ ಮಾಡಿಕೊಂಡು, ಒಡನೆಯೇ, ಗೋದಾವರೀ ನದಿಯಿಂದ ಪೆನ್ನಾರ್ ನದಿಯವರೆಗೆ ಸಮುದ್ರದಂಡೆಯಲ್ಲಿರುವ ಪ್ರಾಂತವನ್ನೆಲ್ಲ ಗೆದ್ದು ಈ ಹೊಸ ಪ್ರಾಂತಕ್ಕೆ ತನ್ನ ತಮ್ಮ ಕುಬ್ಜವಿಷ್ಣುವರ್ಧನನನ್ನು ಮಂಡಲಾಧೀಶನನ್ನಾಗಿ ನಿಯಮಿಸಿ ರಾಜಧಾನಿಗೆ ಹಿಂದಿರುಗಿದನು. ಆತನು ಗೋದಾವರೀ ಜಿಲ್ಲೆಯಲ್ಲಿದ್ದ ವೆಂಗಿ ಎಂಬ ಊರನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳಲಾರಂಭಿಸಿದನು. ವಿಷ್ಣುವರ್ಧನನು ಮೂಲಪುರುಷನಾಗಿ ಪ್ರಾರಂಭವಾದ ಪೂರ್ವಚಾಲುಕ್ಯರ ಮನೆತನವು ಮುಂದೆ ಐನೂರು ವರ್ಷಕಾಲ ಘನತೆಯಿಂದ ಆಧಿಪತ್ಯಮಾಡಿಕೊಂಡಿದ್ದಿತೆಂದು ಪ್ರಸಿದ್ಧವಾಗಿದೆ.

ಪುಲಿಕೇಶಿಯು ಎಂತಹ ವೀರನೋ ಅಂತಹ ದಯಾಶಾಲಿಯೂ ಆಗಿದ್ದನು. ಎಂತಹ ತೀಕ್ಷ್ಣಪ್ರಕೃತಿಯವನೋ, ಅಂತಹ ಭ್ರಾತೃವಾತ್ಸಲ್ಯ-ಬಂಧುಪ್ರೇಮವುಳ್ಳವನೂ ಆಗಿದ್ದನು. ವೆಂಗಿಯಲ್ಲಿ ರಾಜ್ಯವಾಳಿಕೊಂಡಿರಲು ಮಾಂಡಲಿಕನಾಗಿ ನಿಯಮಿತನಾಗಿದ್ದ ಕುಬ್ಜವಿಷ್ಣುವರ್ಧನನು, ಕೆಲವು ಕಾಲದ ತರುವಾಯ, ಬಾದಾಮಿಯ ಸಾರ್ವಭೌಮಪ್ರಭುತ್ವದ ಆಜ್ಞೆಯನ್ನು ಲಕ್ಷಿಸದೆ ಸ್ವತಂತ್ರವಾಗಿರಲು ಅಪೇಕ್ಷಿಸಿ ಅದಕ್ಕೆ ತಕ್ಕ ಪ್ರಯತ್ನಮಾಡುತ್ತಿ

ದ್ದಾನೆಂಬ ವರ್ತಮಾನ ಬಂತು. ಆದರ ನಿಜತ್ವವನ್ನು ತಿಳಿದುಕೊಳ್ಳಲು ಪುಲಿಕೇಶಿಯು ತಮ್ಮನೊಂದಿಗೆ ಪತ್ರವ್ಯವಹಾರಕ್ಕೆ ಪ್ರಾರಂಭಿಸಿದನು. ಕೊನೆಗೆ ತನ್ನ ತಪ್ಪನ್ನು ತಿಳಿದು ವಿಧೇಯನಾಗಿರಲು ಒಪ್ಪಿದ ಆವನನ್ನು ಮನ್ನಿಸಿ ಮುಂದೆ ವಿವೇಕದಿಂದ ನಡೆಯುವಂತೆ ಬುದ್ಧಿ ಹೇಳಿದನು. ಮಾತ್ರವಲ್ಲ, ಆ ದೇಶವನ್ನು ಆತನೇ ಸ್ವತಂತ್ರವಾಗಿ ಆಳಿಕೊಂಡು ಬರಲು ಸಮ್ಮತಿಸಿ, ತನ್ನ ಭ್ರಾತೃವಾತ್ಸಲ್ಯ, ಸೌಹಾರ್ದಭಾವಗಳನ್ನೂ ಪ್ರಕಟಿಸಿದನು.

ಪುಲಿಕೇಶಿಯು ಶತ್ರುಗಳೊಂದಿಗೆ ಮಾಡಿದ ಕೊನೆಯದೊಂದು ಕಾಳಗದಲ್ಲಿ ಆತನಿಗೆ ಅಪಜಯವಾಯಿತೆಂದು ಒಂದೆಡೆ ಹೇಳಲ್ಪಟ್ಟಿದೆ. ಪಿಷ್ಟಪುರವು ಕೈತಪ್ಪಿಹೋದ ಬಳಿಕ, ಅದಕ್ಕೆ ಅಧಿಪತಿಗಳಾಗಿದ್ದ ಕಂಚಿಯ ಪಲ್ಲವ ಅರಸರು ದಂಡು ಕೂಡಿಸಿಕೊಂಡು ಬಾದಾಮಿಯ ರಾಜ್ಯದೊಳಕ್ಕೆ ನುಗ್ಗಲು ಹವಣಿಸಿದ್ದಾರೆಂದು ಪುಲಿಕೇಶಿಗೆ ವರ್ತಮಾನ ತಿಳಿಯಿತು. ಯುದ್ಧವೆಂದರೆ ಅತ್ಯುತ್ಸಾಹದಿಂದ ಓಡುವ ಪುಲಿಕೇಶಿಯು, ತಾನಾಗಿ ಲಭ್ಯವಾದ ಈ ಸುಸಂಧಿಯನ್ನು ವ್ಯರ್ಥಗೊಳಿಸುವನೇ! ಒಡನೆ ಸೈನ್ಯದೊಂದಿಗೆ ನಡೆದು, ಅವರನ್ನು ತುಮುಲಯುದ್ಧದಲ್ಲಿ ಬಡಿದೋಡಿಸಿ, ಅವರ ರಾಜಧಾನಿಯಾದ ಕಂಚಿಯ ಬಳಿಯಿದ್ದ ಪುಳ್ಳಲೂರು ಎಂಬ ಹಳ್ಳಿಯವರೆಗೆ ತರುಮಿಕೊಂಡು ಹೋದನು. ಹಾಗೆ ಅವರು ಸ್ವಸ್ಥಾನದವರೆಗೆ ಹೋದಾಗಲೇ ಅವರ ಸ್ಥಾನಬಲದಿಂದ ಆತನನ್ನು ಸೋಲಿಸಿ ಹಿಂದಕ್ಕಟ್ಟಿದರೆಂದು ಒಂದು ಸ್ಥಳದಲ್ಲಿ ಉಕ್ತವಾಗಿದೆ. ಆದರೆ ಡಾ. ಫ್ಲೀಟ್ ಮುಂತಾದ ಐತಿಹಾಸಿಕರ ಬರಹದಿಂದ ಇದಕ್ಕೆ ಪುಷ್ಟಿಯು ದೊರೆಯುತ್ತಲಿಲ್ಲ.

ಕ್ರಿ. ಶ. ೬೦೯ರಲ್ಲಿ ರಾಜ್ಯಸೂತ್ರಗಳನ್ನು ಕೈಗೆ ತೆಗೆದುಕೊಂಡ ಪುಲಿಕೇಶಿಯು ಈವರೆಗೆ ಹೇಳಿಕೊಂಡುಬಂದಂತೆ, ಅಖಂಡ ಪರಿಶ್ರಮದಿಂದ ಪೂರ್ವದಕ್ಷಿಣ ಪಶ್ಚಿಮೋತ್ತರ ದಿಕ್ಕುಗಳ ಶತ್ರುರಾಜರೊಂದಿಗೆ ಹೋರಾಡಿ ರಣವಿಕ್ರಮನೆಂಬ ಕೀರ್ತಿಯನ್ನೂ ಸಾರ್ವಭೌಮಪದವಿಯನ್ನೂ ಸಂಪಾದಿಸಿ, ೬೩೫ನೆಯ ಸಂ|| ದ ವೇಳೆಗೆ, ಭರತಖಂಡದಲ್ಲಿ-ಮುಖ್ಯವಾಗಿ ದಕ್ಷಿಣಭಾರತದಲ್ಲಿ ಅದ್ವಿತೀಯ ನರಪತಿಯೆಂಬ ಪ್ರಖ್ಯಾತಿಗೆ ಪಾತ್ರನಾದನು. ಮುಂದೆ, ೬೪೨ ರ ವರೆಗೆ ಆತನು ಏನು ಮಾಡಿದನು, ಎಲ್ಲಿದ್ದನು, ಎಂಬ ಬಗ್ಗೆ ಸದ್ಯಃ ದೊರೆತಿರುವ ಚಾರಿತ್ರಿಕ ಆಧಾರಗಳಿಂದ ಯಾವ ಸಂಗತಿಯೂ ಹೊರಪಡು

ತ್ತಲಿಲ್ಲ. ಆದುದರಿಂದ ಈ ಹದಿನೈದು ವರ್ಷಗಳ ಕಾಲವನ್ನು ಆತನು, ತನ್ನ ರಾಜ್ಯದಲ್ಲೇ ಸಂಚರಿಸುತ್ತಾ-ರಾಜ್ಯದ ಸುವ್ಯವಸ್ಥೆಯನ್ನು ಗಮನಿಸುತ್ತಾ-ಪರಕೀಯರು ದಂಡೆತ್ತಿಬಂದು ಇದ್ದುದನ್ನು ಅಪಹರಿಸದಂತೆ ರಾಜ್ಯವನ್ನಾಳಿಕೊಂಡು ಇದ್ದಿರಬಹುದು ಎಂದು ಊಹಿಸಿ, ಆ ನಮ್ಮ ಊಹೆಯೇ ನಿಶ್ಚಯವಿರಬೇಕೆಂದು ನಂಬಿ, ನಿರ್ಧರಿಸಬೇಕಾಗಿದೆ.

ಪುಲಿಕೇಶಿ ಸಾರ್ವಭೌಮನ ಆಳ್ವಿಕೆಯ ಕೊನೆಯ ಭಾಗದಲ್ಲಿ ಚೀನಾ ದೇಶದ ಯಾತ್ರಿಕನಾದ ಹುವೆನತ್ಸಾಂಗನೆಂಬ ಬೌದ್ಧಮತೀಯನು ಹಿಂದೂ ದೇಶದಲ್ಲಿ ಸಂಚರಿಸಿ ಆಗ ಸುಪ್ರಸಿದ್ಧವಾಗಿದ್ದುವೆಂದು ಹೆಸರ್ಗೊಂಡ ಹಲವು ರಾಜಧಾನಿಗಳನ್ನು ಸಂದರ್ಶಿಸಿ, ಅಲ್ಲಿಯ ಧಾರ್ಮಿಕ ನೈತಿಕ ಸಾಮಾಜಿಕ ರಾಜಕೀಯ ವಿಚಾರಗಳನ್ನು ಯಥಾವತ್ತಾಗಿ ವರ್ಣಿಸಿರುತ್ತಾನೆ. ಇದರಿಂದ ಆ ಕಾಲದ ಅನೇಕ ಚಾರಿತ್ರಿಕಾಂಶಗಳು ದೊರಕುವಂತಾಗಿದೆ. ಕರ್ಣಾಟಕ ರಾಜ್ಯದ ವಿಚಾರವಾಗಿ ಆತನ ಹೇಳಿಕೆಗಳಲ್ಲಿ ಕೆಲವನ್ನು ಇಲ್ಲಿ ಕೊಡಲೆಳಸುತ್ತೇವೆ.—'ಪುಲಿಕೇಶಿಯ ರಾಜ್ಯವು ೫೦೦೦ ಲೀ ಎಂದರೆ ೮೩೫ ಮೈಲು ವಿಸ್ತಾರವಾಗಿದೆ. ಅವನ ರಾಜಧಾನಿಯು ಬಂದಾನೊಂದು ನದಿಯ (ಮಲಪ್ರಭಾ) ದಡದಲ್ಲಿ ೩೦ ಲೀ ಎಂದರೆ ಸುಮಾರು ೫ ಮೈಲು ವಿಸ್ತಾರವಾಗಿದೆ. ಆತನ ರಾಜ್ಯವು (ಕರ್ಣಾಟಕ) ಫಲವತ್ತಾದ ನಾಡು. ಹವೆ ಉಷ್ಣ. ಜನರು ನಿಗರ್ವಿಗಳೂ ಪ್ರಾಮಾಣಿಕರೂ ಆಗಿದ್ದಾರೆ. ಅವರು ದೀರ್ಘದೇಹಿಗಳೂ ಆಜಾನುಬಾಹುಗಳೂ ಆಗಿ ಶೂರರಾಗಿದ್ದಾರೆ. ಅವರು ಉಪಕಾರಿಗಳಿಗೆ ಪರಮೋಪಕಾರಿಗಳು. ಹಗೆಗಳ ವಿಷಯದಲ್ಲಿ ನಿಷ್ಕರುಣಿಗಳು. ಅವರು ಅಪಮಾನವನ್ನು ಎಷ್ಟುಮಾತ್ರವೂ ಸಹಿಸಲಾರದಂತಹ ಸ್ವಾಭಿಮಾನಿಗಳು. ಶತ್ರುವನ್ನಾದರೂ ಮೋಸದಿಂದ ಕೊಲ್ಲುವಂತಹ ನೀಚಭಾವವು ಅವರಲ್ಲಿಲ್ಲ. ಯುದ್ಧದಲ್ಲಿ ಸೋತುಬಂದರೆ ಅವನಿಗೆ ಸೀರೆಯುಡಿಸಿ ಬಳೆತೊಡಿಸಿ ಅವಮಾನಗೊಳಿಸಿ, ಅವನಲ್ಲಿ ನವಸ್ಫೂರ್ತಿಯುಂಟಾಗುವಂತೆ ಮಾಡುವುದು ಅವರಲ್ಲಿ ಪದ್ಧತಿಯಾಗಿದೆ. ಅಲ್ಲಿಯ ಜನರು ಧರ್ಮಾಭಿಮಾನಿಗಳು; ವಿದ್ಯಾಕಾಂಕ್ಷಿಗಳು. ಅವರಲ್ಲಿ ಧರ್ಮವಿಚಾರದಲ್ಲಿ ಅಸೂಯೆಯಿಲ್ಲ. ಬೌದ್ಧ ಜೈನ ಬ್ರಾಹ್ಮಣಕವಿಗಳಿಂದ ರಚಿತವಾದ ಗ್ರಂಥಗಳನ್ನು ಸಕಲರೂ ಓದಿ ರಸಗ್ರಹಣಮಾಡುವಂತಹ ರಸಿಕತೆಯು ಅವರಲ್ಲುಂಟು. ಆ ದೇಶದಲ್ಲಿ

೧೦೦ ಸಂಗ್ರಹಾರಾಮಗಳೂ, ೫೦೦೦ ಮಂದಿ ಉಪದೇಶಕರೂ, ೧೦೦ ದೇವಸ್ಥಾನಗಳೂ ಇವೆ. ಹಲವು ಮತಗಳಿಗೆ ಸೇರಿದ ಜನರು ಪರಸ್ಪರ ಮೈತ್ರೀಭಾವದಿಂದ ಏಕತ್ರ ವಾಸಿಸುತ್ತಿದ್ದಾರೆ. ಅಶೋಕಮಹಾರಾಜನ ಕಾಲದಲ್ಲಿ ನೆಡಿಸಿದ ಸ್ತೂಪಗಳಲ್ಲಿ ಐದು ಈ ರಾಜ್ಯದಲ್ಲಿ ದೊರೆಯುತ್ತಿವೆ." ಎಂದು ಮುಂತಾಗಿ ಆತನು ವರ್ಣಿಸಿದ್ದಾನೆ.

ಪುಲಿಕೇಶಿ ಸಾರ್ವಭೌಮನ ಆಳ್ವಿಕೆಗೊಳಪಟ್ಟಿದ್ದ ಕರ್ಣಾಟಕರಾಜ್ಯವು ನಾವು ಹಿಂದೆ ಒಂದೆಡೆಯಲ್ಲಿ ಹೇಳಿರುವಂತೆ ಉತ್ತರದಲ್ಲಿ ನರ್ಮದಾ ನದಿಯಿಂದ ದಕ್ಷಿಣದಲ್ಲಿ ಕಂಚಿಯವರೆಗೂ ವ್ಯಾಪಿಸಿ, ಪೂರ್ವಪಶ್ಚಿಮಗಳಲ್ಲಿ ಸಮುದ್ರಗಳೇ ಮೇರೆಗಳಾಗಿರಲು ವೈಭವಪೂರ್ಣಸ್ಥಿತಿಯಲ್ಲಿ ಮೆರೆಯುತ್ತಲಿದ್ದಿತು. ಅಂದಿನ ಕನ್ನಡಿಗರು, ತಮ್ಮ ಧೈರ್ಯ ಶೌರ್ಯ ಸಾಹಸ ಬುದ್ಧಿ ಕುಶಲತೆಗಳಿಂದ ದೇಶದೇಶಾಂತರಗಳಲ್ಲೂ ಪ್ರಖ್ಯಾತರಾಗಿದ್ದರು. ಕಳಿಂಗ ಕೋಸಲ ಚೋಳ ಪಾಂಡ್ಯ ದೇಶಗಳ ರಾಜರೂ ಗಂಗರಸರೂ ನಮ್ಮ ಸಾರ್ವಭೌಮನಿಗೆ ಸ್ನೇಹಿತರೂ ಸಾಮಂತರೂ ಆಗಿ ಓಲೈಸುತ್ತಿದ್ದರು. ಆತನ ತಮ್ಮನಾದ ವೆಂಗಿನಾಡಿನ ಕುಬ್ಜವಿಷ್ಣುವರ್ಧನನು ಸಕಲ ವಿಷಯಗಳಲ್ಲೂ ಆತನಿಗೆ ವಿಧೇಯನಾಗಿ ಅನುಕೂಲನಾಗಿದ್ದನು. ಗುಜರಾತು, ಮಧ್ಯಪ್ರಾಂತ, ಮಾಳವ, ಲಾಟ, ವರ್‍ಹಾಡ, ಖಾನ್‌ದೇಶ, ನಾಸಿಕ್, ಹೈದರಾಬಾದ್, ಕುಂತಳ, ಸಾವಂತವಾಡಿ, ಕೊಂಕಣ, ಬನವಾಸಿ ಮುಂತಾದ ಹಲವು ಪ್ರಾಂತಗಳ ಮಂಡಲೇಶ್ವರರು ಆತನ ಆಜ್ಞೆಯನ್ನು ಮಹಾಪ್ರಸಾದವೆಂದು ಸಿರಸಾ ಧಾರಣಮಾಡಲು ಸರ್ವದಾ ಸಿದ್ಧರಿದ್ದರು. ಸಹಸ್ರಸಹಸ್ರಸಂಖ್ಯೆಯ ಆನೆ ಕುದುರೆ ರಥ ಕಾಲಾಳುಗಳಿಂದ ಕೂಡಿದ ಸುಸಜ್ಜಿತವಾದ ಸೈನ್ಯವು ಯಾವಾಗಲೂ ಸಿದ್ಧವಾಗಿದ್ದು, ಶತ್ರುರಾಜರು ಕರ್ಣಾಟಕದ ಕಡೆ ಇಣಿಕಿನೋಡದಂತೆ ರಕ್ಷಿಸಿಕೊಂಡುಬಂದಿತು. ರಾಜಾಸ್ಥಾನವು ರಾಜನೀತಿವಿಶಾರದರೂ, ಲೋಕವ್ಯವಹಾರಜ್ಞರೂ, ಧರ್ಮಶಾಸ್ತ್ರವನ್ನರಿತ ಪ್ರಾಜ್ಞರೂ ಮಹಾಕಾರ್ಯದಕ್ಷರೂ, ರಣಧೀರರೂ ಆದ ಬಹುವಿಧ ಪ್ರತಿಭಾಶಾಲಿಗಳಾದ ಜನಗಳಿಂದ ಕೂಡಿ ಶೋಭಿಸುತ್ತಿದ್ದಿತು. ದೇಶದಲ್ಲಿ ವ್ಯವಸಾಯ, ವ್ಯಾಪಾರ, ಶಿಲ್ಪ ಮುಂತಾದುವುಗಳಲ್ಲಿ ನಿಪುಣರೂ ಹಸ್ತಕೌಶಲ್ಯವನ್ನು ಪ್ರಕಟಿಸುವ ವಿವಿಧ ಕಲಾಕುಶಲಿಗಳೂ ಇದ್ದು ರಾಜ್ಯದ ಸೌಂದರ್ಯವನ್ನು

ಹೆಚ್ಚಿಸುತ್ತಿದ್ದರು. ಸ್ವಾಮಿಭಕ್ತಿಯುತರೂ, ಪಾಪಭೀತರೂ, ನಿಸ್ಪೃಹರೂ ಆದ ಸಹಸ್ರಾರು ಮಂದಿ ಅಧಿಕಾರಿಗಳು ದೇಶದ ಎಲ್ಲಾ ಭಾಗದಲ್ಲೂ ವಾಸಿಸಿ ಪ್ರಜೆಗಳ ಧನ ಮಾನ ಪ್ರಾಣಗಳಿಗೆ ಅಪಾಯವುಂಟಾಗದಂತೆ ಕಾಪಾಡಿಕೊಂಡು ಬರುತ್ತಿದ್ದರು. ಸುವೃಷ್ಟಿಯಿಂದಲೂ, ನಿರ್ಭೀತಿಯ ಬಾಳ್ವೆಯಿಂದಲೂ ಸಂತುಷ್ಟರಾದ ಪ್ರಜೆ ಪರಿವಾರಗಳಿಂದ ಅಂದಿನ ಕರ್ಣಾಟಕ ರಾಜ್ಯಭಾರವು ಅತಿಶಯ ಮಹತ್ವಸ್ಥಿತಿಯಲ್ಲಿ ವಿರಾಜಿಸುತ್ತಿದ್ದಿತು. ಪುಲಿಕೇಶಿ ಸಾರ್ವಭೌಮನು ತನ್ನ ೪೨ ವರ್ಷದ ಆಳ್ವಿಕೆಯ (೩೦ ವರ್ಷ ?) ಲ್ಲಿ ಕರ್ಣಾಟಕದ ರಾಜ್ಯವೈಭವವನ್ನು ಪೃಥ್ವಿಯ ಮಹಾ ರಾಜ್ಯಭಾರಗಳಲ್ಲಿ ಒಂದೆನಿಸುವಂತಹ ಕೀರ್ತಿಪ್ರತಿಷ್ಠೆಗಳಿಗೆ ತಂದು ಮುಟ್ಟಿಸಿ, ತನ್ನ ಯಶಶ್ಚಂದ್ರಿಕೆಯನ್ನು ಆಚಂದ್ರಾರ್ಕ ಬೆಳಗಿಸಿದನು.



# ಉ ಪ ಸಂ ಹಾ ರ

ಪುಲಿಕೇಶಿ ಸಾರ್ವಭೌಮನ ವೈಭವಪೂರ್ಣವಾದ ಬಾಳ್ವೆಗೆ ಯೋಗ್ಯವಾದ ವೀರಮರಣವು ಆತನಿಗೆ ದೊರೆಯಲಿಲ್ಲವೆಂಬುದೊಂದು ಶೋಚನೀಯ ವಿಚಾರವು. ಕ್ಷತ್ರಿಯರಾಜನು, ಶತ್ರುವಿನೊಂದಿಗೆ ಯುದ್ಧರಂಗದಲ್ಲಿ ಕಾದಾಡಿ ಆಯುಧದ ಮೊನೆಯಿಂದ ಹತನಾದರೆ, ಅದಕ್ಕಿಂತಲೂ ಅವನಿಗೆ ಸೌಭಾಗ್ಯವು ಮತ್ತೊಂದಿಲ್ಲ. ಆದರೆ, ನಮ್ಮ ಕರ್ಣಾಟಕ ಸಾರ್ವಭೌಮನಿಗೆ ಆ ಬಗೆಯ ಮರಣಸೌಭಾಗ್ಯವು ದೊರೆಯಲಿಲ್ಲ. ಕ್ರಿ. ಶ. ೬೩೯ ರ ಸುಮಾರಿನಲ್ಲಿ ಹುವೆನತ್ಸಾಂಗನಿಂದ ವರ್ಣಿಸಲ್ಪಟ್ಟಾಗ ಚಾಲುಕ್ಯಸಾಮ್ರಾಜ್ಯವು ವೈಭವದ ಪರಮಾವಧಿ ಮೇರೆಯನ್ನು ಮೀರಿದ್ದಿತೆಂದು ಹೇಳಬಹುದು. ಆ ತರುವಾಯ ಪುಲಿಕೇಶಿಯು ಚರಿತ್ರೆಯಲ್ಲಿ ಬಾಹ್ಯಗೋಚರನಾಗುತ್ತಲಿಲ್ಲ. ೬೩೯ ರಿಂದ ೬೪೦ ರ ವರೆಗಿನ ಈ ಮಧ್ಯಕಾಲದಲ್ಲಿ ಆತನು ಕ್ಷಯರೋಗಪೀಡಿತನಾಗಿ ಹಾಸಿಗೆಹಿಡಿದಿದ್ದನೆಂದೋ ಅಥವ ಪಾರ್ಶ್ವವಾಯುವ್ಯಾಧಿಪೀಡಿತನಾಗಿ ನಿಸ್ಸತ್ವನಾಗಿದ್ದನೆಂದೋ ಚರಿತ್ರಕಾರರು ಮನಬಂದಂತೆ ಊಹಿಸುತ್ತಿದ್ದಾರೆ.

ಎಂತಹ ಲೋಕೈಕವೀರನೇ ಆದರೂ ಮಾನವನು ಕರ್ಮಾಧಿದೇವತೆಗೆ ಒಳಪಟ್ಟು ನಡೆಯಬೇಕಾದ ವಿಧಿಯು ತಪ್ಪದುದರಿಂದ ನಮ್ಮ ಕಥಾನಾಯಕನೂ ಹಾಗೆಯೇ ಯಾವುದೋ ಒಂದು ದುರಂತವ್ಯಾಧಿಗೆ ವಶನಾಗಿ ತನ್ನ ಕೊನೆಗಾಲವನ್ನು ಕಳೆದಿರಬಹುದು.

ಡಾ. ಫ್ಲೀಟರ ಹೇಳಿಕೆಯಮೇರೆಗೆ ಪುಲಿಕೇಶಿರಾಜನಿಗೆ, ಆದಿತ್ಯವರ್ಮ, ಚಂದ್ರಾದಿತ್ಯ, ವಿಕ್ರಮಾದಿತ್ಯ ಮತ್ತು ಜಯಸಿಂಹವರ್ಮ ಎಂಬ ನಾಲ್ಕು ಮಂದಿ ಪುತ್ರರಿದ್ದಂತೆ ತಿಳಿಯಬರುತ್ತದೆ. ಇವರಲ್ಲಿ ಆದಿತ್ಯವರ್ಮನು ಈಗಿನ ಚಿತ್ರದುರ್ಗ ಬಳ್ಳಾರಿ ಕರ್ನೂಲು ಪ್ರಾಂತಗಳಿರುವ ನಾಡನ್ನೂ, ಚಂದ್ರಾದಿತ್ಯನು ಸಾವಂತವಾಡಿಯಲ್ಲಿ ವಾಸಿಸಿ ಉತ್ತರ ಕೊಂಕಣ ಪ್ರಾಂತವನ್ನೂ, ಜಯಸಿಂಹವರ್ಮನು ಗುಜರಾತು ಪ್ರಾಂತವನ್ನೂ ಮಂಡಲೇಶ್ವರರಾಗಿ ಪಾಲಿಸುತ್ತಿದ್ದರು. ಮೂರನೆಯವನಾದ ವಿಕ್ರಮಾದಿತ್ಯನು ತಂದೆಗೆ ಅತ್ಯಂತ ಪ್ರೀತಿಪಾತ್ರನಾಗಿದ್ದುದರಿಂದ ಬಾದಾಮಿಯಲ್ಲೇ ಇದ್ದು ಅದಕ್ಕೆ ವಳಿತವಾಗಿದ್ದ ನಾಡನ್ನೂ ಪಾಲಿಸುತ್ತಿದ್ದನು.

ಅದ್ವಿತೀಯ ವೀರನೆನಿಸಿ, ಅಖಂಡಿತಪ್ರತಾಪಿಯೆನಿಸಿ, ಕರ್ಣಾಟಕರ ಸಾಮ್ರಾಜ್ಯಲಕ್ಷ್ಮಿಯ ಯಶೋಮಹಿಮೆಯನ್ನು ದಿಗ್ದೇಶಗಳಲ್ಲೂ ಬೆಳಗಿಸಿ, ಕರ್ಣಾಟಕ ಸಾರ್ವಭೌಮನೆಂಬ ಅದ್ವಿತೀಯಪದವಿಗೆ ಏಕಮಾತ್ರ ಅಧಿಕಾರಿಯಾಗಿ ರಾಜ್ಯಪಾಳಿದ ಮಹಾರಾಜಾಧಿರಾಜ, ಪರಮಭಟ್ಟಾರಕ, ಪರಮಮಹೇಶ್ವರ, ಸತ್ಯಾಶ್ರಯ ಶ್ರೀ ಪುಲಿಕೇಶಿ ನರವರೇಣ್ಯನ ಕೀರ್ತಿಪ್ರಭೆಯು ಅಖಿಳಕರ್ಣಾಟಕ ನಿವಾಸಿಗಳ ಕಣ್ಣೆದುರಿನಲ್ಲೂ ಸರ್ವದಾ ಪ್ರಕಾಶಿಸುತ್ತಿರಲಿ! ಶ್ರೀವರನು, ಈ ಜ್ಯೋತಿಯ ಆದರ್ಶವನ್ನು ಅವರ ಕಣ್ಣೆದುರಿನಲ್ಲಿಟ್ಟು ಅವರಲ್ಲಿ ಮನೆಮಾಡಿಕೊಂಡಿರುವ ಅಲ್ಪತೆ ಅಸೂಯತೆ ಅನೈಕಮತ್ಯಾದಿಗಳನ್ನು ತೊಲಗಿಸಿ ಉದಾರತೆ, ವಿಶಾಲಭಾವ, ಐಕಮತ್ಯ ಮುಂತಾದುವುಗಳನ್ನೂ, ಹೇಡಿತನ ಕ್ಷುದ್ರತನಗಳನ್ನು ಕಳೆದು ಧೈರ್ಯ ಶೌರ್ಯಾದಿಗಳನ್ನೂ, ಭಾಷೆ, ಸಂಸ್ಕೃತಿ ಮತ್ತು ಕೊನೆಯದಾಗಿ ರಾಷ್ಟ್ರ ಇವುಗಳ ಐಕಮತ್ಯವನ್ನು ಗಳಿಸಲು ಆವಶ್ಯಕವಾದ ಸ್ವಾಭಿಮಾನ ಸ್ವಾರ್ಥತ್ಯಾಗ ನಿರಂತರ ಪರಿಶ್ರಮ ಮುಂತಾದ ಶ್ರೇಷ್ಠಗುಣಗಳನ್ನೂ ದಯೆಗೈದು ರಕ್ಷಿಸಲಿ.

**ತಥಾಸ್ತು.**

ಶ್ರೀರಾಮ ಸಹಾಯಂ

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

### ಮುನ್ನುಡಿ :—

ಇಂದು ದಕ್ಷಿಣ ಹಿಂದೂಸ್ಥಾನದಲ್ಲಿ ಪ್ರಾಚುರ್ಯಗೊಂಡು ಜನಾಂಗದ ನಿತ್ಯವ್ಯವಹಾರದಲ್ಲಿರುವ ಸಂಗೀತವಿದ್ಯಾ ಸಾಮ್ರಾಜ್ಯಕ್ಕೆ, ನಮ್ಮ ಕಥಾನಾಯಕರಾದ ಶ್ರೀ ತ್ಯಾಗರಾಜ ಸ್ವಾಮಿಗಳನ್ನು ಸಾರ್ವಭೌಮರೆಂದರೆ ಅದರಲ್ಲಿ ಅತಿಶಯೋಕ್ತಿಯಿಲ್ಲ. ದಕ್ಷಿಣ ದೇಶದ ಯಾವುದೊಂದು ದೇವಸ್ಥಾನ - ಧರ್ಮಸ್ಥಳವನ್ನಾಗಲೀ, ಮದುವೆ ಮುಂಜಿ ಮುಂತಾದ ಶುಭಕಾರ್ಯ ನಡೆವ ಗೃಹವನ್ನಾಗಲೀ ಹೊಕ್ಕಲ್ಲಿ, ಸುಶಿಕ್ಷಿತನಾದ ಮೇಳದವನು 'ತ್ಯಾಗರಾಜ' ಮುದ್ರಿಕೆಯಿಂದ ಮನೋಹರವಾದ ವಾದ್ಯವನ್ನು ನುಡಿಸಿ ಶ್ರೋತೃವನ್ನು ಸಂತೋಷಗೊಳಿಸುವನು. ವಿವಾಹ ಮಹೋತ್ಸವದಲ್ಲಿ ಸುಶಿಕ್ಷಿತಳಾದ ನವವಧುವು ತ್ಯಾಗರಾಜ ಕೃತಿಯನ್ನೇ ವೀಣಾ - ವೇಣು 'ಹಾರ್ಮೋನಿಯಂ' ಮುಂತಾದ ಗಾಯನ ಸಾಧನಗಳೊಂದಿಗೆ ಹಾಡಿ ಮನರಂಜನೆ ಮಾಡುವಳು. ಯಾವುದೊಂದು ಭಜನ ಮಂದಿರವನ್ನು ಹೊಕ್ಕರೆ, ಅಲ್ಲಿ ಭಕ್ತಭಾಗವತರು, ಪರವಶರಾದವರೋ ಎಂಬಂತೆ ಶ್ರೀ ತ್ಯಾಗರಾಜರ ದಿವ್ಯ ಕೀರ್ತನೆಗಳನ್ನೇ ಹಾಡಿ ಸ್ವರ್ಗ ಸುಖವನ್ನು ಹೊಂದಿ - ಹೊಂದಿಸುವರು. ಬಂಡಿಯಲ್ಲಿ ಕುಳಿತು ಪ್ರಯಾಣ ಹೊರಟರೆ ಜೊತೆಯ ಪ್ರಯಾಣಿಕನು ಗೊಣಗುತ್ತಿರುವ ತ್ಯಾಗರಾಜ ಕೃತಿಯ ಒಂದು ಖಂಡ ಚರಣವು ಕಿವಿಗೆ ಬೀಳದಿರದು. ಬೀದಿಯಲ್ಲಿ ಕುಳಿತು ಭಿಕ್ಷೆಗಾಗಿ ಯಾಚಿಸುವ ತಿರುಪೆಗಾರನಿಗೂ ಅದೇ ಶ್ರೀ ತ್ಯಾಗರಾಜ ಕೀರ್ತನವೇ ಜೀವನಾಧಾರವಾಗಿರುವುದು.—ಮಾತ್ರವಲ್ಲ, ರಾಜಸ್ಥಾನಗಳಲ್ಲೂ ರಾಜಮಂದಿರಗಳಲ್ಲೂ ಸಂಗೀತ ಸಾಹಿತ್ಯ ಕಲಾಪ್ರವೀಣರು, ಆ ಗಾನ ಸಾರ್ವಭೌಮನ ಕೃತಿರತ್ನ ಕಂಠಾಭರಣಗಳನ್ನು ಧರಿಸಿ, ಅವುಗಳ ಜ್ಯೋತಿಪ್ರಕಾಶವನ್ನು ತಮ್ಮ ಪಾಂಡಿತ್ಯ ಪ್ರೌಢಿಮೆಯಿಂದ ದಶಾಧಿಕವಾಗಿ ಹೆಚ್ಚಿಸಿ ಶ್ರೋತೃ ವರ್ಗ

ವನ್ನು ಆನಂದಾಮೃತ ಶರಧಿಯಲ್ಲಿ ಓಲಾಡಿಸುವರು. ರಾಜಕನ್ಯೆಯರೂ ನಾಗರಿಕ ಕುಲಕನ್ಯೆಯರೂ ವೀಣಾ ವೇಣು ವಾದ್ಯಗಳನ್ನು ಸಹಾಯಗೊಂಡು ಆ ತ್ಯಾಗರಾಜ ರಚಿತವಾದ ದಿವ್ಯ ನಾಮಾವಳಿಗಳನ್ನೇ ಕೀರ್ತಿಸಿ ತೃಪ್ತಿಗೊಳ್ಳುವರು. ಹೀಗೆ ಪಾಮರ ಪಂಡಿತ, ಭಿಕ್ಷುಕ ಲಕ್ಷಾಧಿಪ, ಬಾಲಕ ವೃದ್ಧ, ಸ್ತ್ರೀ-ಪುರುಷ, ರಾಗಿ ವಿರಾಗಿ, ರಸಿಕ ಭಾಗವತ, ಲೌಕಿಕ ತಾತ್ವಿಕ ಮುಂತಾದ ಜನಾಂಗದ ಕೇವಲ ಕೀಳುದೆಸೆಯಲ್ಲಿರುವವನಿಂದ ಅತ್ಯುನ್ನತ ದೆಸೆಯಲ್ಲಿರುವವನವರೆಗೆ ಪ್ರತಿಯೊಬ್ಬನಿಗೂ ಭುಕ್ತಿ - ಮುಕ್ತಿಗಳನ್ನೊದಗಿಸುವಲ್ಲಿ ಅದ್ವಿತೀಯವೆನ್ನಿಸುವಂತಹ ಸಂಗೀತ ಸಾಹಿತ್ಯ ಸಾಮಗ್ರಿಯನ್ನು ಗಳಿಸಿಕೊಟ್ಟು ಗಾನ ಪ್ರಪಂಚದಲ್ಲಿ ಅಖಂಡ ಸಾಮ್ರಾಜ್ಯವನ್ನು ಅನುಭವಿಸುತ್ತಿರುವ ಶ್ರೀರಾಮ ಭಕ್ತಾಗ್ರಣಿ - ತ್ಯಾಗರಾಜ ಸ್ವಾಮಿಯವರನ್ನು ಸಂಗೀತ ವಿದ್ಯಾ ಸಾಮ್ರಾಜ್ಯ ಸಾರ್ವಭೌಮರೆಂದರೆ ಅದರಲ್ಲಿ ಅತಿಶಯೋಕ್ತಿಯೇನಿದೆ? —

ಕರ್ಣಾಟಕದಲ್ಲಿ ಶ್ರೀ ಪುರಂದರ ದಾಸರು ಕನಕದಾಸರು ಮುಂತಾದ ದಾಸವರ್ಯರ ಪುಣ್ಯ ನಾಮಗಳಂತೆಯೇ ತೆಲುಗು ತಮಿಳು ದೇಶಗಳಲ್ಲಿ ಶ್ರೀ ತ್ಯಾಗರಾಜರ ದಿವ್ಯ ನಾಮವೂ ಪ್ರತಿ ಮನೆಯ ಮಾತಾಗಿದೆ. ಈ ಮಹಾನುಭಾವರ ಅವತಾರ ಕಾಲದಿಂದ ಈವರೆಗೆ ಎಷ್ಟು ಸಾವಿರಮಂದಿ - ಎಷ್ಟು ಲಕ್ಷಮಂದಿ ಮಾನವ ಪ್ರಾಣಿಗಳು ಅವರ ದಿವ್ಯ ಕೀರ್ತನೆಗಳ ಮಹಿಮೆಯಿಂದ ಲೌಕಿಕ ಮಗ್ನವಾಗಿದ್ದ ತಮ್ಮ ಚಿತ್ತವೃತ್ತಿಯನ್ನು ಭಗವತ್ಪರವನ್ನಾಗಿಸಿಕೊಂಡು ಜನ್ಮಸಾರ್ಥಕತೆಯನ್ನು ಹೊಂದಿದ್ದಾರೆಂಬುದನ್ನು ತಿಳಿಯಲು ಅಸದಳವು — ಮತ್ತೆಷ್ಟು ಕೋಟಿ ಮಂದಿ ಅವರ ಗಾನ ಸುಧಾರಸ ಪಾನಮಾಡಿ ಪರಮಾನಂದ ಸ್ವಾಂತರಾಗಿ ಸಂಸಾರದ ದುಸ್ತರ ತಾಪತ್ರಯಗಳನ್ನೂ, ಈಷಣತ್ರಯಗಳ ಹಂಬಲನ್ನೂ ಮರೆತು, ಒಂದು ಮುಹೂರ್ತ ಕಾಲವಾದರೂ ರಘುಕುಲ ಸಾರ್ವಭೌಮ ಶ್ರೀರಾಮಚಂದ್ರ ಸ್ವಾಮಿಯ ಕಡೆಗೆ ದೃಷ್ಟಿಯನ್ನು ತಿರುಗಿಸಿ, ಶಾಂತತೆಯ ಸುಖಾನುಭವವನ್ನು ಹೊಂದಿದರೆಂಬುದನ್ನು ಲೆಕ್ಕಮಾಡಿ ತಿಳಿಯುವುದು ಅಸಾಧ್ಯವು. ಅವರು ಒದಗಿಸಿಕೊಟ್ಟ ಈ ದಿವ್ಯ ಸಾಧನದಿಂದ ಅಂದಿನಿಂದ ಇಂದಿನವರೆಗೆ ಎಷ್ಟು ಲಕ್ಷ ಮಂದಿ ಜನರು ತಮ್ಮ ಇಹಲೋಕ ಜೀವಿತವನ್ನೂ, ಮನ

ಶ್ಯಾಂತಿಯನ್ನೂ, ಪರಗತಿಯನ್ನೂ ಗಳಿಸಿಕೊಂಡರು,—ಗಳಿಸುತ್ತಲಿರುವರು ಎಂಬುದಕ್ಕಾದರೂ ಎಣಿಕೆಯುಂಟೆ? ಇಂತಹ ಮಹಾನುಭಾವರದೇ ಅಲ್ಲವೆ ನಿಜವಾದ ಸೌಭಾಗ್ಯವು? ಇಂತಹ ಮಹಾ ಪುರುಷರೇ ಅಲ್ಲವೆ ನಿಜವಾದ ಲೋಕೋದ್ಧಾರಕರು; ಇಂತಹ ಪುರುಷ ಪುಂಗವರೇ ಅಲ್ಲವೆ ಅನ್ವರ್ಥ ಸಾರ್ವಭೌಮರು!—

ಶ್ರೀ ತ್ಯಾಗರಾಜ ಸ್ವಾಮಿಗಳ ಈ ಚರಿತ್ರೆಯಲ್ಲಿ, ಬಹು ಕೀಳ್ದಿಸೆಯಿಂದ ಜೀವಿತದ ಉನ್ನತ ದೆಸೆಗೇರಿದ ಒಬ್ಬ ಮನುಷ್ಯನ ಚರಿತ್ರೆಯಲ್ಲಿ ಕಂಡುಬರುವಂತಹ ವಿಶೇಷ ಏರಿಕೆ ಇಳಿತಗಳಾಗಲೀ, ಉದ್ವೇಗಕರಗಳಾದ ಹಲವು ಘಟನಾವಳಿಗಳಾಗಲೀ ಬಾರವು. ಸಾಮಾನ್ಯ ಜೀವನ ಪ್ರವಾಹದಲ್ಲಿ ಸಾಗುತ್ತಿದ್ದು - ಲೌಕಿಕ ಜೀವಿತದಲ್ಲಿ ಗೃಹಸ್ಥ ಧರ್ಮದಲ್ಲೇ ಇದ್ದ ಅವರು ಶ್ರೀರಾಮಭಕ್ತಿ ಭಾಗ್ಯವನ್ನು ಅತಿಶಯವಾಗಿ ಗಳಿಸಿ ಅಂತರ್ಯವಾಗಿ ತಾವು ಅನುಭವಿಸುತ್ತಿದ್ದ ಭಕ್ತಿಭಾಗ್ಯ ಸುಖಾನುಭವವನ್ನು ಸಂಗೀತ ಸಾಹಿತ್ಯಾದಿ ಸಾಧನಗಳ ಮೂಲಕ ಸಕಲರ ಅನುಭವಕ್ಕೂ ತಂದು ಕೊಟ್ಟು ಜಗತ್ತಿನಲ್ಲಿ ಅವಿನಾಶಿಯಾದ ಕೀರ್ತಿಯನ್ನೂ ಪರದಲ್ಲಿ ಶಾಶ್ವತವಾದ ಸದ್ಗತಿಯನ್ನೂ ಸಂಪಾದಿಸಿಕೊಂಡರು. ಅವರ ಈ ಸಚ್ಚರಿತ್ರೆಯು ಕನ್ನಡಿಗ ಮಹಾಜನರಿಗೂ ಮನಃಪ್ರಸಾದವನ್ನು ಉಂಟುಮಾಡಿ, ಆ ಮಹಾನುಭಾವರಲ್ಲೂ ತನ್ಮೂಲಕ ಸರ್ವಶಕ್ತನಾದ ಶ್ರೀರಾಮಚಂದ್ರ ಸ್ವಾಮಿಯಲ್ಲೂ ಶ್ರದ್ಧಾಭಕ್ತಿಗಳನ್ನು, ಎಷ್ಟು ಅಲ್ಪ ರೀತಿಯಿಂದಲಾದರೂ ಉದಯಿಸುವಂತೆ ಮಾಡುವುದರಲ್ಲಿ ಸಹಾಯಕವಾದರೆ ಅದೇ ನಮ್ಮ ಶ್ರಮಕ್ಕೆ ಫಲವೆಂದು ಭಾವಿಸುತ್ತೇವೆ.

ಈ ಗ್ರಂಥರಚನೆಗೆ ತಮಿಳು ಭಾಷೆಯಲ್ಲಿ ರಚಿತವಾದ "ತ್ಯಾಗರಾಜ ಸ್ವಾಮಿ ಚರಿತ್ತಿರಮ್" ಎಂಬ ಗ್ರಂಥವೂ, 'ಶ್ರೀ ತ್ಯಾಗರಾಜ ಹೃದಯಮು' ಎಂಬ ಆಂಧ್ರ ಗ್ರಂಥವೂ, 'Thyagaraja' ಎಂಬ ಆಂಗ್ಲ ಗ್ರಂಥವೂ ಸಹಾಯಕಗಳಾದುದರಿಂದ ಆಯಾ ಗ್ರಂಥಗಳ ಕರ್ತರಿಗೆ ಈ ಮೂಲಕ ನಮ್ಮ ಕೃತಜ್ಞತೆಯನ್ನು ಸಮರ್ಪಿಸುತ್ತೇವೆ.

ಬೆಂಗಳೂರು
ತಾ|| ೨೫-೮-೧೯೨೯



ಇತಿ ಸುಜನ ವಿಧೇಯ,
**ಯಂ. ರಾಮರಾವ್.**

## ಶುದ್ಧ ಸೀಮಂತಿನಿ - ಆದಿತಾಳ



ಪ. ಜಾನಕೀರಮಣ ಭಕ್ತಪಾರಿ - ಜಾತ ಪಾಹಿ ಸಕಲಲೋಕಶರಣ ಜಾ.

ಅ. ಗಾನಲೋಲ ಘನತಮಾಲನೀಲ - ಕರುಣಾಲವಾಲ ಸುಗುಣಶೀಲ ಜಾ.

ಚ. ರಕ್ತನಳಿನದಳನಯನ ನೃಪಾಲ - ರಮಣೀಯಾನನ ಮುಕುರಕಪೋಲ<br>
ಭಕ್ತಿಹೀನಜನಮದಗಜಜಾಲ - ಪಂಚವದನ ತ್ಯಾಗರಾಜಪಾಲ ಜಾ.



ಸುಬೋಧ ಕುಸುಮಾಂಜಲಿ ಗ್ರಂಥಮಾಲಾ



ಶ್ರೀ ತ್ಯಾಗರಾಜ ಸ್ವಾಮಿ

ಶ್ರೀರಾಮ ಸಹಾಯಂ

ಗಾನ ವಿದ್ಯಾ ವಿಶಾರದ - ಶ್ರೀರಾಮ ಭಕ್ತಾಗ್ರಣಿ

# ಶ್ರೀ ತ್ಯಾಗರಾಜ ಸ್ವಾಮಿ



## ಅಧ್ಯಾಯ ೧ "ಜನನ-ಬಾಲ್ಯವಿದ್ಯಾಭ್ಯಾಸ"

ನಮ್ಮ ಮಾತೃಭೂಮಿಯಾದ ಈ ಭರತಖಂಡದಲ್ಲಿ ಜನ್ಮವೆತ್ತಿದ ಹಲವು ಮಂದಿ ಭಕ್ತ ಶಿರೋಮಣಿಗಳಲ್ಲಿ ಒಬ್ಬೊಬ್ಬರು ಒಂದೊಂದು ಬಗೆಯಿಂದ ಲೋಕ ಸಂಗ್ರಾಹಕರಾಗಿ ಭಗವತ್ಕಾರ್ಯ ಸಾಧನೆ ಮಾಡಿರುವರು. ಪೌರಾಣಿಕ ವ್ಯಕ್ತಿಗಳಾದ ಧ್ರುವ ಪ್ರಹ್ಲಾದ ಮಾರ್ಕಂಡೇಯಾದಿಗಳಂತೆ ಶ್ರವಣ ಕೀರ್ತನಾದಿ ನವವಿಧ ಭಕ್ತಿಪಥಗಳನ್ನನುಸರಿಸಿ ಭಗವಾನನನ್ನು ಆರಾಧಿಸಿ, ತಮ್ಮ ಲೌಕಿಕ ಜೀವಿತದ ಪ್ರತಿಯೊಂದು ಕರ್ಮವನ್ನೂ ಆತನ ಸೇವೆಯೆಂಬ ಮನೋಭಾವದಿಂದ ಆಚರಿಸಿ, ಲೋಕಕ್ಕೆ ಆದರ್ಶಭೂತರಾಗಿ ಮೆರೆದ ಮಹಾನುಭಾವರು ಕೆಲವರು. ಹಾಗಲ್ಲದೆ, ಭಗವದ್ಗುಣ ರಾಶಿಯನ್ನು ಮೃದುಮಧುರವಾಣಿಯಲ್ಲಿ ವರ್ಣಿಸುವ ಹಲವು ಬಗೆಯ ಕವಿತೆಗಳನ್ನು ರಚಿಸಿ ಪಾಡಿ,-ಪಾಷಾಣ ಹೃದಯಗಳನ್ನಾದರೂ ಕರಗಿಸಿ ಅಲ್ಲಿ ದ್ರವವನ್ನು ಉತ್ಪಾದನ ಮಾಡುವ ಅಂತಹ ಕವಿತೆಗಳ ಮೂಲಕ ಸಹಸ್ರಾರು ಸಂಖ್ಯೆಯ ಮಾನವ ಹೃದಯಗಳನ್ನು ಆಕರ್ಷಿಸಿ, ವಿಷಯಮಗ್ನವಾಗಿದ್ದ ಅವುಗಳನ್ನು ಭಗವತ್ಪರವಾಗುವಂತೆ ಮಾಡಿ ಲೋಕೋದ್ಧಾರಕರಾದ ಮಹಾಮಹಿಮರು ಮತ್ತೆ ಕೆಲವರು.

ವೈಷ್ಣವ ಭಕ್ತಿಪಂಥದಲ್ಲಿ, ಶ್ರೀರಾಮ ಶ್ರೀಕೃಷ್ಣ ಎಂಬೀ ಎರಡು ಭಗವದವತಾರಗಳಲ್ಲಿ ಶ್ರೀ ಮಹಾ ವಿಷ್ಣುವು ಜಗತ್ತಿನಲ್ಲಿ ಪ್ರಕಟಿಸಿದ ಅನಂತಾನಂತ ಲೀಲೆಗಳನ್ನು ಸಹಸ್ರ ಮುಖಗಳಿಂದ ವರ್ಣಿಸಿದ ವಾಲ್ಮೀಕಿ ವ್ಯಾಸಾದಿ ಮಹಾಮಹಿಮರಂತೆಯೇ ಶ್ರೀವರನ ಕಲ್ಯಾಣ ಗುಣಮಾಲೆಯನ್ನು ಹಲವು ಬಗೆಗಳಿಂದ ಹಾಡಿ ಪಾಡಿ ಜನ್ಮಸಾರ್ಥಕಗೊಳಿಸಿಕೊಂಡ ಭಕ್ತಶ್ರೇಷ್ಠರು ಆಧುನಿಕ ಕಾಲದಲ್ಲೂ ಹಲವರು ಉದಯಿಸಿದರು. ಉತ್ತರ ಭಾರತದಲ್ಲಿ ಗೋಸ್ವಾಮಿ ತುಲಸೀದಾಸ, ಮೀರಾಬಾಯಿ ಕಬೀರ,-ಚೈತನ್ಯ ದೇವ ಮುಂತಾದ ಭಕ್ತ ಶಿರೋಮಣಿಗಳಿಗೆ ಸ್ವಲ್ಪ ಹೆಚ್ಚು ಕಡಮೆ ಸಮಕಾಲೀನರಾಗಿ, ದಕ್ಷಿಣದಲ್ಲೂ ನಾಮದೇವ ಜಯದೇವ ತುಕಾರಾಮ ಮುಂತಾದ ಸಾಧು ಶ್ರೇಷ್ಠರೂ, ಪುರಂದರದಾಸ ಕನಕದಾಸ ಮುಂತಾದ ದಾಸಶ್ರೇಷ್ಠರೂ ಜನ್ಮಿಸಿ ಮಾನವ ಕೋಟಿಯನ್ನು ಉದ್ಧರಿಸಿದರು. ವಾಲ್ಮೀಕಿ ವ್ಯಾಸಾದಿಗಳು ಪಂಡಿತಾವಲೋಕನಕ್ಕೆ ಸಾಧ್ಯವಾಗುವಂತೆ ಗೀರ್ವಾಣ ಭಾಷೆಯಲ್ಲಿ ಗ್ರಂಥರಚನೆ ಮಾಡಿದ್ದರೆ, ಮೇಲ್ಕಂಡ ಭಕ್ತವರ್ಯರು ವಿದ್ಯಾವಂತರಲ್ಲದ ಪಾಮರ ಜನಸಮುದಾಯವೂ ಭಗವದ್ಗುಣ ವರ್ಣನೆಯಿಂದ ಸದ್ಗತಿಯನ್ನು ಸಾಧಿಸಿಕೊಳ್ಳಲು ಅನುಕೂಲವಾಗುವಂತೆ ಸರ್ವಸುಲಭವಾದ ನಿತ್ಯವ್ಯವಹಾರದ ದೇಶಭಾಷೆಗಳಲ್ಲಿ ಸಕಲ ವೇದಶಾಸ್ತ್ರ ಪುರಾಣಾದಿಗಳಲ್ಲಿ ಉಕ್ತವಾದ ಮಹತ್ವದ ರಹಸ್ಯ ತತ್ವಗಳನ್ನೂ ವಿವರಿಸಿ ಪಾಡಿ ಲೋಕಸೇವೆ ಮಾಡಿರುವರು. ಸೃಷ್ಟಿ ಸ್ಥಿತಿಲಯಾದಿ ಕಾರ್ಯಗಳಲ್ಲಿ ಒಂದಾದ ಜಗತ್ಪಾಲನೆಯ ಮಹತ್ಕಾರ್ಯಕ್ಕೆ ಅಧಿಷ್ಠಾನ ದೇವತೆಯಾಗಿ, ಜಗದ ಅನಂತ ಜೀವರಾಶಿಗಳನ್ನು ಹಲವು ಬಗೆಯ ಕಷ್ಟತಾಪತ್ರಯಗಳಿಂದ ದೂರ ಮಾಡಿ ಕಾಪಾಡಲುಳ್ಳ ಶ್ರೀ ವಿಷ್ಣು ಮೂರ್ತಿಯು ಎಲ್ಲೋ ಕ್ಷೀರಾಬ್ಧಿ ಅನಂತಾಸನ, ಶ್ವೇತದ್ವೀಪಾದಿಗಳಲ್ಲಿ ಮಾತ್ರವಲ್ಲ - ತನ್ನನ್ನಾರಾಧಿಸುವ ಭಕ್ತರ ಹೃದಯ ಪ್ರದೇಶದಲ್ಲೇ ನೆಲೆಸಿ, ಸರ್ವದಾ ಸಮಸ್ತ ಪ್ರಾಪಂಚಿಕ ವಸ್ತುಗಳಿಗಿಂತಲೂ ಅತ್ಯಂತ ಸಮೀಪದಲ್ಲೇ ವಾಸಿಸಿ, ರಕ್ಷಿಸಲು ಸಿದ್ಧನಾಗಿದ್ದಾನೆಯೆಂಬ ಭಾವನೆಯನ್ನು ಭಜಕರ ಮನಸ್ಸಿಗೆ ತಂದಿತ್ತು ಕಾಪಾಡಿದ, ಆ ಮಹಾಮಹಿಮರ ಮಹದುಪಕಾರವನ್ನು, ಜನಾಂಗವು ಯಾವ ಬಗೆಯ ಪ್ರತ್ಯುಪಕಾರ ಮಾಡಿ ತೀರಿಸಲು ಸಾಧ್ಯವಿರುವುದು ? —

ಮಾನವನು ಜನ್ಮಸಾರ್ಥಕ್ಯಕ್ಕಾಗಿ ಅನುಸರಿಸುವ ಭಕ್ತಿ ಕರ್ಮಜ್ಞಾನ ಮಾರ್ಗಗಳಲ್ಲಿ ಭಕ್ತಿಪಂಥವು ಮಿಕ್ಕ ಎರಡು ಮಾರ್ಗಗಳಿಗಿಂತಲೂ ಸುಲಭವೂ ಸರ್ವರ ಅನುಸರಣೆಗೂ ಸಾಧ್ಯವೂ ಆಗಿರುವುದಕ್ಕೆ, ಅದರಲ್ಲಿ ಇತರ ಮಾರ್ಗಗಳಲ್ಲಿ ಇಲ್ಲದಿರುವ - ದುರ್ಬಲರಿಗೂ ಸಾಧ್ಯವೆನ್ನಿಸುವಂತಹ ಸರ್ವ ಸುಲಭವಾದ ಕೆಲವು ಸಾಧನಗಳೇ ಕಾರಣಗಳಾಗಿರುವುವು. ಈ ಭಕ್ತಿಪಂಥಕ್ಕೆ ಪುರಾಣ ಹರಿಕಥೆ ಭಜನೆ ಮುಂತಾದುವು ಸಹಕಾರಿಗಳಾಗಿ ಸಮುದಾಯ ಶಿಕ್ಷಣಕ್ಕೆ ಅನುಕೂಲ ಸಾಧನಗಳಾಗಿರುವುವು. ಈ ಹರಿಕಥಾ ಭಜನೆ ಮುಂತಾದುವುಗಳ ಒಂದು ಅಂಗವಾಗಿರುವ ಸಂಗೀತವಾದರೋ ಜನಮನದ ಆಕರ್ಷಣೆಗೆ ಅತ್ಯುತ್ತಮ ಉಪಕರಣವಾಗಿರುವುದು. – 'ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿ ಗಾನ ರಸಂ ಫಣೀ' ಎಂಬ ಲೋಕೋಕ್ತಿಯಂತೆ, ಅಜ್ಞಾನಿಗಳಾದ ಶಿಶು ಪಶುಗಳನ್ನೂ ಆಕರ್ಷಿಸಬಲ್ಲ ಗಾನಮಹಿಮೆಯು ಜ್ಞಾನಪ್ರಧಾನರಾದ ಮಾನವರ ಮನಸ್ಸನ್ನೂ ಆಕರ್ಷಿಸುವುದು ಏನಗಾಧವು! ಇಂತಹ ಅತ್ಯುತ್ತಮ ಉಪಕರಣವನ್ನು ಸಹಾಯಕವಾಗಿ ಕೈಕೊಂಡೇ ಉತ್ತರದೇಶದ ತುಲಸೀದಾಸ ಕಬೀರ ಮೀರಾಬಾಯಿ ಪ್ರಭೃತಿಗಳೂ, ಕರ್ಣಾಟಕದ ದಾಸವರ್ಯರೂ, ಮಹಾರಾಷ್ಟ್ರ ಆಂಧ್ರ ದ್ರವಿಡ ದೇಶಗಳ ಭಕ್ತ ಶಿರೋಮಣಿಗಳೂ ಭಗವದ್ಗುಣಮಾಲೆಯನ್ನು ಬಗೆಬಗೆಗಳಿಂದ ಕೀರ್ತಿಸಿ, ಮಾನವ ವರ್ಗದ ಪರಗತಿ ಸಾಧನಕ್ಕೆ ಮಾರ್ಗದರ್ಶಕರಾಗಿ ಬೆಳಗುತ್ತಿರುವರು.

ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿ ಜನ್ಮತಾಳಿ ತಮ್ಮ ಪರಮ ಸಾಧುಜೀವನ, ಋಷಿಸದೃಶವಾದ ವೈರಾಗ್ಯ, ಪ್ರಹ್ಲಾದ ನಾರದಾದಿಗಳನ್ನು ಜ್ಞಾಪಿಸುವಂತಹ ಅನನ್ಯಭಕ್ತಿಮಾರ್ಗಪ್ರವರ್ತನೆ, ಶ್ರೀರಾಮಚಂದ್ರನೇ ಸರ್ವಾಧಾರಕನು, ಸರ್ವೋತ್ತಮನು, ದೇವಾದಿದೇವನು ಎಂಬ ನಿಶ್ಚಯಜ್ಞಾನ, ಅಮಾನುಷ ಗಾಂಧರ್ವ ವಿದ್ಯಾಪ್ರೌಢಿಮೆ, ಮುಂತಾದುವುಗಳಿಂದ ಎಂಭತ್ತೆಂಟು ವರ್ಷಕಾಲ ನಮ್ಮ ಜನ್ಮಭೂಮಿಯನ್ನು ಬೆಳಗಿದ ನಮ್ಮ ಕಥಾನಾಯಕರ ದಿವ್ಯ ಜೀವಿತವೂ ಪಠನೀಯವಾದುದು, ಅನುಕರಣೀಯವಾದುದು. ಆದುದರಿಂದ ಪುಣ್ಯದಾಯಕವಾದ ಆ ಚರಿತ್ರೆಯನ್ನು ಕುರಿತು ಮುಂದರಿಸೋಣ!

ಈಗಿನ ಮದರಾಸು ಅಧಿಪತ್ಯಕ್ಕೆ ಸೇರಿದ ತಂಜಾವೂರು ಜಿಲ್ಲೆಯಲ್ಲಿ ನಾಗಪಟ್ಟಣದ ಪಶ್ಚಿಮಕ್ಕೆ ಹನ್ನೆರಡು ಮೈಲು ದೂರದಲ್ಲಿ *ತಿರುವಳ್ಳೂರು ಎಂಬೊಂದು ಊರುಂಟು. ಅಲ್ಲಿ ಕ್ರಿ. ಶ. ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿ ಗಿರಿರಾಜ ಬ್ರಹ್ಮಂ ಎಂಬ ಭಾರದ್ವಾಜಗೋತ್ರದ ತ್ರಿಲಿಂಗ್ಯ ಬ್ರಾಹ್ಮಣನೊಬ್ಬನು ವಾಸಮಾಡಿಕೊಂಡಿದ್ದನು. ಆತನು ಸಂಸ್ಕೃತ ಮತ್ತು ಆಂಧ್ರ ಭಾಷೆಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದ್ದುದಲ್ಲದೆ, ಸಂಗೀತ ವಿದ್ಯೆಯಲ್ಲೂ ಯಾರಿಗೂ ಕಡಮೆಯೆನ್ನಿಸದಷ್ಟು ಪ್ರೌಢಿಮೆಯನ್ನು ಗಳಿಸಿದ್ದನು. ಆತನ ವೇದಾಂತಪರ ಕೀರ್ತನೆಗಳು ಆಗ ತಂಜಾವೂರಿಗೆ ಪ್ರಭುವಾಗಿದ್ದ ಷಾಹಜಿ ಎಂಬ ಮಹಾರಾಷ್ಟ್ರರಾಜನ ಚಿತ್ತವನ್ನೂ ಆಕ

---

*ತಿರುವಳ್ಳೂರು ಎಂತಹ ಪುಣ್ಯಕ್ಷೇತ್ರವೆಂಬುದನ್ನು ಅಲ್ಲಿಯ ಸ್ಥಳ ಪುರಾಣದಿಂದ ತಿಳಿಯಬಹುದು. ಪೂರ್ವ ಯುಗದಲ್ಲಿ ನಡೆದ ವಿಚಾರವೆಂದು ವರ್ಣಿತವಾಗಿರುವ ಒಂದು ಸಂಗತಿಯು, ಆ ಸ್ಥಳ ಪುರಾಣದಲ್ಲಿ ಹೇಳಲ್ಪಟ್ಟಿದೆ. ಒಂದಾನೊಂದು ಕಾಲದಲ್ಲಿ ಇಂದ್ರನು ರಾಕ್ಷಸರ ಬಾಧೆಯನ್ನು ತಾಳಲಾರದೆ ಶ್ರೀ ವಿಷ್ಣುವಿನ ಬಳಿಗೆ ನಡೆದು ತನಗೆ ಸಹಾಯಮಾಡಬೇಕೆಂದು ಪ್ರಾರ್ಥಿಸಿದನು. ಆಗ ವಿಷ್ಣುವು 'ತ್ಯಾಗರಾಜ' ಎಂಬೊಂದು ಮೂರ್ತಿಯನ್ನು ಅವನಿಗೆ ಕೊಟ್ಟು, ಅದನ್ನು ಎಂದೂ ಬಿಟ್ಟಿರದೆ ಬಳಿಯಲ್ಲಿಟ್ಟುಕೊಂಡು ಶ್ರದ್ಧಾಭಕ್ತಿಗಳಿಂದ ಪೂಜಿಸುತ್ತಾ ಇದ್ದಲ್ಲಿ, ತನ್ನಲ್ಲಿದ್ದ ಸೈನ್ಯ ಸಹಾಯಗಳಿಂದಲೇ ರಾಕ್ಷಸರೊಂದಿಗೆ ಮಾಡುವ ಯುದ್ಧದಲ್ಲಿ ಜಯ ಸಂಪಾದನೆಯಾಗುವುದು ಎಂದು ಹೇಳಿಕಳುಹಿಸಿದನು ತರುವಾಯ ಬೇರೊಂದು ಸಮಯದಲ್ಲಿ ಇಂದ್ರನು, ಇತರ ಕೆಲವರು ದೈತ್ಯರನ್ನು ಅಡಗಿಸಲು ಮುಚುಕುಂದನೆಂಬ ಕ್ಷತ್ರಿಯೋತ್ತಮನ ಸಹಾಯವನ್ನು ಅಪೇಕ್ಷಿಸಿ, ತ್ಯಾಗರಾಜ ವಿಗ್ರಹದ ವಿಷಯದಲ್ಲಿ ವಿಷ್ಣುವು ತನಗೆ ಹೇಳಿದ್ದ ಸಂದೇಶವನ್ನು ಮರೆತು, ಅದನ್ನು ಆ ರಾಜನಿಗೆ ಕೊಟ್ಟುಬಿಟ್ಟನು. ದೈತ್ಯರಮೇಲೆ ದಂಡೆತ್ತಿದ ಮುಚುಕುಂದರಾಜನು ಅವರನ್ನು ಜಯಿಸಿ ರಾಜಧಾನಿಗೆ ಬಂದ ತರುವಾಯ, ಈ ತಿರುವಳ್ಳೂರಿನಲ್ಲೇ ಒಂದು ವಿಸ್ತಾರವಾದ ದೇವಾಲಯವನ್ನು ಕಟ್ಟಿಸಿ, ಅಲ್ಲಿ ಶ್ರೀ ತ್ಯಾಗರಾಜ ವಿಗ್ರಹವನ್ನು ಪ್ರತಿಷ್ಠಿಸಿದನು. ಆ ರಾಜನೇನೋ ಹಾಗೆ ಶ್ರೇಯಸ್ಸಂಪಾದನೆ ಮಾಡಿದನಾದರೂ, ಇಂದ್ರನು ಮಾತ್ರ ತನ್ನ ತಪ್ಪಿಗಾಗಿ, ತನ್ನ ಮಹೋನ್ನತಸ್ಥಾನದಿಂದ ಚ್ಯುತನಾಗಿ ಚಂಡಾಲನಾಗಿ ಜನಿಸಬೇಕಾಯಿತು. ಅದರ ಗುರುತಿಗಾಗಿ ತಿರುವಳ್ಳೂರು ದೇವಾಲಯದಲ್ಲಿ ಇಂದಿಗೂ ಸ್ವಾಮಿಯ ಸಮಸ್ತ ಉತ್ಸವಗಳಲ್ಲೂ ಒಬ್ಬ ಚಂಡಾಲನು ಇಂದ್ರನ ಗುರುತಾದ ಶ್ವೇತಚ್ಛತ್ರವನ್ನು ಹಿಡಿದು ಉತ್ಸವದ ಎದುರಿನಲ್ಲಿ ನಡೆಯಬೇಕಾದುದು, ಪಾರಂಪರ್ಯವಾಗಿ ಪದ್ಧತಿಯಾಗಿದೆ.

ರ್ಷಿಸಿದ್ದನು. ಗಿರಿರಾಜ ಬ್ರಹ್ಮನ ಸಂಗೀತ ಸಾಹಿತ್ಯ ವಿದ್ಯಾನೈಪುಣ್ಯಕ್ಕೆ ಮೆಚ್ಚಿ ತಲೆದೂಗಿದ್ದ ರಾಜನು, ಆ ಬ್ರಾಹ್ಮಣೋತ್ತಮನನ್ನು ಉಚಿತ ರೀತಿಯಿಂದ - ಉದಾರ ರೀತಿಯಿಂದಲೇ ಪ್ರೋತ್ಸಾಹಿಸಿ ಆತನ ಕುಟುಂಬಕ್ಕೆ ಪೋಷಕನಾಗಿದ್ದನು.

ರಾಜಾಶ್ರಯದಿಂದ ಉಪಜೀವಿತನಾಗಿ ಸಹವಾಸಿಗಳಿಗೆ ತನ್ನ ಗುಣ ನಡತೆಗಳಿಂದ ಮಾರ್ಗದರ್ಶಕನೂ, ವಿದ್ಯಾವೈದುಷ್ಯಾದಿಗಳಿಂದ ಸಹಾಯಕನೂ ಆಗಿದ್ದ ಆ ಬ್ರಾಹ್ಮಣನು, ಯುಕ್ತ ಕಾಲದಲ್ಲಿ ವಿವಾಹಿತನಾಗಿ, ಆಶ್ರಮಧರ್ಮವನ್ನು ರಕ್ಷಿಸುತ್ತ ಸಕಲರ ಭಕ್ತಿ ಗೌರವಗಳಿಗೂ ಪಾತ್ರನಾಗಿದ್ದನು. ಆ ದಂಪತಿಗಳ ಉದರದಲ್ಲಿ ಐದುಮಂದಿ ಮಕ್ಕಳಾದರು. ಅವರಲ್ಲಿ ನಾಲ್ವರ ವಿಚಾರವು ಎಲ್ಲೂ ಹೇಳಲ್ಪಟ್ಟಿಲ್ಲ. ಐದನೆಯ ಮಗನಿಗೆ ಆ ಬ್ರಾಹ್ಮಣನು ರಾಮಬ್ರಹ್ಮಂ ಎಂದು ಹೆಸರಿಟ್ಟು ವಿದ್ಯಾಬುದ್ಧಿಗಳನ್ನು ಕಲಿಸಿದನು. ರಾಮಬ್ರಹ್ಮನಾದರೂ ತಂದೆಯಷ್ಟು ಪಾಂಡಿತ್ಯವನ್ನು ಗಳಿಸದಿದ್ದರೂ, ಸಂಸ್ಕೃತಾಂಧ್ರಭಾಷೆಗಳಲ್ಲಿ ತಕ್ಕಷ್ಟು ಮಟ್ಟಿನ ವ್ಯುತ್ಪತ್ತಿಯನ್ನು ಪಡೆದು, ಸದ್ಗುಣ ಸನ್ನಡತೆಗಳಿಂದ ತಂದೆಗೆ ತಕ್ಕ ಮಗನು ಎಂಬ ಕೀರ್ತಿಗೆ ಪಾತ್ರನಾಗಿದ್ದನು. ಆತನಿಗೆ ಅನ್ವರ್ಥ ನಾಮಧೇಯಳೆನ್ನಿಸಿದ್ದ ಶಾಂತಾ ಎಂಬ ಕಾಂತಾಮಣಿಯು ಧರ್ಮಪತ್ನಿಯಾದಳು. ಆಕೆಯಲ್ಲಿ ರಾಮಬ್ರಹ್ಮನಿಗೆ ಪಂಚಾಪಕೇಶನ್, ರಾಮನಾಥನ್ ಎಂಬ ಇಬ್ಬರು ಮಕ್ಕಳು ಉದಯಿಸಿದರು. ಮುಂದೆ ಕೆಲವು ಕಾಲಾನಂತರ ಸಾಧ್ವೀಮಣಿಯಾದ ಆ ಬ್ರಾಹ್ಮಣ ಭಾರ್ಯೆಯು ಪುನಃ ಗರ್ಭಿಣಿಯಾಗಿ ಕ್ರಿ. ಶ. ೧೭೬೭ ನೆಯ ಸಂವತ್ಸರದ ಒಂದು ಶುಭ ದಿನದ ಶುಭ ನಕ್ಷತ್ರದಲ್ಲಿ ಪುರುಷ ಶಿಶುವನ್ನು ಪ್ರಸವಿಸಿದಳು. *ಆ ಶಿಶುವಿನ ಜನನ ಮುಹೂರ್ತದ ಶುಭಲಕ್ಷಣಗಳನ್ನೂ ಚಂದ್ರತಾರಾಯೋಗಗಳ ಉಚ್ಚದೆಸೆಯನ್ನೂ ಗಮನಿಸಿ

*ತ್ಯಾಗರಾಜ ಸ್ವಾಮಿಗಳು 'ಗಿರಿರಾಜ ಸುತಾತನಯ' ಎಂಬ ಕೀರ್ತನೆಯಲ್ಲಿ ತಮ್ಮ ವಂಶ ಪರಿಚಯವನ್ನು ಹೇಳಿಕೊಂಡಿದ್ದಾರೆಂದು ಭ್ರಮಿಸಿ (ಗಿರಿರಾಜ ಕವಿಯ ಮಗಳ ಮಗ ಎಂಬ ಭಾವನೆಯಿಂದ) ಅವರ ಪಿತಾಮಹನಾದ ಗಿರಿರಾಜ ಬ್ರಹ್ಮನು ಅವರ ಮಾತಾಮಹನೆಂದು ಹೇಳಿರುವುದುಂಟು. ಆದರೆ 'ಬ್ರಹ್ಮಂ' ಎಂಬುದು ವಂಶನಾಮವಾದುದರಿಂದ ಅದು ಪಿತ ಪುತ್ರ ಪ್ರಪುತ್ರರಿಗೆ ಬರುವುದಲ್ಲದೆ, ಪುತ್ರಿ ಪ್ರಪುತ್ರಿಯರಿಗೆ ಬರಲಾರದು. ಹೀಗೆ ಮೇಲೆ ಹೇಳಿದ ಕೀರ್ತನೆಯು, ಅವರ ವಂ

ರಾಮಬ್ರಹ್ಮನು ತನ್ನ *ಪುತ್ರನಿಗೆ ಆ ಕ್ಷೇತ್ರದ ಅಧಿನಾಯಕನಾದ 'ತ್ಯಾಗರಾಜ' ಎಂಬ ನಾಮಧೇಯವನ್ನೇ ಇಟ್ಟು, ಪ್ರೇಮದಿಂದ ಕಾಪಾಡು ತ್ತಿದ್ದನು.

ಗಿರಿರಾಜ ಕವಿಯ ಕಾಲದಲ್ಲಿ ಆತನಿಗೆ ನಡೆಯುತ್ತಿದ್ದ ರಾಜಮರ್ಯಾದೆಯೂ, ತನ್ಮೂಲಕ ದೊರೆಯುತ್ತಿದ್ದ ಉಪಜೀವನವೂ ಮಗನ ಕಾಲಕ್ಕೆ ತಪ್ಪಿದ್ದುವೆಂದು ತೋರುತ್ತದೆ. ರಾಮಬ್ರಹ್ಮನು ತನ್ನ ತಂದೆಯಿಂದ ಲಭ್ಯವಾಗಿದ್ದ ಸಂಗೀತ ಸಾಹಿತ್ಯಾದಿ ಕಲೆಗಳ ಸಹಾಯಗೊಂಡು, ಧರ್ಮ ಪ್ರಚಾರಣೆಯ ಪೂತಮಾರ್ಗವನ್ನು ಅವಲಂಬಿಸಿ, ತನ್ಮೂಲಕ ತನ್ನ ಕುಟುಂಬ ಯಾತ್ರೆಯನ್ನು ಸಾಗಿಸುತ್ತಿದ್ದನು. ಧರ್ಮಪ್ರಚಾರಕನ ಕಾರ್ಯವು ಲೌಕಿಕ ದೃಷ್ಟಿಯಿಂದ ಲಾಭದಾಯಕವಾದುದಲ್ಲವೆಂಬುದು ಸರ್ವವಿದಿತ ವಿಚಾರವಷ್ಟೆ! ಆದರೂ ದೃಢಭಕ್ತಿಯುಕ್ತನಾದ ಆ ಬ್ರಾಹ್ಮಣನು ತನ್ನ ಆ ವೃತ್ತಿಯಲ್ಲೇ ಪರಮಸಂತುಷ್ಟನಾಗಿದ್ದನು. ತನ್ನ ವೃತ್ತಿಯು ಸರ್ವ ಶ್ರೇಷ್ಠವಾದುದೆಂಬ ವಿಷಯದಲ್ಲಿ ಆತನಿಗೆ ಸ್ಥಿರನಂಬಿಕೆಯಿದ್ದಿತು. ಮಾನವರಿಗೆ ಸ್ವರ್ಗಸಾಮ್ರಾಜ್ಯದ ಮಾರ್ಗವನ್ನು ತೋರಿಸುವ ಉತ್ತಮ ಉಪಕರಣವಾಗಿ ದೇವರದೇವನು ತನ್ನನ್ನು ಕೈಕೊಂಡನಲ್ಲಾ ಎಂಬ ಭಾವನೆಯು ಆತನಿಗೆ ಅತಿಶಯ ತೃಪ್ತಿಶಾಂತತೆಗಳನ್ನುಂಟುಮಾಡಿದ್ದಿತು.

ಹೀಗೆ ದೇವರಿಗೂ ಮಾನವ ಸಾಮಾನ್ಯರಿಗೂ ಮಧ್ಯವರ್ತಿಗಳೋ ಎಂಬಂತೆ ನಿಲ್ಲುವ ಭಾಗವತರ ಭಾಗ್ಯವನ್ನು ಎಷ್ಟೆಂದು ವರ್ಣಿಸಬಹುದು! ಅವರು ದೇವದೇವನಾದ ಶ್ರೀನಾಥನ ಅನಂತ ಮಹಿಮೆಗಳನ್ನು ತಮ್ಮ ಜ್ಞಾನ ನೇತ್ರಗಳಿಂದ ದರ್ಶಿಸಿ, ಭಕ್ತಾಭೀಷ್ಟ ವರಪ್ರದನಾದ ಆ ಮಹಾ ಮಹಿಮನ ಕಲ್ಯಾಣ ಗುಣಮಾಲೆಯನ್ನು ತಮ್ಮ ಅಮೃತಮಯವಾಣಿಗಳಿಂದ ಕೀರ್ತಿಸಿ ಜನಮನವನ್ನು ಭಗವತ್ಪರವನ್ನಾಗಿಸುವರು. ಲೋಕದಲ್ಲಿ ಧರ್ಮ

---

ಶಪರಿಚಯಕ್ಕಾಗಿ ಹೇಳಿದುದೆಂಬುದೂ, ಗಿರಿರಾಜ ಬ್ರಹ್ಮನು ಅವರ ಮಾತಾಮಹನೆಂಬುದೂ ನಿರಾಧಾರ ಸಂಗತಿಗಳಾಗಿವೆ.

*ಆಂಗ್ಲೇಯ ಗ್ರಂಥದಲ್ಲಿ ರಾಮ ಬ್ರಹ್ಮನಿಗೆ ಇಬ್ಬರೇ ಮಕ್ಕಳೆಂದು ಹೇಳಿದೆ, ಆದರೆ 'ತ್ಯಾಗರಾಜ ಹೃದಯಮು' ಎಂಬ ಆಂಧ್ರ ಗ್ರಂಥವೂ, ತಮಿಳುಗ್ರಂಥವೂ ಆತನಿಗೆ ಮೂರು ಮಕ್ಕಳೆಂದು ಹೇಳುತ್ತಿವೆ.

ಸಂಸ್ಥಾಪನೆಯ ಮಹತ್ಕಾರ್ಯವು ನ್ಯಾಯವಾದಿಗಳಿಂದಲೂ ನ್ಯಾಯಾಧೀಶರಿಂದಲೂ ನಡೆಯುತ್ತಿರುವುದು;— ನಡೆಯಲಿರುವುದು ಎಂದು ಯಾರಾದರೂ ತಿಳಿದುಕೊಂಡಿದ್ದರೆ ಅದು ಒಂದು ಭ್ರಮೆಯಲ್ಲದೆ ಬೇರಲ್ಲ. ಹೀಗೆ ಹೇಳುವುದರಿಂದ ನ್ಯಾಯವಾದಿಗಳೂ ನ್ಯಾಯಾಧೀಶರೂ ಪ್ರಪಂಚ ಕಾರ್ಯಕ್ಕೆ ಶುದ್ಧ ಅಪ್ರಯೋಜಕರೆಂದು ನಾವು ಹೇಳಿದೆವೆಂದು ಭಾವಿಸಬಾರದು. ಲೋಕದಲ್ಲಿ ಧರ್ಮಸಂಸ್ಥಾಪನೆಯ ಮಹತ್ಕಾರ್ಯವು, ಸಾಧುಸಂತರು ಭಕ್ತಭಾಗವತರು ನಿಸ್ವಾರ್ಥಿಗಳಾದ ಧರ್ಮಪ್ರಚಾರಕರು ಮುಂತಾದವರಿಂದ ನಡೆವುದರ ಶತಾಂಶದಲ್ಲಿ ಒಂದಂಶದಷ್ಟಾದರೂ ಮೇಲ್ಕಂಡ ನ್ಯಾಯಾಧೀಶರಿಂದಲೂ ನ್ಯಾಯವಾದಿಗಳಿಂದಲೂ ನಡೆಯಲಾರದು. ಆದರೆ ಅವರಿಂದಲೂ ಆಗತಕ್ಕ ಕೆಲಸವೊಂದುಂಟು. ಪ್ರಪಂಚದ ಅದ್ಯಂತ ಮಾನವ ಸಮುದಾಯವನ್ನೇ ಮುಕ್ತಿ ಮಾರ್ಗದ ಕಡೆಗೆ ನಡೆವ ಒಂದು ಅಗಾಧ ಸೈನ್ಯ ಸಮೂಹವೆಂದು ಭಾವಿಸುವುದಾದರೆ, ಅಂತಹ ಆ ಸೈನ್ಯ ಸಮೂಹದ ಮುಂಭಾಗದಲ್ಲಿ ನಿಂತು ಸುರಕ್ಷಿತವಾಗಿ ನಡೆಯಿಸಿಕೊಂಡು ಹೋಗಲು ಭಕ್ತಭಾಗವತರು ಶಕ್ತರಾಗಬಲ್ಲರಲ್ಲದೆ, ನ್ಯಾಯಾಧೀಶರೂ ನ್ಯಾಯವಾದಿಗಳೂ ಆಗಲಾರರು. ಈ ಇಬ್ಬರ ಉದ್ದೇಶವೂ ಧ್ಯೇಯವೂ ಜನಗಳನ್ನು ನೀತಿಮಾರ್ಗದಲ್ಲಿ ನಡೆಯಿಸಬೇಕು ಎಂಬುದೇ ಆದರೂ ನ್ಯಾಯಾಧೀಶರು ಅಂತಹ ಸೈನ್ಯ ಸಮೂಹದ ಹಿಂದಿನ ವರ್ಗಗಳಲ್ಲಿ ನಿಂತು ಮಾರ್ಗ ತಪ್ಪಿ ಹೋದ ಹಲಕೆಲವರನ್ನು ಶಿಕ್ಷಿಸಬಹುದು ಅಷ್ಟೆ! ಆದರೆ ಶಿಕ್ಷೆಯಿಂದ ಬಲವಂತಕ್ಕೊಳಪಟ್ಟು ಒಬ್ಬನು ಸನ್ಮಾರ್ಗಕ್ಕೆ ಬರುವುದಕ್ಕಿಂತಲೂ, ನಯಮಾರ್ಗದಿಂದ ತಾನೇ ಮನಃಪೂರ್ವಕವಾಗಿ ಒಪ್ಪಿ ಮಾರ್ಗಕ್ಕೆ ಬರುವುದು ಸುಲಭವೆಂದು ಪ್ರಪಂಚಾನುಭವದಲ್ಲಿ ಕಂಡುಬರುತ್ತಿದೆ. ನರಹಂತಕನಾದ ಒಬ್ಬನನ್ನು ಹಿಡಿದು, ರಾಜ್ಯಾಂಗದವರು ಮರಣ ದಂಡನೆಯನ್ನು ವಿಧಿಸಿ ಗಲ್ಲಿಗೇರಿಸಿ ಹೀಗೆ ಭಯಂಕರ ರೀತಿಯಿಂದ ಶಿಕ್ಷಿಸಬಹುದು. ಆದರೆ ಅದರಿಂದ 'ಖೂನಿ'ಗಳು ಕಡಮೆಯಾಗಬಲ್ಲುವೆ? ಮರಣದಂಡನೆಯ ಶಿಕ್ಷೆಯು ಭಯಂಕರವಾದುದೇ! ಆದರೆ ಪ್ರಾಣಭಯವನ್ನು ಇಟ್ಟುಕೊಂಡಿರುವವನಿಗಲ್ಲವೆ ಮರಣದಂಡನೆಯ ಶಿಕ್ಷಾಭಯ? ನರಹತ್ಯ, ಕಳ್ಳತನ, ದರೋಡೆ ಮುಂತಾದ ದುರಂತ ಕೃತ್ಯಗಳಲ್ಲಿ ನಿರತರಾಗಿರುವವರ ಹೃದಯ

ಗಳು ಸಕಲ ವಿಧವಾದ ದಯಾ ಭಾವಗಳನ್ನೂ ನೀಗಿಕೊಂಡು ಪಾಷಾಣ ಮಯವಾಗಿರುವುವು. ಪ್ರೇಮ ಜಲವು ಅಲ್ಲಿ ನಿಶ್ಶೇಷವಾಗಿ ಬತ್ತಿಹೋಗಿರುವುದು. ಅವುಗಳಮೇಲೆ ಶಿಕ್ಷೆಯ ಭಯವು ಏನು ಪರಿಣಾಮವನ್ನೂ ಉಂಟು ಮಾಡಲಾರದು. ಆದರೆ ಆ ಸ್ಥಳದಲ್ಲಿ ಒಬ್ಬ ಯೋಗ್ಯ ಧರ್ಮೋಪದೇಶಕನು ನಿಂತು ತನ್ನ ಮೃದುಮಧುರವಾಣಿಯಿಂದ - ಪ್ರೇಮಮಯ ವಾಕ್ಯಗಳಿಂದ ಮಾನವ ನಯನೀತಿಗಳನ್ನೂ ಭಗವತ್ತತ್ವ - ಭಗವನ್ಮಹಿಮೆಗಳನ್ನೂ ವಿವರಿಸುವ ಅಮೃತಮಯ ಬೋಧನೆಯ ವರ್ಷವನ್ನು ಸುರಿಸಲಿ! ಆಗ ಆ ನರಹಂತಕನ-ಕಳ್ಳನ - ದರೋಡೆಗಾರನ ಹೃದಯವು ಕರಗಿ ತನ್ನ ದುರಿತ ಕಾರ್ಯಗಳಿಗಾಗಿ ಅವನು ಮರುಗುವಂತೆ ಮಾಡಲಾರದೇ ಎಂದು ನೋಡೋಣ! ಆ ಹೃದಯವು ಹಾಗೆ ಒಂದು ಬಾರಿ ಕರಗಿ ಮರುಗಿತೆಂದರೆ ಸಾಕು. ಮುಂದೆ ಆ ಹಂತಕನು ತನ್ನ ಜನ್ಮದಲ್ಲೇ ಅಂತಹ ದುರಿತ ಕರ್ಮಕ್ಕೆ ಕೈಯಿಕ್ಕನು. ಅವನ ಜೀವನ ಪಥವೇ ಬದಲಾಗಿ ಹೋಗುವುದು. ಮುಂದೆ ಅವನು ಪಾಪಸಾಧಕವಾದ ಆ ಮಾರ್ಗದಿಂದ ನಿವೃತ್ತನಾಗಿ, ತನ್ನಂತೆಯೇ ಹಲವರನ್ನು ತಿದ್ದುವುದರಲ್ಲಿ ನಿರತನಾಗಿ ಸನ್ಮಾರ್ಗವನ್ನವಲಂಬಿಸುವುದು ತಪ್ಪದು. ಆದರೆ ಅಂತಹ ಕಾರ್ಯಕ್ಕೆ ಭಗವತ್ಪರ ಚಿತ್ತವೃತ್ತಿಯಿಂದ - ನಿಸ್ವಾರ್ಥ ಮನೋಭಾವದಿಂದ ಲೋಕಸೇವೆಯಲ್ಲಿ ಮಗ್ನರಾದ ಭಾಗವತರು ಬೇಕು. ಬೇಕೆಂಬುದು ನಿಜ. ದೈವಿಕವಾಗಿ ಲೋಕೋದ್ಧಾರಕ ಮಹಾತ್ಕಾರ್ಯಕ್ಕೆಂದೇ ಅವತರಿಸುವ ಅಂತಹ ಮಹಾನುಭಾವರು ಬೇಕೆಂದಾಗ ಲೋಕಕ್ಕೆ ಬಾರರು. ಆದುದರಿಂದ ಅವರ ಬದಲಿಗೆ, ಸಾಮಾನ್ಯ ಧರ್ಮಪ್ರಚಾರಕರಿದ್ದರೂ ಎಷ್ಟೋ ಕೆಲಸ ನಡೆದೀತು. ಪುಷ್ಟವೇತನದ ಹಲವು ಮಂದಿ ನ್ಯಾಯಾಧೀಶರ ಮತ್ತು ಸರ್ವಥಾ ಅಸಂತುಷ್ಟರಾದ ನ್ಯಾಯವಾದಿಗಳ ಅಸಂಖ್ಯ ಸಂಖ್ಯೆಗಿಂತಲೂ, ಅಲ್ಪ ಸಂತುಷ್ಟರಾದ ಇಂತಹ ನೂರಾರು ಮಂದಿ ಧರ್ಮಪ್ರಚಾರಕರಿದ್ದರೆ ಅವರಿಂದ ಲೋಕದಲ್ಲಿ ಎಷ್ಟೋಮಟ್ಟಿನ ಶಾಂತಿ ಸುಖ ಸಮಾಧಾನಗಳು ನೆಲೆಗೊಳ್ಳುವುವು! ನಿಜ, ಆದರೆ ಈ ವಿಚಾರವು ಆಡಂಬರಪ್ರಿಯ ರಾಜ್ಯಾಂಗದ ದಿವ್ಯದೃಷ್ಟಿಗೆ ಗೋಚರಿಸುವ ಮಾರ್ಗವೇನು ?

ರಾಮಬ್ರಹ್ಮನ ಮಕ್ಕಳಲ್ಲಿ ಹಿರಿಯನಾದ ಪಂಚಾಪಕೇಶನು ಅಲ್ಪ

ಸ್ವಲ್ಪ ವಿದ್ಯಾಭ್ಯಾಸಮಾಡಿ, ಬಡತನದ ಗೃಹಕೃತ್ಯ ನಿರ್ವಹಣಕ್ಕೆ ಅನುಕೂಲವಾಗುವಂತೆ ಸಂಪಾದನೆಯಲ್ಲಿ ತೊಡಗಿದನು. ಎರಡನೆಯವನಾದ ರಾಮನಾಥನು ಚಿಕ್ಕಂದಿನಿಂದಲೂ ಇತರ ಬಾಲಕರಂತೆ ಬುದ್ಧಿ ಕುಶಲತೆಯಾಗಲೀ ಚಟುವಟಿಕೆ ಕಾರ್ಯೋತ್ಸಾಹಗಳಾಗಲೀ ಇಲ್ಲದೆ ಕೇವಲ ಮಂಕುಬಡಿದಂತೆ ಎಲ್ಲಿ ನಿಂತರಲ್ಲೇ ಎಲ್ಲಿ ಕುಳಿತರಲ್ಲೇ ಹೀಗೆ ಇರುತ್ತ ತಾಯಿತಂದೆಗಳಿಗೆ ಬಹು ಸಂತಾಪಕಾರಿಯಾದನು. ಮಠದಲ್ಲಿ ನಡೆದ ವಿದ್ಯಾಭ್ಯಾಸವೂ ಅವನನ್ನು ಯಾವುದೊಂದು ಬಗೆಯಿಂದಲೂ ಮಾರ್ಗಕ್ಕೆ ತರಲು ಶಕ್ತವಾಗದಿರಲು, ಅದು ಕೇವಲ ಪ್ರಾರಬ್ಧ ಕರ್ಮದ ದೋಷವೆಂದೂ ಅನುಭವಿಸದೆ ಕ್ಷಯಿಸಲಾರದೆಂದೂ ತಿಳಿದು ತಂದೆಯು ಒಂದು ನಿಟ್ಟುಸಿರುಬಿಟ್ಟು ಆ ವಿಷಯದಲ್ಲಿ ನಿಶ್ಚಿಂತನಾಗಿಬಿಟ್ಟನು. ಇಬ್ಬರು ಮಕ್ಕಳ ಅಭಿವೃದ್ಧಿ ಸ್ಥಿತಿಯೂ ಇಷ್ಟುಮಟ್ಟಿಗಾಗಲು ಮೂರನೆಯವನಾದ ತ್ಯಾಗರಾಜನಿಗಾದರೂ ಪ್ರೌಢ ವಿದ್ಯಾಭ್ಯಾಸ ಮಾಡಿಸಿ ಹಿರಿಯರ ಕೀರ್ತಿಯನ್ನು ಕಾಪಾಡಬೇಕೆಂದು ಯೋಚಿಸಿದ ರಾಮಬ್ರಹ್ಮನು, ಐದು ವಯಸ್ಸಿನ ಆ ತನ್ನ ಮಗನನ್ನು ಆ ಊರಿನಲ್ಲಿದ್ದ ಒಂದು ಕೂಲಿ ಮಠಕ್ಕೆ ಸೇರಿಸಿದನು. ಅದರ ಮುಖ್ಯಾಧಿಕಾರಿಯೆಂದರೆ, ಅಲ್ಲಿ ಬಾಲಕರಿಗಿಂತಲೂ ಸ್ವಲ್ಪ ಎತ್ತರವಾದ ಆಸನದಮೇಲೆ ಕೈಯಲ್ಲೊಂದು ಬೆತ್ತವನ್ನು ಹಿಡಿದು ಹಲ್ಲುಗಳನ್ನು ಕಟಿಯುತ್ತ ಕುಳಿತಿರುತ್ತಿದ್ದ ಉಪಾಧ್ಯ ಮಹಾಶಯನೇ! ಆತನಿಗಿದ್ದ ಕ್ರೋಧಲೋಭಗಳಿಗೆ ಮೇರೆಯಿರಲಿಲ್ಲ. ಸರದಿಯ ಮೇರಗೆ ಬರಬೇಕಾದ ಆ ದಿನದ ನಶ್ಯದ ದಕ್ಷಿಣೆಯು ತಲುಪದಿದ್ದರೆ ಕಾಲರುದ್ರನಂತೆ ಕಣ್ಣು ಕೆಂಪಗೆ ಮಾಡಿಕೊಂಡು, ಆ ಚಿಕ್ಕ ಬಾಲಕರನ್ನು ಅತ್ಯಲ್ಪ ಕಾರಣಗಳಿಗೂ ಸಹ ಕೇವಲ ಪಶುಗಳೋ ಎಂಬಂತೆ ಬೆತ್ತದಿಂದ ತಾಡಿಸುತ್ತ ಅವಾಚ್ಯ ಮಾತುಗಳಿಂದ ಬೈಯುತ್ತ ಹೀಗೆ ಆತನು ಮಹಾ ಉಪದ್ರವಕಾರಿಯಾಗಿದ್ದನು. ಎಲ್ಲಿಗಾದರೂ ದಕ್ಷಿಣೆ ದಾನಾದಿಗಳನ್ನು ಪಡೆವುದಕ್ಕಾಗಿ ಆತನು ಹೊರಡಬೇಕಾದ ಸಂದರ್ಭ ಬಿದ್ದದಿನ, ಶಾಲೆಗೆ ದಿಕ್ಕೇ ಇಲ್ಲದಂತಾಗಿ ಹುಡುಗರು ಮನಬಂದಂತೆ ಚಿಮ್ಮಿ ಹಾರಿ ಕೂಗುತ್ತ ಬಡಿದಾಡಿಕೊಳ್ಳುತ್ತ- 'ಗುರುವಿಲ್ಲದ ಮಠ' ಎಂಬ ಉಕ್ತಿಯ ಅರ್ಥವನ್ನು ಸ್ಪಷ್ಟಗೊಳಿಸುತ್ತಿದ್ದರು. ಉಪಾಧ್ಯಾಯನ ಎದುರಿಗೆ ನಯಭಯಗಳಿಂದ ನಡೆದುಕೊಂಡರೂ ಸಹ

ಯಾವುದಾದರೊಂದು ಕಾರಣದಿಂದ ಬಾಲಕರಿಗೆ ವೇತ್ರಸೇವೆ (ಬೆತ್ತದ ಪೆಟ್ಟು) ಯು ತಪ್ಪುತ್ತಿರಲಿಲ್ಲ. ಎಂತೂ ಯಾವುದಾದರೊಂದು ಕಾರಣ ದಿಂದ ಹುಬ್ಬನ್ನು ಗಂಟುಹಾಕಿಕೊಂಡು ಯಾವನಾದರೊಬ್ಬ ಬಾಲಕನ ಮೇಲೆ ಕೋಪಿಸಿಕೊಂಡು, ಹೀಗೆ ಸರ್ವದಾ ರೋಷಭೀಷಣನಾಗಿಯೇ ಇರುತ್ತಿದ್ದ ಆ ಉಪಾಧ್ಯಾಯನ ಪಾಠಶಾಲೆಗೆ ಹೋಗಬೇಕೆಂದರೆ, ವಧ್ಯ ಸ್ಥಾನಕ್ಕೆ ಒಯ್ಯಲ್ಪಡುತ್ತಿರುವ ತಪ್ಪಿತಸ್ಥನೋ ಎಂಬಂತೆ ಚಿಕ್ಕ ತ್ಯಾಗ ರಾಜನು ಗಡಗಡನೆ ನಡುಗುತ್ತಿದ್ದನು. ಪಾಠ ಪಾಡದ ಅವಿಧೇಯರನ್ನು ಶಿಕ್ಷಿಸಬೇಕಾದುದು ಸಹಜವೆಂದುಕೊಂಡರೂ, ಅಂತಹ ಶಿಕ್ಷೆಗೂ ಒಂದು ಪ್ರಮಾಣವಾಗಲೀ ತಾರತಮ್ಯ ವಿಚಾರವಾಗಲೀ ಇಲ್ಲವೆ? ಆತನ ಇಷ್ಟ ಯಂತೆ ದುಡ್ಡನ್ನಾಗಲೀ ಪದಾರ್ಥಗಳನ್ನಾಗಲೀ ತಂದು ಒದಗಿಸದ ಬಾಲ ಕರು ಅಲ್ಪ ಸ್ವಲ್ಪ ತಪ್ಪುಗಳಿಗೂ ಕೋದಂಡಕ್ಕೇರಿಸಲ್ಪಡುವರು. ಹುರಿ ಯಿಂದ ಮೇಲಿನ ತೊಲೆಗೆ ಕಟ್ಟಲ್ಪಟ್ಟ ಬಾಲಕನು ಆ ಬಾಧೆಯನ್ನು ಸಹಿಸ ಲಾರದೆ ಮೈಕೈಗಳನ್ನಾಡಿಸಿ ಕಟ್ಟನ್ನು ಸಡಲಿಸಿಕೊಳ್ಳುವನೆಂಬಂತೆ ತೋರಿ ದರೆ ಒಡನೆ ಕೆಳಗೆ ಚೂಪಾದ ಮೊಳೆಗಳು ನೇರವಾಗಿ ಇರಿಸಲ್ಪಟ್ಟು ಆ ದುರ್ದೈವಿ ಬಾಲಕನಿಗೆ ಚಿತ್ರಹಿಂಸೆಯನ್ನುಂಟುಮಾಡಲು ಸಿದ್ಧವಾಗಿರು ತ್ತಿದ್ದುವು. ಐದು ವಯಸ್ಸಿನ ತ್ಯಾಗರಾಜನ ನಿರ್ಮಲವಾದ ತಿಳಿಮನಸ್ಸಿನ ಮೇಲೆ ಈ ಬಗೆಯ ದೃಶ್ಯವು ಎಂತಹ ಪರಿಣಾಮವನ್ನು ಉಂಟುಮಾಡಿರ ಬಹುದೆಂಬುದನ್ನು ಹೇಳಬೇಕಾದುದೇನು! ಮಠದಲ್ಲಿ ಇದ್ದಷ್ಟು ಹೊತ್ತೂ ಭಯದಿಂದ ಗಡಗಡನೆ ನಡುಗುತ್ತಲೇ ಕುಳಿತಿದ್ದು ಎಂದಾದರೊಂದುದಿನ ತನ್ನ ಕಡೆಗೆ ತಿರುಗಿ ಮಾತನಾಡಿಸಿದ ಉಪಾಧ್ಯಾಯನಿಗೆ ಮರಣ ಭೀತಿಯಿಂದ ಪ್ರತ್ಯುತ್ತರವೀಯುತ್ತ, ಸಾಯಂಕಾಲವಾಗುವುದನ್ನೇ ಎದುರುನೋಡಿ ಕೊಂಡಿದ್ದು, ಮಠವನ್ನು ಬಿಟ್ಟೊಡನೆಯೇ ಸೆರೆಮನೆಯಿಂದ ಬಿಡುಗಡೆ ಯನ್ನು ಹೊಂದಿದ ಕೈದಿಯಂತೆ, ಒಂದು ದೀರ್ಘನಿಶ್ವಾಸಬಿಟ್ಟು ಮನೆಯ ಕಡೆಗೆ ಓಡುತ್ತಿದ್ದನು.

ಈ ವರ್ಣನೆಯು ಕೇವಲ ಅತಿಶಯೋಕ್ತಿಯೆಂದು ವಾಚಕರು ಭಾವಿ ಸುವರೋ ಎಂಬ ಶಂಕೆಯು ಇದನ್ನು ಬರೆಯುತ್ತಿರುವಾಗ ನಮ್ಮ ಮನ ಸ್ಸನ್ನು ಬಾಧಿಸದಿರಲಿಲ್ಲ. ಚಿಕ್ಕ ಬಾಲಕರ ಚಿತ್ತವೃತ್ತಿಯನ್ನನುಸರಿಸಿ ಹೇಗೆ

ವಿದ್ಯಾಭ್ಯಾಸ ಮಾಡಿಸಬೇಕು. ಅವರ ಭಾವನೆ ಅಂತಃಕರಣಗಳು ಹೇಗಿರುವುವು. ನಿಷ್ಠುರ ವಾಕ್ಯಗಳೂ ದುಷ್ಟ ಕಾರ್ಯಗಳೂ ದುಶ್ಚರ್ಯೆಗಳೂ ಅವರ ತಿಳಿವಾದ ಮನಸ್ಸಿನ ಮೇಲೆ ಎಂತಹ ಪರಿಣಾಮವನ್ನು ಉಂಟುಮಾಡುವುವು, ಇದರಿಂದ ಅವರ ಆದ್ಯಂತ ಜೀವಿತವೇ ಹೇಗೆ ವ್ಯತ್ಯಸ್ತವಾಗುವುದು, ಎಂಬ ಮುಂತಾದ ಮಾನಸ ಶಾಸ್ತ್ರದ ಅತಿ ಮುಖ್ಯ ವಿಚಾರಗಳ ಪರಿಚಯಲೇಶವೂ ಇಲ್ಲದೆ, ಪವಿತ್ರವಾದ ಬೋಧಕ ಕಾರ್ಯವನ್ನು ವ್ಯಾಪಾರ ವೃತ್ತಿಯೋ ಎಂಬ ಭಾವನೆಯಿಂದ ಕಂಡು ಮೇಲ್ಕಂಡಂತಹ ಕೂಲಿ ಮತಗಳನ್ನಿಟ್ಟುಕೊಂಡು ಕಾಲಕ್ಷೇಪಮಾಡುತ್ತಿದ್ದ ಕೆಲವುಂದಿ ಸ್ವಾರ್ಥಿಗಳು ಎಂತಹ ವಿಚಿತ್ರ ಸ್ವಭಾವದ ಮಾನುಷ ವ್ಯಕ್ತಿಗಳಾಗಿರುತ್ತಿದ್ದರು ಎಂಬ ಸಂಗತಿಯು ಇನ್ನೂ ಹಲವರು ಕೆಲವರ ಸ್ವಂತ ಅನುಭವದಲ್ಲಿದ್ದೀತು. ಇಂತಹ ಬೋಧಕರ ಕೈಕೆಳಗಿದ್ದು ಬೆಳೆದು, ಏಟಿನ ಭಯದಿಂದ ಓಡುವ ಕುದುರೆಯಂತೆ, ಗಿಳಿಪಾಠದಂತೆ ಗ್ರಂಥಪಠನೆಮಾಡಿ ವಿದ್ಯಾವಂತರಾದ ಕೆಲವರು ಇರುವುದಾದರೂ ಸುಳ್ಳಲ್ಲ. ಅವರು ವಿದ್ಯೆ ಕಲಿತವರು ನಿಜ. ಹಲವು ನೂರು ಶ್ಲೋಕಗಳು ಅವರಿಗೆ ಬಾಯಿಪಾಠವಾಗಿರುವುದು ನಿಶ್ಚಯ. ಆದರೆ ಅವರಲ್ಲಿ ಸ್ವಾರ್ಥತೆ, ಪರರ ಉತ್ಕರ್ಷತೆಯನ್ನು ಕಂಡು ಸಹಿಸದ ಅಸೂಯೆ, ಮುಂಗೋಪ, ಮತ್ತೊಬ್ಬರಲ್ಲಿರುವ ಗುಣವನ್ನು ಗ್ರಹಿಸಲರಿಯದ ದೋಷೈಕದೃಷ್ಟಿ, ಕ್ಷುದ್ರಭಾವ, ಛಿದ್ರಾನ್ವೇಷಣೆ, ರಸಿಕತೆ ಎಂಬ ಹೆಸರಿನಿಂದ ತುಂಬಿದ ವಿಷಯಲೋಲುಪತೆ, ನೀಚವಾಕ್ಯ ಮುಂತಾದ ಹಲವು ದುರ್ಗುಣಗಳೂ - ಹಾಗೆ ಕಲಿತ ಆ ಪ್ರೌಢ ವಿದ್ಯೆಯೊಂದಿಗೇ ಪಾತವಾಗುವುದಾದರೂ ತಪ್ಪದು. ನಿಜವಾದ ವಿದ್ಯಾಭ್ಯಾಸವೆಂದರೆ, ಸಹವಾಸಿಗಳೊಂದಿಗೆ ಮನುಷ್ಯನಾಗಿ ಕಲೆತುನುಲೆತು ಸ್ನೇಹಪ್ರೇಮಗಳಿಂದ ಹೊಂದಿಕೊಂಡು, ಅವರ ಕಷ್ಟಸುಖಗಳನ್ನು ಕುರಿತು ಎದೆಕರಗಿ ಸಹಾಯಕನಾಗುವಂತಹ ಬುದ್ಧಿಯ ಬೆಳೆವಣಿಗೆಯಲ್ಲದೆ, ಪುಸ್ತಕದಲ್ಲಿರುವ ವಿಷಯ ಸಹಸ್ರಗಳನ್ನು ತಲೆಯಲ್ಲಿ ತುಂಬಿಕೊಳ್ಳುವುದು ಮಾತ್ರವಲ್ಲವಷ್ಟೆ ! ಸ್ವಾರ್ಥ ಸಾಧನ ತತ್ಪರತೆ, ಶಾಠ್ಯ ಕ್ರೀಮದ್ದಾಂಭೀರ್ಯಗಳಿಂದ ಪರರೊಂದಿಗೆ ಮಾತನಾಡುವುದೇ ತಮ್ಮ ಸ್ಥಿತಿಗೆ ಅಗೌರವವೆಂದು ಭಾವಿಸುವಂತಹ ಲಕ್ಷಾಂತರ ಮಂದಿ ವಿದ್ವಾಂಸರಿದ್ದರೂ ಅದರಿಂದ ದೇಶಕ್ಕೆ ಏನು ಪ್ರಯೋಜನವುಂಟು

ದೀತು! ಆದರೆ, ಪೂರ್ವ ಪದ್ಧತಿಯಂತೆ ವಿದ್ಯಾಭ್ಯಾಸ ಮಾಡಿದವರೆಲ್ಲರೂ ಹೀಗೆಯೇ ಅಸೂಯಾಪರರೂ, ನಿಷ್ಠುರಿಗಳೂ, ಸ್ವಾರ್ಥಿಗಳೂ ಆಗಿರುವ ರೆಂಬರ್ಥವು ಇದರಿಂದ ತೋರಬಹುದಾದರೆ ಅದಕ್ಕಾಗಿ ಅನಂತ ಕ್ಷಮಾಪಣೆ ಗಳನ್ನು ಕೇಳಿಕೊಳ್ಳುತ್ತೇವೆ. ಹಾಗೆ ನಮ್ಮ ಭಾವನೆಯಿದ್ದರೆ ಮಹಾಪ ರಾಧಿಗಳಾಗುವೆವೆಂದು ಬಲ್ಲೆವು! ಅವರಲ್ಲಿ ಎಷ್ಟೋ ಮಂದಿ ಪಂಡಿತೋ ತ್ತಮರು ಸಕಲ ಸದ್ಗುಣನಿಧಿಗಳಾಗಿ ತಮ್ಮ ಸನ್ನಡತೆಗಳಿಂದ ಹಲವು ಮಹ ತ್ಕಾರ್ಯಗಳನ್ನು ಸಾಧಿಸಿದವರಿರುವರು. ಅಂತಹ ಸತ್ಪುರುಷರನ್ನು ಸಿದ್ಧ ಗೊಳಿಸಿದ ಮಹಾಮಹಿಮರಾದ ಬೋಧಕವರ್ಗಕ್ಕೆ ಶಿರಸಾ ನಮಸ್ಕರಿಸು ತ್ತೇವೆ. ಆದರೆ, ತೋಟದಲ್ಲಿ ಉತ್ತಮವಾದ ಪೈರಿನೊಂದಿಗೇ ಬೆಳೆಯು ತ್ತಿರುವ - ಪೈರಿನ ಅಭಿವೃದ್ಧಿಗೆ ವಿಘ್ನಕಾರಿಯಾದ ಕಳೆಯನ್ನು, ನಿರ್ದಾಕ್ಷಿಣ್ಯ ದಿಂದಲೂ ನಿಷ್ಕಾರುಣ್ಯದಿಂದಲೂ ಕಿತ್ತು ಬಿಸಾಡತಕ್ಕುದು ಪೈರಿನ ಅಭಿವೃದ್ಧಿ ಯನ್ನು ಕೋರುವ ಪ್ರತಿಯೊಬ್ಬನ ಕರ್ತವ್ಯವೇ ಅಲ್ಲವೆ?—

ಮುಂದೆ ಕೆಲವು ದಿನಗಳೊಳಗಾಗಿಯೇ ಕಾರಣಾಂತರದಿಂದ ರಾಮ ಬ್ರಹ್ಮನು ತಿರುವಳ್ಳೂರನ್ನು ಬಿಟ್ಟು, ತಂಜಾವೂರಿನ ಉತ್ತರಕ್ಕೆ ಆರು ಮೈಲು ದೂರದಲ್ಲಿ ಕಾವೇರೀ ತೀರದಲ್ಲಿರುವ ತಿರುವೈಯಾರು ಎಂಬ ಊರಿಗೆ ಕುಟುಂಬ ಸಮೇತ ಪ್ರಯಾಣಮಾಡಿದನು. ತಿರುವೈಯಾರಿನಲ್ಲಿ ಕುಗ್ರಾಮವಾದ ತಿರುವಳ್ಳೂರಿನಂತಲ್ಲದೆ, ಒಂದು ಸಂಸ್ಕೃತ ಮಹಾ ಪಾಠಶಾಲೆಯಿದ್ದು, ಅಲ್ಲಿ ವಿದ್ಯಾಭ್ಯಾಸವು ಸಮರ್ಥರಾದ ವಿದ್ವಾಂಸರ ಮೇಲ್ವಿಚಾರಣೆಯಿಂದ ನಡೆಯುವ ವ್ಯವಸ್ಥೆಯಿದ್ದಿತು. ತನ್ನ ಮಕ್ಕಳಲ್ಲಿ ಹಿರಿಯವನು ಆಗಲೇ ಸಂಪಾದನಾತತ್ಪರನೂ, ರಾಮನಾಥನು ಪ್ರಾರಬ್ಧ ಕರ್ಮವಶದಿಂದ ವಿದ್ಯಾವಿಹೀನನೂ ಆದುದರಿಂದ ಚಿಕ್ಕವನಾದ ತ್ಯಾಗ ರಾಜನಿಗಾದರೂ ಸಂಸ್ಕೃತ ಭಾಷೆಯಲ್ಲಿ ಪ್ರೌಢ ವಿದ್ಯಾಭ್ಯಾಸ ಮಾಡಿಸ ಬೇಕೆಂದು ಅಪೇಕ್ಷಿಸಿದ ರಾಮಬ್ರಹ್ಮನು, ತನ್ನ ಪಿತೃಪಿತಾಮಹರು ವಾಸಿ ಸಿದ್ದ ತಿರುವಳ್ಳೂರನ್ನು ಬಿಟ್ಟು ಮಗನ ವಿದ್ಯಾಭ್ಯಾಸಕ್ಕಾಗಿಯೇ ತಿರುವೈ ಯಾರನ್ನು ಸೇರಿದನು. ತಿರುವಳ್ಳೂರಿನಲ್ಲಿ ಮೇಲೆ ಹೇಳಿದಂತಹ ಪರಿಸ್ಥಿತಿ ಯಲ್ಲೇ ಹಾಗೂ ಹೀಗೂ ಸ್ವಲ್ಪ ದೂರ ಸಾಗಿದ್ದ ಬಾಲ್ಯ ವಿದ್ಯಾಭ್ಯಾಸವು ತಿರುವೈಯಾರಿನಲ್ಲಿ ಮುಂದರಿಸಲ್ಪಟ್ಟಿತು.

---

## ಅಧ್ಯಾಯ ೨ "ಸಂಗೀತ ವಿದ್ಯಾ ಶಿಕ್ಷಣ"

ತ್ರಿರುವೈಯ್ಯಾರ್ ಎಂಬ ಊರಿನ ಹೆಸರನ್ನು ಸಂಸ್ಕೃತದಲ್ಲಿ ಪಂಚನದವೆಂದು ಕರೆಯುವುದು ರೂಢಿ. ಕೊಲ್ಲಡಂ, ಕಾವೇರಿ, ಕೊಡಮುರುತಿ, ವೆತ್ತಾರ್, ವೆನ್ನಾರ್ ಎಂಬ ಐದು ನದಿಗಳು ಇಲ್ಲಿ ಹತ್ತಿರಹತ್ತಿರದಲ್ಲೇ ಸಮಾನಾಂತರ ರೇಖೆಗಳಲ್ಲಿ ಹರಿಯುತ್ತಿರುವುದರಿಂದ ಈ ಪ್ರದೇಶವು ದಕ್ಷಿಣ ಭಾರತದ ಪಂಜಾಬ್ ಎಂದೂ ಕರೆಯಲ್ಪಟ್ಟಿದೆ. ಈ ಊರಿನ ಪಾವಿತ್ರ್ಯತೆಯನ್ನು ಕುರಿತು ಹೇಳುವ ಒಂದು ಗಾಥೆಯು ತಮಿಳಿನಲ್ಲುಂಟು. 'ಕಾಶಿಕ್ಕು ವೀಸ್ಮೆ ಅಧಿಕಮ್ ತಿರುವೈಯಾರ್' ಎಂದರೆ, 'ತಿರುವೈಯಾರು ಕ್ಷೇತ್ರವು ಕಾಶಿಗಿಂತಲೂ ಪಾವಿತ್ರ್ಯತೆಯಲ್ಲಿ ವೀಸ ಪಾಲು ಹೆಚ್ಚು' ಎಂದು ಅರ್ಥವಾಗುತ್ತದೆ. ಈ ಹೇಳಿಕೆಯನ್ನು ಸಾರ್ಥಕಗೊಳಿಸುವ ಒಂದು ದಂತಕಥೆಯೂ ಆ ಪ್ರಾಂತದಲ್ಲಿ ಪ್ರಚಾರದಲ್ಲಿದೆ. ಒಂದಾನೊಂದು ವೇಳೆ ಒಬ್ಬ ಬ್ರಾಹ್ಮಣನು ಮೃತನಾದ ತನ್ನ ತಂದೆಯ ಅಸ್ಥಿಗಳನ್ನು ಗಂಗೆಯಲ್ಲಿ ಹಾಕಬೇಕೆಂದು ಪ್ರಯಾಣವಾಗಿ ಒಂದು ರಾತ್ರಿಯಲ್ಲಿ ಈ ಊರ ಒಳ ತಂಗಿರಲು, ಮಾರನೆಯ ಪ್ರಾತಃಕಾಲ ಎದ್ದು ನೋಡುವ ವೇಳೆಗೆ, ಅವನು ಇಟ್ಟುಕೊಂಡಿದ್ದ ಆ ಅಸ್ಥಿಗಳು ಶಿವಲಿಂಗಗಳಾಗಿ ಮಾರ್ಪಟ್ಟಿದ್ದುವಂತೆ! ಈ ಆಶ್ಚರ್ಯವನ್ನು ಕಂಡ ಆ ಬ್ರಾಹ್ಮಣನು ಅವನ್ನು ಕಾವೇರಿಯಲ್ಲೇ ಸಮರ್ಪಿಸಿ ಕಾಶಿಯ ಪ್ರಯಾಣವನ್ನು ನಿಲ್ಲಿಸಿಬಿಟ್ಟನಂತೆ! ಅಷ್ಟುಮಾತ್ರವಲ್ಲ, ಇಲ್ಲಿ ಸಪ್ತಸ್ಥಾನಂ ಎಂದು ಪ್ರಸಿದ್ಧವಾದ ಏಳು ದೇವಾಲಯಗಳು, ಈ ತಿರುವೈಯಾರಿನಿಂದ ಮೂರು ಮೈಲು ಸುತ್ತಳತೆಯೊಳಗೇ ಇದ್ದು ಈ ಸ್ಥಳವು ಮಹಾತೀರ್ಥ ಮಾತ್ರವಲ್ಲದೆ, ಮಹಾ ಕ್ಷೇತ್ರವಾಗಿಯೂ ಇದೆ. ಇದು ಪೂರ್ವದಲ್ಲಿ ಸಂಸ್ಕೃತ ವಿದ್ಯೆಗೆ ನೆಲೆವೀಡಾಗಿ ಸರಸ್ವತೀ ಪೀಠವೋ ಎಂಬಂತಹ ಪ್ರಸಿದ್ಧಿಯನ್ನು ಪಡೆದಿದ್ದಿತು. ಧಾರ್ಮಿಕವಾಗಿ ಹೀಗೆ ಪ್ರಸಿದ್ಧವಾಗಿದ್ದುದಷ್ಟೇ ಅಲ್ಲ - ತಂಜಾವೂರಿನ ರಾಜರು ಬೇಸಗೆಯಲ್ಲಿ ಇಲ್ಲಿ ಬಂದು ವಾಸ ಮಾಡುತ್ತಿದ್ದುದರಿಂದ ಈ ಸ್ಥಳವು ಅತ್ಯುತ್ತಮ ಆರೋಗ್ಯ ಕ್ಷೇತ್ರವಾಗಿಯೂ ಇದ್ದಿತು.

ಇಂತಹ ಪುಣ್ಯ ಸ್ಥಳಕ್ಕೆ, ರಾಮಬ್ರಹ್ಮನು ತನ್ನ ಕುಟುಂಬ ಸಮೇತ

ನಾಗಿ ಬಂದು, ತಿರುವಳ್ಳೂರಿನಲ್ಲಿದ್ದಂತೆಯೇ ಶುದ್ಧವೃತ್ತಿಯನ್ನೂ, ಧರ್ಮ ಪ್ರಚಾರಕ ಕಾರ್ಯವನ್ನೂ ಕೈಕೊಂಡು, ಯದೃಚ್ಛಾಲಾಭ ಸಂತುಷ್ಟನಾಗಿ ಕಾಲಕ್ಷೇಪ ಮಾಡಿಕೊಂಡಿದ್ದನು. ಬಾಲಕ ತ್ಯಾಗರಾಜನಿಗೆ ಪ್ರಾರಂಭ ವಿದ್ಯೆಯು ತಿರುವಳ್ಳೂರಿನಲ್ಲಿ ಸಂಪೂರ್ಣವಾಗಿರಲಿಲ್ಲವಾಗಿ, ಇಲ್ಲಿ ಅದನ್ನು ಪೂರೈಸದೆ, ಮಹಾ ಪಾಠಶಾಲೆಗೆ ಸೇರಿಸುವಂತಿರಲಿಲ್ಲ. ಆದುದರಿಂದ ಹಿಂದಿನಂತೆಯೇ ಈ ತಿರುವೈಯಾರಿನ ಬಾಲ ಪಾಠಶಾಲೆಗೂ ಕಳುಹಿಸಿದನು. ದುರ್ದೈವಕ್ಕೆ ಇಲ್ಲಿಯ ಉಪಾಧ್ಯಾಯನೂ ಆ ಹಿಂದಿನ ಉಪಾಧ್ಯನಂತೆಯೇ ಮಕ್ಕಳನ್ನು ಬಹು ಕಠಿಣ ರೀತಿಯಿಂದ ಕಾಣುತ್ತಿದ್ದನೆಂದು ತಿಳಿಯಬಂತು. ಹಿಂದಿನ ಆ ಉಪಾಧ್ಯಾಯನು ಕಠಿಣನೇ ಆಗಿದ್ದರೂ ಆತನಿಗೆ ಉಪವೃತ್ತಿ ಗಳಿರಲಿಲ್ಲ. ಆದರೆ ಈತನಿಗೆ ಹಾಗಲ್ಲ. ಲೇವಾದೇವಿ, ವೈದ್ಯ, ಜ್ಯೋತಿಷ, ಪೌರೋಹಿತ್ಯ ಮುಂತಾದುವುಗಳಿಗೆಲ್ಲಾ ಈತನು ದಿನವೂ ತನ್ನ ಕಾಲವನ್ನು ವಿನಿಯೋಗಿಸುತ್ತಾ, ಇಷ್ಟರ ಮಧ್ಯದಲ್ಲಿ ಬಾಲಕರಿಗೆ ಪಾಠ ಕಲಿಸಲಿಕ್ಕೂ ಸಮಯವನ್ನು ಹವಣಿಸಿಕೊಳ್ಳಬೇಕಾಗಿದ್ದಿತು. ಸಾಲದುದಕ್ಕೆ ಆತನು ಅಸಾಧ್ಯ 'ಇಸ್ಪೇಟು' ಆಟಗಾರನಾಗಿಯೂ ಇದ್ದನು. ಉಪಾಧ್ಯಾಯ ವೃತ್ತಿಗೆ ಪ್ರತಿಬಂಧಕಗಳಾದ ಅಷ್ಟು ಲೋಪಗಳಿದ್ದರೂ, ಆತನು ಹಗಲೆಲ್ಲಾ ಹುಡುಗರನ್ನು ಮಠವಿಂದ ಹೊರಕ್ಕೆ ಎಲ್ಲೂ ಬಿಡದೆ ಉತ್ತಮ ರೀತಿಯಿಂದ ಕಾಯ್ದುಕೊಂಡಿರುತ್ತಿದ್ದನು. ಮಕ್ಕಳ ತಾಯಿತಂದೆಗಳಿಗಾದರೂ ಮುಕ್ಕಾಲುಪಾಲು ಅಷ್ಟೇ ಬೇಕಾಗಿದ್ದಿತು.

ಇದನ್ನು ಕಂಡ ರಾಮಬ್ರಹ್ಮನು ಇನ್ನು ಪ್ರಯೋಜನವಿಲ್ಲವೆಂದುಕೊಂಡು, ತನ್ನ ಮಗನ ವಿದ್ಯಾಭ್ಯಾಸಕ್ಕೆ ಮನೆಯಲ್ಲೇ ಪ್ರಾರಂಭಿಸಿ, ಓದು ಬರಹ ಲೆಕ್ಕ ಇವುಗಳನ್ನು ಚೆನ್ನಾಗಿ ಕಲಿಸಿದನು. ಈ ಬಗೆಯ ಅಕ್ಷರ ವಿದ್ಯೆಗಿಂತಲೂ ಹೆಚ್ಚಾಗಿ, ನಯ ನೀತಿ ನಡೆವಳಿಕೆಗಳನ್ನು ತಿದ್ದುವ ವಿಷಯದಲ್ಲಿ ಆತನು ಹೆಚ್ಚು ಜಾಗರೂಕನಾಗಿದ್ದನು. ಕುಶಲಮತಿಯಾಗಿದ್ದ ತ್ಯಾಗರಾಜನು ತನ್ನ ತಂದೆಯ ಸದ್ಗುಣ ಸನ್ನಡತೆ ಭಗವದ್ಭಕ್ತಿ ಗಾಂಭೀರ್ಯ ಮುಂತಾದುವುಗಳನ್ನು ಕಂಡು, ತನ್ನ ನಡೆವಳಿಕೆಯನ್ನೂ ಅವಕ್ಕೆ ಸರಿಯಾಗಿ ಇಟ್ಟುಕೊಂಡು ದಿನದಿನಕ್ಕೆ ಅಭಿವೃದ್ಧಿಯಾಗುತ್ತಿದ್ದನು. ವ್ಯವಹಾರ ಭಾಷೆಯಲ್ಲಿ ಓದುಬರಹಗಳು ಅತ್ಯುತ್ತಮ ರೀತಿಯಿಂದ ಪಾಠವಾದ ತರುವಾಯ

ರಾಮಬ್ರಹ್ಮನು ತನ್ನ ಮಗನನ್ನು ತಿರುವೈಯಾರಿನ ಸಂಸ್ಕೃತ ಮಹಾ ಪಾಠ ಶಾಲೆಗೆ ಸೇರಿಸಬೇಕೆಂದು ಯೋಚಿಸಿದನು. ಆದರೆ ಆತನ ಪತ್ನಿಯಾದ ಶಾಂತಾದೇವಿಗಾದರೋ ತಮ್ಮ ಮಗುವಿಗೆ ಭಾಗವತನಾಗುವಂತೆ ಶಿಕ್ಷಣ ಕೊಡಬೇಕೆಂಬ ವಿಚಾರದಲ್ಲಿ ಹೆಚ್ಚು ಅಪೇಕ್ಷೆಯಿದ್ದಿತು. ಹೀಗೆ ತಂದೆಯು ತಮ್ಮ ಬಾಲಕನಿಗೆ ಸಂಸ್ಕೃತದಲ್ಲಿ ಉಚ್ಚ ಶಿಕ್ಷಣ ಕೊಡಿಸಬೇಕೆಂದೂ, ತಾಯಿಯು ಅವನನ್ನು ಪುರಂದರ ಕನಕಾದಿ ದಾಸಶ್ರೇಷ್ಠರಂತೆ ಜನಾಂಗದ ಬೋಧಕ ಪದವಿಗೆ ಸಿದ್ಧಪಡಿಸಲು ಸಾಧಕವಾದ ಸಂಗೀತ ವಿದ್ಯೆಯಲ್ಲಿ ಪಾರಂಗತನಾಗುವಂತೆ ಮಾಡಬೇಕೆಂದೂ ಅಪೇಕ್ಷಿಸಿ ಅದನ್ನು ನಿರ್ಧರಿಸು ವುದಕ್ಕಾಗಿ ಹಲವು ವೇಳೆ ಚರ್ಚೆ ನಡಿಸಿದ್ದರು. ಕೊನೆಗೊಂದುದಿನ ಉಭಯ ಪಕ್ಷಗಳಲ್ಲಿದ್ದ ಸಾಧಕಬಾಧಕಗಳನ್ನೂ ಕುರಿತು ಬಹು ದೀರ್ಘವಾಗಿ ಯೋ ಚಿಸಿ, ಸಂಗೀತ ವಿದ್ಯಾಪಾರಂಗತನಾಗತಕ್ಕದು ಉತ್ತಮ ಕಲ್ಪವೇ ಆದರೂ, ಸಂಗೀತದೊಂದಿಗೆ ಸಾಹಿತ್ಯದ ಬೆಂಬಲವಿರತಕ್ಕದೂ ಆವಶ್ಯಕ ವಾದುದರಿಂದ, ಕೆಲವುಕಾಲ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಶಿಕ್ಷಣ ಹೊಂದತಕ್ಕದು ಅನಿವಾರ್ಯವೆಂದು ತೀರ್ಮಾನವಾಯಿತು. ತ್ಯಾಗ ರಾಜನು ಮಹಾ ಪಾಠಶಾಲೆಗೆ ಸೇರಿಸಲ್ಪಟ್ಟನು.

ತಿರುವೈಯಾರಿನ ಆ ಮಹಾ ಪಾಠಶಾಲೆಯು ಬಹು ಪುರಾತನವಾದು ದೆಂದು ಪ್ರಖ್ಯಾತವಾದುದು. ಅದನ್ನು ಹದಿನಾರನೆಯ ಶತಮಾನದಲ್ಲಿ, ಅಚ್ಯುತಪ್ಪ ನಾಯಕನ ಮುಖ್ಯ ಪ್ರಧಾನನಾಗಿದ್ದ ಗೋವಿಂದ ದೀಕ್ಷಿತ ನೆಂಬ ಬ್ರಾಹ್ಮಣ ಶ್ರೇಷ್ಠನು ಸ್ಥಾಪಿಸಿದ್ದನು. ಭಾರತದೇಶದಲ್ಲಿ ಪ್ರಾಚೀನ ಕಾಲದಿಂದ ಸುಪ್ರಸಿದ್ಧವೆನ್ನಿಸಿದ್ದ ಸಕಲ ವಿಶ್ವವಿದ್ಯಾನಿಲಯಗಳ ಪಾಠಪ್ರವ ಚನಗಳೂ ಇಲ್ಲಿ ನಡೆಯಬೇಕೆಂಬುದು ಆ ದ್ವಿಜಶ್ರೇಷ್ಠನ ಅಭಿಲಾಷೆಯಾಗಿದ್ದಿ ತಂತೆ! ತಕ್ಷಶಿಲೆಯ ಆಯುರ್ವೇದ, ನಳಂದದ ತರ್ಕಶಾಸ್ತ್ರ, ಉಜ್ಜಯಿ ನಿಯ ಖಗೋಳಶಾಸ್ತ್ರ, ವಿಕ್ರಮಶಿಲೆಯ ತಂತ್ರವಿದ್ಯೆ, ಕನೂಜಿನ ನಾಟಕ ಸಾಹಿತ್ಯ, ಮತ್ತು ವಾರಣಾಸೀ ವಿಶ್ವವಿದ್ಯಾಲಯದ ವೇದಾಂತಶಾಸ್ತ್ರ ಹೀಗೆ ಸಮಸ್ತ ಶಾಸ್ತ್ರಗಳ ಪ್ರೌಢ ಪಾಠಕ್ಕೂ ಈ ವಿಶ್ವವಿದ್ಯಾನಿಲಯದಲ್ಲಿ ಯೋಗ್ಯ ವ್ಯವಸ್ಥೆಯನ್ನಿಟ್ಟು, ಅದನ್ನು ಅತ್ಯುತ್ತಮ ಸ್ಥಿತಿಗೆ ತರಬೇಕೆಂದು ಯತ್ನಿಸಿದನು. ಅಷ್ಟುಮಾತ್ರವಲ್ಲ - ಕುಶಲವಿದ್ಯೆಗಳ ಶಿಕ್ಷಣಕ್ಕೂ ಅಲ್ಲಿ

ಅವಕಾಶವನ್ನು ಕಲ್ಪಿಸಬೇಕೆಂಬುದು ಆತನ ಅಪೇಕ್ಷೆಯಾಗಿದ್ದಿತು. ಈ ಧರ್ಮಾತ್ಮನ ಈ ಬಗೆಯ ಹೃದಯೋದ್ದೇಶವು ಸಾರ್ಥಕವಾಗಿ ಹೆಚ್ಚು ಕಡಮೆ ಒಂದು ಶತಮಾನಕಾಲ ನಡೆದು ಬಂದು, ತರುವಾಯ ತಂಜಾವೂರು ಆರ್ಕಾಟು ನವಾಬರ ವಶಕ್ಕೆ ಬಂದಾಗ ಈ ಪಾಠಶಾಲೆಗೆ ತಕ್ಕಷ್ಟು ದ್ರವ್ಯಾಶ್ರಯ ದೊರಕದೆ, ಇಲ್ಲಿಯ ಕಾರ್ಯಕಲಾಪಗಳು ಮಾಲಿನ್ಯವನ್ನು ಹೊಂದಿದುವು. ತ್ಯಾಗರಾಜನು ಪಾಠಶಾಲೆಗೆ ಸೇರಿದಾಗ, ಅದರಲ್ಲಿ ಭಾಗವತ ರಾಮಾಯಣಾದಿ ಪುರಾಣಗಳೂ, ವ್ಯಾಕರಣಶಾಸ್ತ್ರ, ನ್ಯಾಯಶಾಸ್ತ್ರ ವೇದಾಂತಶಾಸ್ತ್ರಗಳೂ, ವೇದಗಳೂ ಹೇಳಲ್ಪಡುತ್ತಿದ್ದುವು.

ಬಾಲಕ ತ್ಯಾಗರಾಜನು ಅತಿಶಯ ಸೂಕ್ಷ್ಮಮತಿಯಾಗಿದ್ದುದರಿಂದ, ಮೂರು ನಾಲ್ಕು ವರ್ಷಕಾಲ ಅಭ್ಯಾಸ ಮಾಡುವುದರೊಳಗಾಗಿ, ಸಂಸ್ಕೃತದಲ್ಲಿ ತಕ್ಕಷ್ಟು ಪಾಂಡಿತ್ಯವನ್ನು ಗಳಿಸಿದನು. ಎಲ್ಲಕ್ಕಿಂತಲೂ ಹೆಚ್ಚಾಗಿ ರಾಮಾಯಣ ಗ್ರಂಥವು ಆತನ ಅತಿ ಮುಖ್ಯ ಪಠನೀಯ ಗ್ರಂಥವಾಗಿದ್ದಿತು. ಶ್ರೀರಾಮ ಚಾರಿತ್ರ್ಯದ ಹಲವು ಘಟನೆಗಳು ಆತನಿಗೆ ನಿತ್ಯವ್ಯವಹಾರದ ಮಾತುಕಥೆಗಳಂತೆ ಬಳಕೆಯಾದುವು. ಜೊತೆಯ ಬಾಲಕನೊಬ್ಬನು—'ಅಯ್ಯಾ ತ್ಯಾಗರಾಜಾ, ಈ ದಿನ ಪಾಠಶಾಲೆಗೆ ತಪ್ಪಿಸಿಕೊಂಡು ಎಲ್ಲಾದರೂ ವಿನೋದವಾಗಿ ವಿಹರಿಸಿಕೊಂಡಿರೋಣ ಬರುವೆಯಾ?' ಎಂದು ಕೇಳಿದರೆ, ತ್ಯಾಗರಾಜನು—'ಮಿತ್ರಾ ನಮ್ಮ ಶ್ರೀರಾಮನು ಸುವರ್ಣ ಮೃಗವನ್ನು ಬೆನ್ನಟ್ಟಿ ಮಾಡುತ್ತಿರುವ ಮೃಗಯಾ ವಿಹಾರದಲ್ಲಿ ನಾನಾಗಲೇ ಆತನನ್ನು ಅನುಸರಿಸಿ ನಡೆಯುತ್ತಿದ್ದೇನೆ. ಬೇರಿನ್ನೆಲ್ಲಿ ವಿಹರಿಸುವುದು!' ಎಂದು ಪ್ರತ್ಯುತ್ತರ ಕೊಡುವನು. ಮುಂಗೋಪಿಯಾದ ಉಪಾಧ್ಯಾಯನೊಬ್ಬನನ್ನು ತೊಂದರೆಗೊಳಿಸಲು ತಮ್ಮೊಂದಿಗೆ ಸೇರೆಂದು ಜೊತೆಯ ಬಾಲಕರು ಕೇಳಿಕೊಳ್ಳಲು—'ಮಿತ್ರರೇ ವಿಶ್ವಾಮಿತ್ರನಿಗಿಂತಲೂ ಇನ್ನು ಮುಂಗೋಪಿಯೂ ಹಟಮಾರಿಯೂ ಆದ ಉಪಾಧ್ಯಾಯನು ಲೋಕದಲ್ಲಿ ಬೇರೊಬ್ಬನುಂಟೆ? ನೋಡಿ, ನಮ್ಮ ಶ್ರೀರಾಮನು ಎಷ್ಟು ವಿಧೇಯತೆಯಿಂದಲೂ ನಯಭಯಗಳಿಂದಲೂ ನಡೆದು ಆತನನ್ನು ಮೆಚ್ಚಿಸಿದನು!' ಎನ್ನುವನು. ಅಷ್ಟು ಚಿಕ್ಕ ವಯಸ್ಸಿನಲ್ಲೇ ಆತನಲ್ಲಿ ನೆಲೆಗೊಂಡಿದ್ದ ಆ ಧರ್ಮಜಶಸ್ವಭಾವವನ್ನು ಕಂಡು ವಿನೋದಕ್ಕಾಗಿ ಮನೆಯ ಒಕ್ಕಲ

ಗಿತ್ತಿಯು ಶೃಂಗಾರ ಚೇಷ್ಟೆಗಳನ್ನು ತೋರಿಸಿ, ತನ್ನನ್ನು ಮದುವೆಯಾಗು ವೆಯಾ ಎಂದು ಪೀಡಿಸಲೆತ್ನಿಸಿದರೆ, ಆಗಲೂ ಆ ಗುಣನಿಧಿಯು,--'ಎಲೌ ಏನೆನ್ನುತ್ತಿರುವೆ? ಅರಣ್ಯವಾಸಿಯಾಗಿದ್ದ ನಮ್ಮ ಶ್ರೀರಾಮನನ್ನು ಸಮಯಾ ಸಮಯಗಳ ಗಮನವಿಲ್ಲದೆ ಪೀಡಿಸಿದ ಶೂರ್ಪನಖಿಗೆ ಏನು ಗತಿಯಾಯಿ ತೆಂಬುದು ನಿನಗೆ ಜ್ಞಾಪಕವಿಲ್ಲವೋ, ಜೋಕೆ!" ಎಂದು ಎಚ್ಚರ ಗೊಳಿಸುವನು.

ತಂದೆಯ ಇಷ್ಟಕ್ಕೆ ವಿಧೇಯನಾಗಿ ಬಾಲಕ ತ್ಯಾಗರಾಜನು ಪಾಠ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದನಾದರೂ, ಆತನಿಗೆ ಅಲ್ಲಿಯ ತರ್ಕ ವ್ಯಾಕರಣಾದಿ ನೀರಸ ಪಾಠಗಳ ವಿಷಯದಲ್ಲಿ ಲೇಶಮಾತ್ರವೂ ಅಪೇಕ್ಷೆ ಯಿರಲಿಲ್ಲ. ಆತನ ಜನ್ಮ ಸಂಸ್ಕಾರವೇ ಪ್ರತ್ಯೇಕ ಮಾರ್ಗವನ್ನು ಅನು ಸರಿಸಿದ್ದುದಾದುದರಿಂದ, ಈಗ ಆತನು ಮಾಡುತ್ತಿದ್ದ ಪಾಠವೂ ಹೊಂದು ತ್ತಿದ್ದ ಶಿಕ್ಷಣವೂ ಮನಃಪೂರ್ವಕವಾದುದಾಗಿರಲಿಲ್ಲ. ಆತ್ಮಾಭಿವೃದ್ಧಿ ಗಾಗಲೀ ಜನ್ಮಸಾಫಲ್ಯಕ್ಕಾಗಲೀ ಎಷ್ಟುಮಾತ್ರವೂ ಸಹಕಾರಿಗಳಾಗಲಾರದ ಈ ತರ್ಕಗಳಿಗಾಗಿ ಪಡತಕ್ಕ ಶ್ರಮೆಯೂ ಕಳೆಯತಕ್ಕ ಕಾಲವೂ ವ್ಯರ್ಥ ವೆಂದೇ ಆತನ ಭಾವನೆಯಾಗಿದ್ದಿತು! ತರ್ಕವಾದಗಳಲ್ಲಿ ಮಗ್ನನಾಗತಕ್ಕುದು ಅನುಪಯೋಗವಾದುದರಿಂದ ಶ್ರೀರಾಮಚಂದ್ರನ ಪಾದಾರವಿಂದವನ್ನು ಭಜಿಸೆಂದು ಆತನು ತನ್ನ ಮನಸ್ಸಿಗೇ ಹೀಗೆಂದು ಬೋಧಿಸಿಕೊಂಡಿದ್ದಾನೆ.

## ಕಲ್ಯಾಣಿ ರೂಪಕತಾಳ

ಪ. ಭಜನ ಸೇಯವೇ ಮನಸಾ - ಪರಮ ಭಕ್ತಿತೋ ಭ.

ಅ. ಅಜರುದ್ರಾದುಲಕು ಭೂ ಸು
ರಾದುಲಕರುದೈನ ರಾಮು ಭ.

ಚ. ನಾದಪ್ರಣವ ಸಪ್ತಸ್ವರ - ವೇದವರ್ಣ ಶಾಸ್ತ್ರ ಪುರಾ
ಣಾದಿ ಚತುಷ್ಷಷ್ಟಿಕಳಲ - ಭೇದಮು ಕಲಿಕೇ
ಮೋದಕರ ಶರೀರಮೆತ್ತಿ - ಮುಕ್ತಿಮಾರ್ಗಮುನು ತೆಲಿಯನಿ
ವಾದತರ್ಕಮೇಲ ಶ್ರೀ ಮ - ದಾದಿ ತ್ಯಾಗರಾಜನುತುನಿ ಭ.

ಇಂತಹ ಮನೋಭಾವದಿಂದ ಇದ್ದ ಆ ಬಾಲಕನು ಒಂದೇ ಮನಸ್ಸಿನಿಂದ ಕುಳಿತು, ನೀರಸವೆಂದು ತೋರಿದ ಆ ಪಾಠಗಳನ್ನು ಕಲಿವ ಮಾರ್ಗವಾವುದು ? ಸ್ವಾಭಾವಿಕವಾಗಿಯೇ ಗಾನವಿದ್ಯೆಯ ಕಡೆಗೆ ತಿರುಗಿದ್ದ ಆತನ ಮನಸ್ಸೆಂಬ ಸಸಿಯನ್ನು ಹೆಚ್ಚುಹೆಚ್ಚಾಗಿ ಆಕರ್ಷಿಸಿ, ಅದಕ್ಕೆ ಕಾಲಕಾಲಕ್ಕೆ ತಕ್ಕ ಆಹಾರ ಪಾನೀಯಗಳನ್ನೊದಗಿಸಿ ಬೆಳೆಯಲಿತ್ತ ಒಂದು ಸಾಧನವೂ ಆ ಕಾಲದಲ್ಲಿ ದೊರಕಿತು. ತಿರುವೈಯಾರಿನಲ್ಲಿ ತ್ಯಾಗರಾಜನ ಮನೆಯಿದ್ದ ಉತ್ತರದ ಬೀದಿಯಲ್ಲಿ ವೆಂಕಟರಮಣದಾಸ ಅಥವ ಶೊಂಟಿ ವೆಂಕಟರಮಣಯ್ಯ ಎಂಬೊಬ್ಬ ವೈಣಿಕ ವಿದ್ವಾಂಸನು ವಾಸವಾಗಿದ್ದನು. ಆತನ ತಂದೆಯಾದ ಶೊಂಟಿ ವೆಂಕಟಸುಬ್ಬಯ್ಯನೆಂಬಾತನ ಕಾಲದಿಂದಲೂ ಆ ಮನೆತನದವರು ತಂಜಾವೂರು ರಾಜಾಸ್ಥಾನದಲ್ಲಿ ವೈಣಿಕ ವಿದ್ವಾಂಸರಾಗಿದ್ದರು. ಆತನು ತನ್ನ ಮನೆಯಲ್ಲಿ ಆಗಾಗ ಹಾಡುತ್ತಿದ್ದ ಸಂಗೀತವನ್ನು ಕೇಳುವುದಕ್ಕೆ, ಬಾಲಕ ತ್ಯಾಗರಾಜನು ಪಾಠಶಾಲೆಯ ಮತ್ತು ಮನೆಯ ಹಲಕೆಲವು ಗೊಂದಲಗಳಲ್ಲಿ ಹೇಗೋ ಸ್ವಲ್ಪ ವೇಳೆಯನ್ನು ಮಿಗಿಸಿಕೊಂಡು, ಹೋಗಿ ಕೇಳಿ ಪರಮಾನಂದಗೊಳ್ಳುತ್ತಿದ್ದನು. ಸಂಸ್ಕಾರ ಬಲದಿಂದ ಆತನ ಮನಸ್ಸಿಗೆ ಅತಿಶಯ ಪ್ರೀತಿಜನಕವಾಗಿದ್ದ ಈ ಗಾನರಸವು ಪಂಚೇಂದ್ರಿಯ ತೃಪ್ತಿಯನ್ನೂ ಉಂಟುಮಾಡುತ್ತಿರಲು, ಆತನು ಮುಂದೆ ಸ್ವಲ್ಪ ದಿನಗಳಲ್ಲೇ ಪಾ ಠ ಶಾ ಲೆ ಯ ನ್ನು ಬಿಟ್ಟು, ತನ್ನ ಜೀವಮಾನವನ್ನೆಲ್ಲ ಸಂಗೀತ ವಿದ್ಯಾವ್ಯಾಸಂಗದಲ್ಲೇ ಕಳೆಯಬೇಕೆಂದು ನಿಶ್ಚಯಮಾಡಿಕೊಂಡನು.

ತನ್ನ ಮಗನಿಗೆ ಗಾನವಿದ್ಯೆಯಲ್ಲಿ ಸ್ವಾಭಾವಿಕವಾದ ಅಪೇಕ್ಷೆಯೂ ಪ್ರತಿಭೆಯೂ ಇದ್ದ ವಿಚಾರವು ಬಹು ದಿನಗಳವರೆಗೆ ತಂದೆಯಾದ ರಾಮಬ್ರಹ್ಮನಿಗೆ ತಿಳಿದಿರಲಿಲ್ಲ. ಈಚೆಗೆ ತ್ಯಾಗರಾಜನು ಪಾಠಶಾಲೆಯ ವಿರಾಮವೇಳೆಯಲ್ಲೆಲ್ಲಾ ವೈಣಿಕ ವಿದ್ವಾಂಸರ ಮನೆಯ ಸಂಗೀತವನ್ನು ಕೇಳುವುದಕ್ಕೆ ಹೋಗುತ್ತಿದ್ದ ವಿಚಾರವು ತಂದೆಗೆ ಗೊತ್ತಿದ್ದಿತಾದರೂ, ಕಾಲಾಂತರದಲ್ಲಿ ಆ ಸಂಗೀತ ವಿದ್ಯಾಭಿಲಾಷೆಯು, ತನ್ನ ಮಗನ ಸಾಹಿತ್ಯಾಭ್ಯಾಸಕ್ಕೆ ಮುಪ್ಪನ್ನುಂಟುಮಾಡುವುದೆಂದು ಆತನು ಎಣಿಸಿರಲಿಲ್ಲ. ಎಂದು ತ್ಯಾಗರಾಜನು ತಾನು ಇನ್ನು ಮುಂದೆ ಪಾಠಶಾಲೆಯಲ್ಲಿ ತರ್ಕವ್ಯಾಕರಣಾದಿ ಶುಷ್ಕ ವಿಚಾರ

ಗಳ ಅಭ್ಯಾಸದಲ್ಲಿ ಹೊತ್ತುಗಳೆಯಲಾರೆನೆಂದು ಮನೆಯಲ್ಲಿ ನಿಂತುಬಿಟ್ಟನೋ, ಅಂದು ರಾಮಬ್ರಹ್ಮನು ತನ್ನ ಪತ್ನಿಯು ನುಡಿದಿದ್ದ ಭವಿಷ್ಯವು ನಿಶ್ಚಯವಾಯಿತೆಂದುಕೊಂಡನು. ಆವರೆಗೆ ತ್ಯಾಗರಾಜನಿಗೆ ಕಾವ್ಯ ನಾಟಕಾದಿಗಳ ವರೆಗೆ ತಕ್ಕಮಟ್ಟಿನ ಪಾಠನಡೆದಿದ್ದುದರಿಂದ ಆಗ ಪಾಠಶಾಲೆಯನ್ನು ಬಿಟ್ಟರೂ ಅದರಿಂದ ಮುಂದೆ ಕೆಡುಕಾಗಬಹುದೆಂದು ಚಿಂತಿಸಲು ಅವಕಾಶವಿರಲಿಲ್ಲ. ಏಕಸಂಥಾಗ್ರಾಹಿಯೂ, ಸ್ವಯಂವಿಚಾರಶೀಲನೂ ಆದ ಮಗನು ಸಂಗೀತ ವಿದ್ಯಾಭ್ಯಾಸ ಮಾಡುತ್ತೇನೆಂದು ಅತ್ಯುತ್ಸಾಹಿಯಾಗಿ ಆತುರಗೊಳ್ಳುತ್ತಿರುವಲ್ಲಿ ಅವನಿಗೆ ಇಷ್ಟವಿಲ್ಲದ ಬೇರೊಂದನ್ನು ಕಲಿಯಬೇಕೆಂದು ಬಲವಂತಪಡಿಸುವುದು ಯಾರಿಂದ ಸಾಧ್ಯ? ರಾಮಬ್ರಹ್ಮನು ತನ್ನ ಮಗನನ್ನು ಕರೆದುಕೊಂಡು ಹೋಗಿ, ಒಂದು ಶುಭದಿನದಲ್ಲಿ ಆಸ್ಥಾನ ಪಂಡಿತ ಶೊಂಟಿ ವೆಂಕಟರಮಣಯ್ಯನ ಬಳಿ ಬಿಟ್ಟು, ತನ್ನ ಕುಮಾರನಿಗೆ ಗಾಂಧರ್ವ ವಿದ್ಯೆಯಲ್ಲಿ ಶಿಕ್ಷಣವನ್ನಿತ್ತು ಕೀರ್ತಿ ಹೊಂದಬೇಕೆಂದು ಪ್ರಾರ್ಥಿಸಿಕೊಂಡನು. ಆ ವಿದ್ವಾಂಸನೂ ಬಾಲಕನಿಂದ ಕೆಲವು ಕೀರ್ತನೆಗಳನ್ನು ಹೇಳಿಸಿ ಕೇಳಿ ಬಹು ಸಂತೋಷಪಟ್ಟನು. ಶಾಂತಾದೇವಿಯು ತಾನು ತಮ್ಮ ತಂದೆಯಿಂದ ಕಲಿತಿದ್ದ ಪುರಂದರ ದಾಸರ ಹಲಕೆಲವು ಕೀರ್ತನೆಗಳನ್ನೂ ತ್ಯಾಗರಾಜನಿಗೆ ಹೇಳಿಕೊಟ್ಟಿದ್ದಳು. ತ್ಯಾಗರಾಜನು ಕೋಗಿಲೆಯಂತೆ ಮಧುರವಾದ, ಕರ್ಣಾನಂದಕರವಾದ, ಕಂಠಸ್ವರದಿಂದ ಭಕ್ತಿಪೂರ್ವಕವಾಗಿ ಹಾಡಿದ ಕೀರ್ತನೆಯು ಆ ವೈಣಿಕ ವಿದ್ವಾಂಸನ ಚಿತ್ತಹರಣಮಾಡಿತು. ಬಾಲಕನು ಪ್ರತಿಮಾತಿಲ್ಲದೆ ಶಿಷ್ಯವರ್ಗಕ್ಕೆ ಸೇರಿಸಿಕೊಳ್ಳಲ್ಪಟ್ಟನು. ಮುಂದೆ ದಿನಗಳು ಕಳೆದಂತೆಲ್ಲ, ಕ್ರಮಪಾಠವಿಲ್ಲದೆ ಆತನು ಈವರೆಗೆ ಕಲಿತಿದ್ದ ಹಲವು ಕೀರ್ತನೆಗಳನ್ನು ಒಂದೊಂದನ್ನಾಗಿ ಹೇಳಿಸಿ ಕೇಳಿ, ಆ ವಿದ್ವಾಂಸನು ಅವುಗಳನ್ನು -ಅಶುದ್ಧ ಪಾಠವೆಂದು ತೋರಿದೆಡೆಯಲ್ಲಿ ತಿದ್ದಿ, ನೂತನ ರೀತಿಯಲ್ಲಿ ಹಾಡುವ ವಿಧಾನವನ್ನು ಹೇಳಿಕೊಟ್ಟನು. ತ್ಯಾಗರಾಜನು ಮೇಲೆ ಹೇಳಿದಂತೆ ಏಕಸಂಥಾಗ್ರಾಹಿಯಾಗಿದ್ದುದರಿಂದ, ಗುರುವು ಒಂದು ವಿಚಾರವನ್ನು ಹೇಳಿದರೆ, ಅದಕ್ಕೆ ಸಂಬಂಧಿಸಿದ ನಾಲ್ಕು ವಿಚಾರಗಳನ್ನು ಗ್ರಹಿಸುತ್ತಾ, ಆತನಿಗೆ ಪರಮಾನಂದವನ್ನುಂಟುಮಾಡುವನು. ತ್ಯಾಗರಾಜನು ಸಂಗೀತ ಶಾಸ್ತ್ರವಿಧಿಯಂತೆ ತಾಳಲಯಗತಿಗಳನ್ನನುಸರಿಸಿ ಹಾಡುತ್ತಿದ್ದಾಗ

ಆತನ ಮನೋಹರ ಕಂಠದಿಂದ ಹೊರಡುತ್ತಿದ್ದ ದಿವ್ಯ ಗೀತಗಳನ್ನು ಕೇಳಿ ದವರು ರೋಮಾಂಚಹೊಂದಿ ಪರಮಾನಂದಮಗ್ನರಾಗುತ್ತಿದ್ದರು. ಪಟ್ಟಣಂ ಸುಬ್ರಹ್ಮಣ್ಯ ಐಯರೆಂಬೊಬ್ಬ ಗಾಯನ ವಿದ್ವಾಂಸರು ತಾವು ರಚಿಸಿದ್ದ 'ಧನ್ಯುಡೆವಡು ?' ಎಂಬ ಕೀರ್ತನೆಯಲ್ಲಿ — 'ಓ ದಾಶರಥೆ, ನಿನ್ನನ್ನು ಪರಿಶುದ್ಧವಾದ ಸ್ವರವರ್ಣಗಳ ಸಮ್ಮೇಳನದಿಂದ, ಉತ್ತಮವಾದ ಮದ್ದಳೆ, ತಾಳ, ತಂಬೂರಿ, ವೀಣೆ ಮತ್ತು ಮುರಲಿ ಮುಂತಾದ ವಾದ್ಯ ಗಳ ಸಹಾಯಗೊಂಡು, ಭಕ್ತಿಯುಕ್ತನಾಗಿ ಭಜಿಸುವ ಧನ್ಯನಾರು ಪ್ರಭೋ!" ಎಂದು ಪ್ರಾರ್ಥಿಸಿದಾಗ, ಭಕ್ತಶಿರೋಮಣಿಯಾದ ಈ ತ್ಯಾಗ ರಾಜಸ್ವಾಮಿಯನ್ನೇ ದೃಷ್ಟಿಪಥದಲ್ಲಿಟ್ಟುಕೊಂಡಿದ್ದರೆಂದು ಪ್ರತೀತಿಯಿದೆ.

ವಿದ್ಯಾರ್ಥಿ ತ್ಯಾಗರಾಜನು ಆ ವೈಣಿಕ ವಿದ್ವಾಂಸನಲ್ಲಿ ಎಷ್ಟು ಕಾಲವಿ ದ್ದನು, ಸಂಗೀತ ವಿದ್ಯೆಯಲ್ಲಿ ಎಷ್ಟುಮಟ್ಟಿಗೆ ಶಿಕ್ಷಣಹೊಂದಿ ಪ್ರೌಢಿಮೆ ಯನ್ನು ಪಡೆದನು, ಎಂಬ ಸ್ಪಷ್ಟವಿಚಾರವು ತಿಳಿಯಬರುವುದಿಲ್ಲ. ಆದರೆ ಅಲ್ಲಿ ಒಂದು ವರ್ಷಕಾಲ ಕ್ರಮ ಶಿಕ್ಷಣೆಯನ್ನು ಪಡೆದುದೇ ಆತನಿಗೆ ಬಹು ಕಾಲ ದಾನವಿದ್ಯಾವ್ಯಾಸಂಗಮಾಡಿದ ಪಂಡಿತರೇ ತಲೆದೂಗಿಸುವಂತೆ ಮಾಡುವಷ್ಟುಮಟ್ಟಿನ ಪ್ರೌಢಿಮೆಯನ್ನು ತಂದುಕೊಟ್ಟಿತು.



## ಅಧ್ಯಾಯ ೩ "ಕೃತಿರಚನೆ"

ಸುಚ್ಚೇತನರಲ್ಲಿ ಜನ್ಮಾಂತರ ಸಂಸ್ಕಾರ ಬಲದಿಂದ ಪ್ರಾಪ್ತಿಸುವ ವಿದ್ಯೆ, ಬುದ್ಧಿ ಕೌಶಲ್ಯ, ಧನ ಯೌವನಾದಿಗಳು, ದೇಹಬಲ ಮುಂತಾದ ಐಶ್ವರ್ಯಗಳು ಸನ್ಮಾರ್ಗದಲ್ಲೇ ಪ್ರವೃತ್ತವಾಗಿ ಸತ್ಕಾರ್ಯಗಳಿಗಾಗಿಯೇ ವಿನಿಯೋಗವಾಗುವಂತಹ ಸಕಲವಿಧ ಅನುಕೂಲತೆಗಳನ್ನೂ ಸರ್ವಲೋಕ ಶರಣ್ಯನಾದ ಭಗವಾನನೂ ತಪ್ಪದೆ ಕಾಲಕಾಲಕ್ಕೆ ಒದಗಿಸಿ ಕೊಡುತ್ತಾ ಬರುವನು. ಅಂತೆಯೇ ದುಶ್ಚೇತನರ ಧನಧಾನ್ಯಾದಿ ಸಮಸ್ತವಿಧ ಸೌಭಾ ಗ್ಯವೂ ದುಷ್ಕಾರ್ಯಗಳಿಗಾಗಿಯೇ ವ್ಯಯಿಸಲ್ಪಟ್ಟು ತನ್ಮೂಲಕ ಅವರಿಗೆ

ಅಗಾಧ ಪಾಪಸಾಧನೆಯಾಗುವುದಾದರೂ ತಪ್ಪದು. ಈ ಭಗವನ್ನಿಯಾಮಕ ತತ್ವವನ್ನನುಸರಿಸಿಯೇ ಪುಣ್ಯಶಾಲಿಗಳಾದ ನಮ್ಮ ಕಥಾನಾಯಕರಿಗೂ ಇಂತಹ ಸೌಭಾಗ್ಯವೇ ಪ್ರಾಪ್ತವಾಯಿತು. ಅವರಿಗಿದ್ದ ಸಂಗೀತ ಸಾಹಿತ್ಯ ವಿದ್ಯಾ ಪ್ರೌಢಿಮೆಯು ಉದರಂಭರಣೋದ್ಯೋಗಕ್ಕಾಗಲೀ, ಧನಕನಕಾದಿಗಳನ್ನು ಗಳಿಸಿ - ಭೂಸ್ವಾಸ್ಥ್ಯಗಳನ್ನು ಸಂಪಾದಿಸಿ, ಬಿರುದು ಬಹುಮತಿಗಳಿಗಾಗಿ ರಾಜಾಧಿರಾಜರನ್ನು ಆಶ್ರಯಿಸಿ ಸ್ತುತಿಸುವ ಹೇಯಕಾರ್ಯಗಳಲ್ಲಾಗಲೀ ವಿನಿಯೋಗವಾಗುವಂತೆ ಆಗಿದ್ದರೆ, ಈವರೆಗೆ ಲೋಕದಲ್ಲಿ ಜನ್ಮಿಸಿ, ಅತ್ತಿಯ ಹಣ್ಣಿನಲ್ಲಿನ ಹುಳುಗಳಂತೆ ವಿನಾಶವನ್ನು ಹೊಂದಿದ ಅಸಂಖ್ಯಮಂದಿ ಪ್ರತಿಭಾಶಾಲಿಗಳಂತೆಯೇ ಅವರೂ ಒಬ್ಬರಾಗಿ ಹೋಗುತ್ತಿದ್ದರಲ್ಲದೆ, ಇಂದು ಅವರನ್ನು ಸ್ಮರಿಸಿಕೊಳ್ಳುತ್ತಿದ್ದವರಾರು ? ಆದರೆ ಭಕ್ತಾಭಿಮಾನಿಯಾದ ಶ್ರೀರಾಮಚಂದ್ರನು ಹಾಗೇಕೆ ನಡೆಯಲಿತ್ತು ತನ್ನ ಪವಿತ್ರ ನಾಮಕ್ಕೆ ಕಳಂಕವನ್ನುಂಟುಮಾಡಿಕೊಳ್ಳುವನು ! ‘ ನಹಿಕಲ್ಯಾಣಕೃತ್ಕಶ್ಚಿದ್ದುರ್ಗತಿಂತಾತಗಚ್ಛತಿ ’ ಎಂದರೆ, ‘ ಸನ್ಮಾರ್ಗ ಪ್ರವರ್ತನೆಯಲ್ಲಿದ್ದು ಸತ್ಕರ್ಮಗಳನ್ನು ಮಾಡುವವನಾರೂ ಎಂದಿಗೂ ದುರ್ಗತಿಯನ್ನು ಹೊಂದಲಾರನು ’ ಎಂಬ ಭಗವದಾಶ್ವಾಸನವು ಎಂದಿಗಾದರೂ ವ್ಯರ್ಥವಾಗುವುದೇನು ?—

ಶ್ರೀರಾಮಾನುಗ್ರಹದಿಂದ, ಸಂಗೀತ ವಿದ್ಯೆಯು ಹೃದಯಮೂಲವನ್ನೇ ಸ್ವಾಧೀನಗೊಳಿಸಿಕೊಂಡು, ಅಸಾಧಾರಣ ಪಾಂಡಿತ್ಯವನ್ನು ಸಂಪಾದಿಸಿದ ಶ್ರೀ ತ್ಯಾಗರಾಜರು ಮುಂದೂ ಗುರುಗಳ ಬಳಿ ಇದ್ದು ಅಭ್ಯಾಸಮಾಡಿದರೋ ಇಲ್ಲವೋ ಸರಿಯಾಗಿ ತಿಳಿಯಬರುವುದಿಲ್ಲ. ಮುಂದೆ ಅವರ ಕಾಲವೆಲ್ಲ ನೂತನ ಕೀರ್ತನೆಗಳ ರಚನೆ, ರಾಗಾಲಾಪನೆ, ಲಕ್ಷ್ಯಲಕ್ಷಣ ಪೂರ್ವಕವಾಗಿ ಪಲ್ಲವಿಗಳ ಹಾಡುವಿಕೆಯನ್ನು ಸಿದ್ಧಪಡಿಸುವಿಕೆ, ತಮ್ಮಿಂದ ರಚಿತವಾದ ಕೃತಿಗಳಲ್ಲಿದ್ದ ವ್ಯಾಕರಣಾದಿ ದೋಷಗಳನ್ನು ಶುದ್ಧಿಗೊಳಿಸಿ ಸರಿಪಡಿಸುವಿಕೆ ಮುಂತಾದ ಕಾರ್ಯಗಳಿಗಾಗಿಯೇ ವಿನಿಯೋಗವಾಗುತ್ತಿದ್ದಿತು. ಹೀಗಿರುತ್ತಿರುವಲ್ಲಿ ಒಂದು ದಿನ, ಕಾಂಚೀಪುರ ನಿವಾಸಿಗಳಾದ ಭಾಗವತೋತ್ತಮರೊಬ್ಬರು, ತಿರುವೈಯಾರಿಗೆ ಬಂದು ಅಲ್ಲಿ ತಮ್ಮ ಹರಿಕಥಾ ಕಾಲಕ್ಷೇಪಗಳನ್ನು ನಡಿಸುತ್ತಿದ್ದರು. ಶ್ರೀ ತ್ಯಾಗರಾಜರಿಗೆ, ಆ ಭಾಗವತರಲ್ಲಿ ಕಂಡುಬಂದ ಭಕ್ತಿ ಜ್ಞಾನ ವೈರಾಗ್ಯಾದಿಗಳ ಸಮ್ಮೇಳನವನ್ನು ಕಂಡು

ಅವರನ್ನೇ ತಮ್ಮ ಜ್ಞಾನಾಚಾರ್ಯರಾಗಿರಲು ಆಶ್ರಯಿಸಬೇಕೆಂಬ ಸಂಕಲ್ಪ ಹುಟ್ಟಿತು. ಹಾಗೆ ಆಶ್ರಯಿಸಿ ಪ್ರಾರ್ಥಿಸಿದ ತ್ಯಾಗರಾಜರಲ್ಲಿದ್ದ ಶ್ರದ್ಧಾ ಭಕ್ತಿಗಳನ್ನೂ ನಿರ್ಮಮಸ್ವಭಾವವನ್ನೂ ಕಂಡು ಸಂತೋಷಿಸಿದ ಆ ಭಾಗವತರು, ಅವರಿಗೆ ಅನುಗ್ರಹ ಪೂರ್ವಕ ಶ್ರೀರಾಮತಾರಕ ಮಂತ್ರವನ್ನು ಉಪದೇಶಿಸಿ,—'ಅಪ್ಪಾ, ಪರಮಪಾವನನಾದ ಈ ಮಂತ್ರರಾಜವನ್ನು ನಿತ್ಯವೂ ಜಪಿಸಿ, ಶ್ರೀರಾಮ ಭಜನೆಯಲ್ಲಿ ತೊಡಗಿರುವ ಪುಣ್ಯಶಾಲಿಯು ಜೀವನ್ಮುಕ್ತನಾಗುವನಪ್ಪಾ! ನಿನಗೆ ಶ್ರೇಯಸ್ಸುಂಟಾಗಲಿ!" ಎಂದು ಆಶೀರ್ವದಿಸಿ, ಮುಂದಕ್ಕೆ ಪ್ರಯಾಣವಾದರು.

ಶ್ರೀ ತ್ಯಾಗರಾಜರಿಗೆ ಹದಿನಾಲ್ಕನೆಯ ವಯಸ್ಸು ನಡೆಯುತ್ತಿದ್ದಾಗ್ಗೆ ಅವರ ತಂದೆ ರಾಮಬ್ರಹ್ಮನು ಪರಲೋಕಯಾತ್ರೆ ಮಾಡಿದನು. ಮುಂದಿನ ವರ್ಷದಲ್ಲಿ ಶಾಂತಾದೇವಿಯೂ ಭೌತಿಕ ದೇಹವನ್ನು ತ್ಯಜಿಸಿ ಪತಿಸಾನ್ನಿಧ್ಯವನ್ನು ಸೇರಿದಳು. ಅಣ್ಣಂದಿರಿಬ್ಬರ ಮನೋವೃತ್ತಿಯೂ ಇವರ ಸ್ವಭಾವದಿಂದ ಅತ್ಯಂತ ಭಿನ್ನವಾಗಿದ್ದುದರಿಂದ, ಮನೆಯಲ್ಲಿ ನಡೆಯಬೇಕಾಗಿದ್ದ ವೈದಿಕ ಸಂಬಂಧದ ಎಲ್ಲಾ ಕಾರ್ಯಗಳೂ ದೇವತಾರ್ಚನಾದಿ ಸಮಸ್ತ ಕಾರ್ಯಗಳೂ ಇವರ ಪಾಲಿಗೇ ಬಿಟ್ಟಿದ್ದುವು. ಅವರ ಪಿತಾಮಹರ ಕಾಲದಿಂದಲೂ ಕುಲಸ್ವಾಮಿಯಾಗಿ ಮನೆಯಲ್ಲಿ ಆರಾಧಿಸಲ್ಪಡುತ್ತಲಿದ್ದ ಶ್ರೀ ಸೀತಾರಾಮ ಲಕ್ಷ್ಮಣರ ದಿವ್ಯ ವಿಗ್ರಹಗಳ ಮೇಲೆ ಅವರ ಭಕ್ತಿಯು ದಿನ ದಿನಕ್ಕೆ ವೃದ್ಧಿಯಾಗತೊಡಗಿತು. ಸರ್ವದಾ ತಮ್ಮ ಇಷ್ಟದೈವವೂ ಕುಲ ದೈವವೂ ಆದ ಆ ಸ್ವಾಮಿ ಸನ್ನಿಧಿಯಲ್ಲಿಯೇ ಕುಳಿತು, ತಮ್ಮ ಗುರುಗಳಿಂದ ಉಪದೇಶ ಪಡೆದ ಶ್ರೀರಾಮತಾರಕ ಮಂತ್ರವನ್ನು ಜಪಿಸುತ್ತಾ ಕಾಲ ಕಳೆಯುವರು. ಮನೆಯಲ್ಲಿ ಪ್ರಶಸ್ತವಾದ ಒಂದು ಸ್ಥಳದಲ್ಲಿ ಉನ್ನತವಾದ ಪೀಠವೊಂದನ್ನಿಟ್ಟು, ಅದರ ಮೇಲೆ ದಿವ್ಯ ಮಂಟಪವೊಂದನ್ನು ರಚಿಸಿ, ಅದನ್ನು ಬಗೆಬಗೆಯಿಂದ ಸಿಂಗರಿಸಿ ಅದರಲ್ಲಿ ತಮ್ಮ ಹೃದಯೇಶನಾದ ಶ್ರೀ ಸೀತಾ ಲಕ್ಷ್ಮಣ ಸಮೇತ ಶ್ರೀರಾಮನ ದಿವ್ಯ ಮೂರ್ತಿಯನ್ನು ಮುಹೂರ್ತಗೊಳಿಸಿ, ಪರಮ ಸಂಭ್ರಮದಿಂದ ತ್ರಿಕಾಲ ಪೂಜೆ, ಭಜನೆ ಮುಂತಾದುವುಗಳಿಂದ ಆರಾಧಿಸುವರು. ಚಿಕ್ಕ ಪ್ರಾಯದಲ್ಲಿದ್ದರೂ, ದಂಭದರ್ಪಗಳ ಸೋಂಕಿಲ್ಲದೆ, ರಾಗದ್ವೇಷಾದಿಗಳನ್ನು ದೂರಗೈದು, ಕೇವಲ ಭಗವದಾವೇಶಯುಕ್ತರೋ

ಎಂಬಂತೆ ಸರ್ವದಾ ಜಪ, ಪೂಜೆ, ಭಜನೆ, ಕೀರ್ತನರಚನೆ ಮುಂತಾದುವು ಗಳಲ್ಲೇ ಮಗ್ನರಾಗಿರುತ್ತಿದ್ದ ಶ್ರೀ ತ್ಯಾಗರಾಜರನ್ನು ಕಂಡು, ಆ ಗ್ರಾಮದ ಅನೇಕ ಸದ್ಗೃಹಸ್ಥರು 'ಹಿರಿಯರ ವಂಶ ಗೌರವವನ್ನು ಕಾಪಾಡಿದ ಧನ್ಯ ನಿವನು' ಎಂದು ತಲೆದೂಗುತ್ತ, ಆಗಾಗ ಬಂದು ಅವರು ನಡೆಸುತ್ತಿದ್ದ ಭಜನೆಗಳಲ್ಲಿ ಕುಳಿತಿದ್ದು, ಹೃದಯಾಹ್ಲಾದಕರವಾದ ಅವರ ಮೃದುಮಧುರ ಗಾನಸುಧೆಯನ್ನು ಪಾನಮಾಡಿ ಆನಂದಿಸಿ, ನಮ್ಮ ಕಥಾನಾಯಕರನ್ನು 'ಧನ್ಯಧನ್ಯ' ಎಂದು ಮೆಚ್ಚಿಕೊಂಡು ಹೋಗುವರು. ಹೀಗೆ ಶ್ರೀ ತ್ಯಾಗ ರಾಜರ ಸೌಜನ್ಯ ಸೌಶೀಲ್ಯ ಸದ್ಗುಣಾದಿಗಳನ್ನು ಮೆಚ್ಚಿಕೊಂಡು ಹೊಗ ಳುವ ಅನೇಕಮಂದಿ ಸಜ್ಜನರು ಇದ್ದಂತೆಯೇ, ಅವರ ಆ ಸಚ್ಛೀಲವನ್ನೇ ದುರ್ಭಾವನೆಯಿಂದ ಅರ್ಥಮಾಡಿಕೊಂಡು ದೂಷಿಸುತ್ತಿದ್ದ ದುರ್ಜನ ರಾದರೂ ಇಲ್ಲದಿರಲಿಲ್ಲ. ಅವರು ನಡೆಸುವ ಪೂಜೆ ಉತ್ಸವಾದಿಗಳೆಲ್ಲವೂ ಪಟಾಟೋಪವೆಂದೂ, ಧ್ಯಾನ ಜಪಾದಿಗಳು ವೇಷಗಳೆಂದೂ, ಭಜನೆ ಕೀರ್ತನೆಗಳು ಸ್ವಪ್ರತಿಷ್ಠೆಯನ್ನು ಪ್ರದರ್ಶಿಸುವ ಉಪಕರಣಗಳೆಂದೂ ನಿಂದಿಸುವರು. ಅಂತಹ ಹಲಕೆಲವು ದೂಷಣೆಗಳು ಆ ಸಾಧುವರ್ಯರ ಕಿವಿಗೂ ಬೀಳುವುವು. ಹೃದಯ ಭೇದಕಗಳಾದ ಆ ಮಾತುಗಳನ್ನು ಕೇಳಿ ದರೂ ಆ ಜಿತೇಂದ್ರಿಯರ ಮನಸ್ಸು ವಿಕಲಗೊಳ್ಳದೆ, ತಮ್ಮಲ್ಲಿ ಅಡಗಿರುವ ದೋಷಗಳನ್ನು ಭಗವಾನನು ಆ ಮುಖದಿಂದ ತಮ್ಮ ಗಮನಕ್ಕೆ ತಂದು ಕೊಟ್ಟು ತಿದ್ದಿಕೊಳ್ಳಲು ಅವಕಾಶವನ್ನು ಕಲ್ಪಿಸಿದ್ದಕ್ಕಾಗಿ ಪರಮಕೃತಜ್ಞ ರಾಗಿ ಅಂತಹ ನಿಂದಕರನ್ನು ಮನಸಾ ವಂದಿಸುತ್ತಿದ್ದರು. ಮಾತ್ರವಲ್ಲ, ತಾವು ಆಚರಿಸುತ್ತಿರುವ ಭಜನೆ ಪೂಜೆ ಜಪ ಧ್ಯಾನಾದಿಗಳಲ್ಲಿ ಅವರು ಹೇಳುವಂ ತಹ ಲೋಪಗಳುಂಟೋ ಎಂದು ಮನಃಪೂರ್ವಕ ಶೋಧಿಸಿ, ಹುಡುಕಿ ಹುಡುಕಿ ಅವುಗಳನ್ನು ನೀಗಿಸಲು ಪ್ರಯತ್ನಿಸುವರು. ಆ ಸಂದರ್ಭದಲ್ಲಿ ಅವರು ರಚಿಸಿದ – 'ತೊಲಿ ನೇ ಜೇಸಿನ ಪೂಜಾಫಲಮು' – 'ನೇ ಮೊರ ಪೆಟ್ಟಿತೇ,' – 'ನೇ ಪೊಗಡಕುಂಟೆ' ಎಂಬ ಮುಂತಾದ ಕೀರ್ತನೆಗಳು ಆಗ ಅವರ ಮನೋಭಾವವು ಹೇಗಿದ್ದಿತೆಂಬುದನ್ನು ವ್ಯಕ್ತಗೊಳಿಸುತ್ತಿವೆ.

ಒಂದಾನೊಂದು ದಿನ ಪ್ರಾತಃಕಾಲ ಶ್ರೀ ತ್ಯಾಗರಾಜರು ಅಭ್ಯಂಜನ ಸ್ನಾನಮಾಡಲಿಚ್ಛಿಸಿ ತಲೆಗೆ ಎಣ್ಣೆಯನ್ನಿಟ್ಟುಕೊಂಡು ಉಜ್ಜಿಕೊಳ್ಳುತ್ತಿದ್ದ

ಕಾಲಕ್ಕೆ ಸರಿಯಾಗಿ, ಅಕಸ್ಮಾತ್ತಾಗಿ ಒಬ್ಬ ವೃದ್ಧ ಸನ್ಯಾಸಿಯು ಅವರ ಮನೆಯನ್ನು ಹುಡುಕಿಕೊಂಡು ಬಂದು, ಬಾಗಿಲಲ್ಲಿ ನಿಂತನು. ತ್ಯಾಗರಾಜರು, ತಮ್ಮ ಮನೆಯ ಬಾಗಿಲಿಗೆ ಅಪ್ರಾರ್ಥಿತವಾಗಿ ಬಂದ ಆ ಚತುರ್ಥಾಶ್ರಮಿಯನ್ನು ಕಂಡು ನಮಸ್ಕರಿಸಿ, ನಿಂತುಕೊಳ್ಳಲು, ಆ ಸನ್ಯಾಸಿಯು- 'ಐಯಾ ಈ ಊರಿನಲ್ಲಿ ತ್ಯಾಗರಾಜ ಎಂಬ ಹೆಸರಿನ ಒಬ್ಬ ಸಂಗೀತ ವಿದ್ವಾಂಸರು ಇದ್ದಾರೆಯಂತಲ್ಲ, ಅವರಾರು ! ಅವರ ಬಾಯಿಂದ ಸಂಗೀತವನ್ನು ಕೇಳಿ ಹೋಗಬೇಕೆಂಬ ಅಪೇಕ್ಷೆಯಿಂದ ನಾನು ಬಹುದೂರದಿಂದ ಬಂದೆನು' ಎಂದು ನುಡಿದನು. ತ್ಯಾಗರಾಜರು ಆ ಸನ್ಯಾಸಿಯನ್ನು ಕುರಿತು- 'ಸ್ವಾಮಿಾ ತಾವು ಇಷ್ಟುಮಟ್ಟಿಗೆ ಅಭಿಮಾನವಿಟ್ಟು ಬಂದ ಆ ತ್ಯಾಗರಾಜ ನೆಂಬುವನು ನಾನೇ ! ನಾನೇನು ಸಂಗೀತದಲ್ಲಿ ಅಷ್ಟುಮಟ್ಟಿನ ತಿಳುವಳಿಕೆಯುಳ್ಳವನಲ್ಲ. ಆದರೂ ಬಂದಷ್ಟುಮಟ್ಟಿಗೆ ಹಾಡುತ್ತೇನೆ, ಕೇಳಬೇಕು' ಎಂದು ನುಡಿದು, ಅವರ ಅನುಮತಿಯನ್ನು ಪಡೆದು ತಂಬೂರಿಯನ್ನು ತೆಗೆದುಕೊಂಡು ಶ್ರುತಿಮಾಡಿ ಗಾನಮಾಡಲು ಪ್ರಾರಂಭಿಸಿದರು. ಒಂದು ಮುಹೂರ್ತಕಾಲ ಕಲ್ಲು ಮರಗಳೂ ಕರಗುವಂತಹ ಗಂಧರ್ವ ಗಾನಮಾಡಿ ಅಮೃತ ಧಾರೆಯನ್ನು ಸುರಿಸಿಬಿಟ್ಟರು. ಆ ಅಮಾನುಷ ಗಾನ ಪ್ರೌಢಿಮೆಯನ್ನು ಕೇಳಿ ಪರಮಾನಂದಗೊಂಡ ಆ ಸನ್ಯಾಸಿಯು - 'ಅಪ್ಪಾ ತ್ಯಾಗರಾಜರೇ ನಿಮ್ಮ ಗಾನ ಮಾಧುರ್ಯವು ಅಮೋಘವಾದುದು ! ಈ ಗಾನ ರಸ ಪಾನದಿಂದ ಬಹು ಸಂತೋಷವನ್ನು ಅನುಭವಿಸಿದೆನು. ನಿಮಗೆ ಸಮನಾಗಿ ಗಾನ ಮಾಡುವರೆಂದರೆ ನೀವೇ ಸರಿ !' ಎಂದು ಹೊಗಳಿ, ತಮ್ಮ ಬಳಿಯಿಟ್ಟುಕೊಂಡಿದ್ದ ಒಂದು ಗ್ರಂಥವನ್ನು ಅವರ ಕೈಗೆ ಕೊಟ್ಟು-'ಅಪ್ಪಾ ನಾನು ಕಾವೇರಿಗೆ ಹೋಗಿ ಅನುಷ್ಠಾನಗಳನ್ನು ತೀರಿಸಿಕೊಂಡು ಬಂದು, ಈ ದಿನ ನಿಮ್ಮ ಮನೆಯಲ್ಲೇ ಭಿಕ್ಷೆಯನ್ನು ಸ್ವೀಕರಿಸಿ, ಮುಂದೆ ಹೋಗುತ್ತೇನೆ' ಎಂದು ಹೇಳಿ ಹೊರಟುಹೋದರು. ತ್ಯಾಗರಾಜರು ಆ ದಿನದ ಅಪೂರ್ವ ಸಂಭವವನ್ನು ಕುರಿತು ಪರಮ ಸಂಭ್ರಮಪಟ್ಟು ಶೀಘ್ರವಾಗಿ ಅಭ್ಯಂಜನಾದಿಗಳನ್ನು ತೀರಿಸಿಕೊಂಡು ಸ್ವಾಮಿಯ ನಿತ್ಯವಿಧಿಯ ಆರಾಧನೆಗಳನ್ನೂ ಸಲ್ಲಿಸಿ, ಯತಿಗಳಿಗಾಗಿ ಕಾದುಕೊಂಡು ಕುಳಿತರು. ಮಧ್ಯಾಹ್ನವಾಯಿತು. ಅಪರಾಹ್ಣವಾಯಿತು. ಸನ್ಯಾಸಿಗಳು ಬರಲೇ ಇಲ್ಲ. ತರುವಾಯ ಅವರಿ

ಗಾಗಿ ಕಾವೇರೀ ತೀರಕ್ಕೆ ಜನರನ್ನು ಕಳುಹಿಸಿ ನೋಡಿದರು. ಅಲ್ಲಿರಲಿಲ್ಲ. ಊರಲ್ಲೆಲ್ಲ ಹುಡುಕಿಸಿದರು. ಅಂದು ಆ ಊರಿಗೆ ಯಾವ ಸನ್ಯಾಸಿಯೂ ಬಂದಂತೆ ಯಾರೂ ಕಾಣಲಿಲ್ಲವೆಂದು ವರ್ತಮಾನ ತಿಳಿಯಿತು. ಇನ್ನೂ ನೋಡೋಣವೆಂದುಕೊಂಡು, ಸಾಯಂಕಾಲದ ಪೂಜೆ ಭಜನೆ ಮುಂತಾದ ಕ್ರಿಯೆಗಳನ್ನೂ ತೀರಿಸಿ, ತ ವರೆಗೆ ಉಪವಾಸವಾಗಿದ್ದುದರಿಂದ ಹಾಗೇ ಸ್ವಲ್ಪ ಹೊತ್ತು ಸ್ವಾಮಿ ಸನ್ನಿಧಿಯಲ್ಲೇ ಮಲಗಿ ನಿದ್ರಿಸಿದರು. ಆ ನಿದ್ರೆಯಲ್ಲಿ ಅವರಿಗೆ ಒಂದು ಕನಸಾಯಿತು. ಅದರಲ್ಲಿ ಪ್ರಾತಃಕಾಲದಲ್ಲಿ ತಮ್ಮ ಮನೆಗೆ ಬಂದಿದ್ದ ಸನ್ಯಾಸಿಯೇ ಪುನಃ ಕಾಣಿಸಿಕೊಂಡು - 'ಅಪ್ಪಾ, ತ್ಯಾಗರಾಜಾ ಈ ದಿನ ನಿನಗೆ ದರ್ಶನಕೊಟ್ಟ ನಾನು ದೇವರ್ಷಿ ನಾರದನು. ನಿನ್ನ ಭಕ್ತಿ ಜ್ಞಾನ ವೈರಾಗ್ಯ ಶೀಲ ಸ್ವಭಾವಾದಿಗಳನ್ನು ಕಂಡು ಪರಮ ಸಂತೋಷಪಟ್ಟು ನಿನಗೆ ದರ್ಶನಕೊಟ್ಟೆನು. ಅಲ್ಲದೆ, ಭುವನಮೋಹಕವಾದ ನಿನ್ನ ಸಂಗೀತವನ್ನೂ ಕೇಳಿ ಪರಮಾನಂದವಾಯಿತು. ನಿನ್ನ ಬಳಿ ಈ ಪ್ರಾತಃಕಾಲ ನಾನು ಕೊಟ್ಟು ಹೋದ ಗ್ರಂಥಕ್ಕೆ ಸ್ವರಾರ್ಣವವೆಂದು ಹೆಸರು. ಅದು ಅತ್ಯಪೂರ್ವ ಸಂಗೀತ ಗ್ರಂಥವು. ಆ ಗ್ರಂಥರತ್ನದ ನಿಶ್ಚಯವಾದ ಬೆಲೆಯನ್ನು ಕಟ್ಟುವ ಯೋಗ್ಯತೆಯೂ, ಅದರಲ್ಲಿರುವ ಸಂಗತಿಯನ್ನು ತಿಳಿದುಕೊಳ್ಳುವ ಸಾಮರ್ಥ್ಯವೂ ನಿನಗೆ ಮಾತ್ರವೇ ಉಂಟು. ನೀನು ಆ ಗ್ರಂಥವನ್ನು ಆಮೂಲಾಗ್ರ ನೋಡಿ, ಲೋಕದಲ್ಲಿ ಸಂಗೀತಶಾಸ್ತ್ರವನ್ನು ಪುನರುದ್ಧಾರಮಾಡಿ ಚಿರ ಯಶಸ್ಸಂಪಾದನೆ ಮಾಡು. ನಿನ್ನ ಮೇಲಿರುವ ಅನಿರ್ವಾಚ್ಯ ಪ್ರೇಮದಿಂದ ಆ ಗ್ರಂಥವನ್ನು ನಿನಗೆ ಬಹುಮಾನವಾಗಿ ಕೊಟ್ಟಿದ್ದೇನೆ' ಎಂದು ನುಡಿದು ಅದೃಶ್ಯನಾದನು.

ಕಣ್ಣೆದುರಿಗೆ ನಿಂತು ಮಾತನಾಡುತ್ತಿದ್ದ ಯತಿಯು ತಕ್ಷಣ ಕಾಣಿಸದಂತಾದುದರಿಂದ, ತ್ಯಾಗರಾಜರು ಗಾಬರಿಗೊಂಡಂತಾಗಿ ಒಡನೆ ಕಣ್ತೆರೆದರು. ಪಕ್ಕದಲ್ಲಿದ್ದ - ಪ್ರಾತಃಕಾಲದಲ್ಲಿ ತಮಗೆ ಆ ಸನ್ಯಾಸಿಯಿಂದ ಕೊಡಲ್ಪಟ್ಟಿದ್ದ ಪುಸ್ತಕದಮೇಲೆ ದೃಷ್ಟಿಹೋಯಿತು. ಅವರಿಗೆ ಆಶ್ಚರ್ಯವುಂಟಾಯಿತು. ಪುಸ್ತಕವನ್ನು ತೆರೆದು ನೋಡಲು, ಅದರಲ್ಲಿ ಅವರು ಈವರೆಗೆ ಕಾಣದಿದ್ದ ಅನೇಕ ಅಪೂರ್ವ ವಿಚಾರಗಳು ಕಂಡುಬಂದುವು.

ಅದು ಅನ್ವರ್ಥ, ಸ್ವರಾರ್ಣವ (ಸ್ವರ ಸಮುದ್ರ) ವೇ ಆಗಿದೆಯೆಂದು ತಿಳಿದು, ಶ್ರೀ ತ್ಯಾಗರಾಜರು, ದೇವರ್ಷಿ ನಾರದರಿಗೆ ತಮ್ಮ ಮೇಲುಂಟಾದ ಅಪೂರ್ವ ಪ್ರೇಮಕ್ಕಾಗಿ ಪರಮಾನಂದಪಟ್ಟು, ಅವರನ್ನು ಹಲವು ಬಾರಿ ಮನಸಾ ನಮಸ್ಕರಿಸಿ 'ವರನಾರದ - ನಾರಾಯಣ' 'ಶ್ರೀ ನಾರದ' 'ನಾರದ ಗಾನ' ಎಂಬ ಮುಂತಾದ ಕೀರ್ತನೆಗಳನ್ನು ಹಾಡಿ ಅವರ ಉಪಕಾರವನ್ನು ಸ್ಮರಿಸಿದರು.—'ಸ್ವರರಾಗ ಸುಧಾರಸ ಯುತಭಕ್ತಿ - ಸ್ವರ್ಗಾಪ ವರ್ಗ ಮುರಾ - ಓ ಮನಸಾ' ಎಂಬ ಕೃತಿಯಲ್ಲಿ, ನಾರದರಿಂದ ಅನುಗ್ರಹಿಸ ಲ್ಪಟ್ಟ, 'ಸ್ವರಾರ್ಣವ' ಗ್ರಂಥದಾನಕ್ಕಾಗಿ ಉಪಕಾರ ಸ್ಮರಣೆಯೂ ಸೂಚಿತವಾಗಿದೆ.

ಸ್ವರಾರ್ಣವವೆಂಬ ಈ ಗ್ರಂಥವು ಪೌರ್ವಾತ್ಯ ಸಂಗೀತ ಶಾಸ್ತ್ರದಲ್ಲಿ ಬಹು ಪುರಾತನ ಗ್ರಂಥವೆಂದು ಹೇಳಲ್ಪಟ್ಟಿದೆ. ಆ ಗ್ರಂಥವನ್ನು ವಿಮರ್ಶಿ ಸುತ್ತಾ, ತ್ಯಾಗರಾಜರೇ, ಅದು ಪಾರ್ವತೀ ದೇವಿಗೆ ಪರಮೇಶ್ವರನಿಂದ ಉಪದೇಶಿಸಲ್ಪಟ್ಟುದೆಂದು ಹೇಳಿದ್ದಾರೆ. ಈಗ ಆ ಶ್ರೇಷ್ಠ ಗ್ರಂಥವು ಮಾನವ ದೃಷ್ಟಿಗೆ ಅಗೋಚರವಾಗಿದೆಯೆಂಬುದು ಶೋಚನೀಯ ವಿಚಾ ರವು. ಅದು ಶ್ರೀ ತ್ಯಾಗರಾಜರ ತರುವಾಯ ಏನಾಯಿತೆಂಬ ಸಂಗತಿಯು ತಿಳಿಯದಾದರೂ, ಅದರಲ್ಲಿ ಸ್ವರಗಳು ಅವುಗಳ ಸ್ವಭಾವ, ಸ್ವರರೀತಿಗಳು, ಸ್ವರಭೇದಗಳು, ಸ್ವರಪ್ರಸ್ತಾರಗಳು ಇವೆಲ್ಲವುಗಳ ವಿಸ್ತಾರವಾದ ವಿವರಣೆ ಯಿದ್ದಿತೆಂದೂ, ಅದನ್ನು ತಾವು ಆದ್ಯಂತವಾಗಿ ಪಾಠ ಮಾಡಿದ್ದೆವೆಂದೂ ತಿಳಿಸುತ್ತಾರೆಯಾಗಿ, ಆಧುನಿಕರು ಸ್ವರ ಶಿಕ್ಷಣದಲ್ಲಿ ಶ್ರೀ ತ್ಯಾಗರಾಜರು ನಡೆದ ಮಾರ್ಗವನ್ನನುಸರಿಸಿ ನಡೆವುದಾದರೆ, ಸ್ವರಾರ್ಣವದ ಮುಖ್ಯ ತತ್ತ್ವ ವನ್ನು ಅನುಸರಿಸಿದಂತೆಯೇ ಆಗುವುದೆಂದು ನಂಬಬಹುದು.

ಸ್ವರಾರ್ಣವ ಗ್ರಂಥ ಪರಿಚಯದಿಂದ ಶ್ರೀ ತ್ಯಾಗರಾಜರಿಗೆ ಸಂಗೀತ ಶಾಸ್ತ್ರದಲ್ಲಿ ಅಸಮಾನ ಪಾಂಡಿತ್ಯ ಪ್ರಾಪ್ತವಾಯಿತು. ಸಪ್ತ ಸ್ವರಗಳೂ ಭಗವದ್ಗುಣಾನುಭವಕ್ಕೆ ಸಾಧಕಗಳೆಂಬುದನ್ನು ಪ್ರತಿಪಾದಿಸುತ್ತಾ, ಆ ಸ್ವರಾಧಿ ದೇವತೆಗಳನ್ನು ಈ ಕೀರ್ತನೆಯಿಂದ ಭಜಿಸುತ್ತಾರೆ.

## ಜಗನ್ಮೋಹಿನೀ ರೂಪಕತಾಳ

ಪ. ಶೋಭಿಲ್ಲು ಸಪ್ತಸ್ವರ - ಸುಂದರುಲ ಭಜಿಂಪವೇ ಮನಸ ಶೋ.

ಅ. ನಾಭಿ ಹೃತ್ಕಂಠ ರಸನ - ನಾಸಾದುಲಯಂದು ಶೋ.

ಚ. ಧರ ಋಕ್ಸಾಮಾದುಲಲೋ - ವರಗಾಯಿತ್ರೀ ಹೃದಯಮುನ
ಸುರ ಭೂಸುರ ಮಾನಸಮುನ-ಶುಭ ತ್ಯಾಗರಾಜುನಿ ಯೆಡ ಶೋ.

"ಎಲೈ ಮನಸ್ಸೇ ನಾಭಿ ಹೃದಯ ಕಂಠ ನಾಲಿಗೆ ನಾಸಿಕ ವೊದಲಾದ ಸ್ಥಳಗಳಲ್ಲಿ ಪ್ರಕಾಶಿಸುತ್ತಿರುವ ಏಳು ಸ್ವರಗಳ ಅಧಿ ದೇವತೆಗಳನ್ನೂ ಸೇವಿಸು. ಭೂಮಿಯಲ್ಲಿ-ಋಗ್ವೇದ ಸಾಮ ವೇದಾದಿಗಳಲ್ಲೂ, ಶ್ರೇಷ್ಠವಾದ ಗಾಯಿತ್ರೀ ಮಂತ್ರಗರ್ಭದಲ್ಲೂ, ದೇವ ಬ್ರಾಹ್ಮಣರ ಹೃದಯದಲ್ಲೂ, ಮಂಗಳ ಕರನಾಗ ಶ್ರೀ ತ್ಯಾಗರಾಜ ಸ್ವಾಮಿಯಲ್ಲೂ ಶೋಭಿಸುತ್ತಿರುವ ಈ ಸಪ್ತ ಸ್ವರಾಧಿದೇವತೆಗಳನ್ನು (ಜನ್ಮಸಾರ್ಥಕ್ಯಕ್ಕಾಗಿ) ಸೇವಿಸು' ಎಂದು ಬೋಧಿಸಿದ್ದಾರೆ.

ಸ್ವರಾರ್ಣವದಲ್ಲಿ ವರ್ಣಿತವಾದ - ಆವರೆಗೆ ಪಂಡಿತ ಲೋಕಕ್ಕೇ ಅಭಾವವೆನ್ನಿಸಿದ್ದ ಹಲವು ಅಪೂರ್ವ ಸ್ವರಪ್ರಸ್ತಾರಗಳ ಪರಿಚಯದಿಂದ ಶ್ರೀ ತ್ಯಾಗರಾಜರು ನವೀನ ನವೀನ ರಾಗ ತಾಳಗಳಲ್ಲಿ ಹಲವು ಕೀರ್ತನೆಗಳನ್ನು ರಚಿಸಿ, ಶ್ರೋತೃಜನ ಮನೋರಂಜನೆಯಾಗುವಂತೆ ಹಾಡುತ್ತಿದ್ದುದು ಅಸೂಯಾಪರರಾದ ಅನೇಕರಿಗೆ, ಅವರನ್ನು ಆಕ್ಷೇಪಿಸಲು ಹೊಸದೊಂದು ಮಾರ್ಗವನ್ನು ಕಲ್ಪಿಸಿಕೊಟ್ಟಂತಾಯಿತು. ಈವರೆಗೆ ಅನಾದಿಯಾಗಿ ನಡೆದು ಬಂದ ಸಂಗೀತ ಶಾಸ್ತ್ರ ಪದ್ಧತಿಗಳನ್ನು ಅತಿಕ್ರಮಿಸಿ, ಈತನು ಸ್ವಯಂ ಪ್ರತಿಷ್ಠೆಯನ್ನು ಪ್ರದರ್ಶಿಸಲು ಈ ಬಗೆಯ ಹಲವು ನೂತನ ರಾಗಭೇದಗಳನ್ನು ಸೃಷ್ಟಿಸಿ, ಸಂಗೀತ ಪ್ರಪಂಚದಲ್ಲಿ ಪ್ರಳಯಕಾರಿಯಾದ ಸುಧಾರಣೆಯನ್ನು ಮಾಡುತ್ತಿರುವನೆಂದು ಅವರು ದೂರಿದರು. ಈ ದೂಷಣೆಯನ್ನು ಕೇಳಿ ಶ್ರೀ ತ್ಯಾಗರಾಜರು ಭಕ್ತಿಲೇಶವೂಯಿಲ್ಲದೆ, ಕೇವಲ ಸಂಗೀತ ಶಾಸ್ತ್ರ ಜ್ಞಾನವು ಪ್ರಯೋಜನವಿಲ್ಲದ್ದೆಂದು ತಿಳಿಸುವ ಈ ಕೆಳಗಿನ ಕೀರ್ತನೆಯನ್ನು ಹೇಳಿರುತ್ತಾರೆ.

## ಧನ್ಯಾಸಿ ಆದಿತಾಳ

ಪ. ಸಂಗೀತಜ್ಞಾನಮು ಭಕ್ತಿ ವಿನಾ-ಸನ್ಮಾರ್ಗಮು ಗಲದೇ ಮನಸಾ ಸ.

ಅ. ಭೃಂಗಿ ನಟೇಶ ಸಮೀರಜ ಘಟಜ ಮ - ತಂಗ ನಾರದಾದು [ ಲುಪಾಸಿಂಚು ಸ.

ಚ. ನ್ಯಾಯಾನ್ಯಾಯಮುಲು ದೆಲಿಯುನು, ಜಗಮುಲು
ಮಾಯಾಮಯಮು ಲನಿ ತೆಲಿಯುನು, ದುರ್ಗುಣ
ಕಾಯಜಾದಿ ಷಡ್ರಿಪುಲಜಯಿಂಚು
ಕಾರ್ಯಮು ದೆಲಿಯುನು ತ್ಯಾಗರಾಜುಸಕೇ ಸ.

'ನಂದೀಶ, ನಟೇಶ, ಆಂಜನೇಯ, ಅಗಸ್ತ್ಯ, ಮತಂಗಮಹರ್ಷಿ, ನಾರದಾದಿಗಳು ಉಪಾಸಿಸಿದ ಈ ಸಂಗೀತ ಜ್ಞಾನವು ಭಕ್ತಿಯೊಂದರ ಒಡಗೂಡಿರದಿದ್ದರೆ ಯಾವ ಪ್ರಯೋಜನವನ್ನೂ ಕೊಡಲಾರದು. ಸಂಗೀತಜ್ಞಾನ ಮಾತ್ರವಲ್ಲ, ನ್ಯಾಯಾನ್ಯಾಯ ವಿಮರ್ಶಕ ಜ್ಞಾನವೂ ಪ್ರಪಂಚದಲ್ಲಿ ಮಾಯಾಮಾಯ ಸತ್ಯಾಸತ್ಯಗಳನ್ನು ವಿಮರ್ಶಿಸಿ ತಿಳಿವಂತಹ ಸೂಕ್ಷ್ಮ ಜ್ಞಾನವೂ, ಕಾಮಾದಿ ಷಡ್ರಿಪುಗಳನ್ನು ಜಯಿಸುವಂತಹ ಉಪಾಯವೂ ಈ ಎಲ್ಲವೂ ತಿಳಿದಿದ್ದರೂ ಭಗವದ್ಭಕ್ತಿಯೊಂದು ಮಾತ್ರವಿರದಿದ್ದರೆ ಅಂತಹ ಜ್ಞಾನವು ಅಹಂಕಾರ ಮಮಕಾರಗಳನ್ನು ವೃದ್ಧಿಗೊಳಿಸುವುದಾಗುವುದು' ಎಂದು ಇದರಲ್ಲಿ ಸೂಚಿಸುತ್ತಾರೆ.

ಸಂಗೀತ ಶಾಸ್ತ್ರಾಧ್ಯಯನದಲ್ಲೂ, ತಮ್ಮಲ್ಲಿ ಪ್ರಕಟವಾದ ಆ ಶಾಸ್ತ್ರ ಜ್ಞಾನದ ಉಪಯೋಗದಲ್ಲೂ ಈ ಬಗೆಯ ಧ್ಯೇಯ-ಮನೋಭಾವಗಳನ್ನುಂಟಾಗಿದ್ದ, ಆ ಭಕ್ತ ಶ್ರೇಷ್ಠರು ಭಗವತ್ಪರ ಸ್ತೋತ್ರವಲ್ಲದ ಮತ್ತೇನನ್ನೂ ಎಂದೂ ಹಾಡಿದವರಲ್ಲ. ಹೀಗೆ ಸದಾ ಭಕ್ತಿ ಪರವಶರಾಗಿ ನವ ನವೀನ ಕೀರ್ತನೆಗಳನ್ನು ರಚಿಸಿ ಶ್ರೀರಾಮನನ್ನು ಸ್ತುತಿಸುತ್ತಲೂ, ಗುರುಮುಖದಿಂದ ತಮಗೆ ಲಭ್ಯವಾಗಿದ್ದ ತಾರಕಮಂತ್ರವನ್ನು ಜಪಿಸುತ್ತಲೂ ಕಾಲ ಕಳೆಯುತ್ತಿರುವಲ್ಲಿ ಒಂದಾನೊಂದು ದಿನ, ಯಾರೋ ಬಂದು ಅವರ ಮನೆಯ ಹೊರಬಾಗಿಲನ್ನು ತಟ್ಟಿದಂತೆ ಶಬ್ದವಾಯಿತಂತೆ! ಒಡನೆ ತ್ಯಾಗರಾಜರೇ ಬಾಗಿಲವರೆಗೆ ನಡೆದು ಕದವನ್ನು ತೆರೆಯಲು, ಹೊರಗೆ ವಿಶ್ವಾಮಿತ್ರ ಮಹ

ಷಿಗಳೊಂದಿಗೆ ಯಾಗ ಸಂರಕ್ಷಣಾರ್ಥವಾಗಿ-ತಮ್ಮನಾದ ಲಕ್ಷ್ಮಣನೊಂದಿಗೆ ಪ್ರಯಾಣ ಸನ್ನದ್ಧನಾಗಿ ಸಾಗುತ್ತಿದ್ದ ಸಂದರ್ಭದ ವೇಷದಲ್ಲಿ ಒಪ್ಪುತ್ತಿದ್ದ ಶ್ರೀರಾಮಚಂದ್ರನ ದಿವ್ಯ ಸುಂದರ ವಿಗ್ರಹವು, ಪ್ರತ್ಯಕ್ಷವಾಗಿ ನಿಂತಿದ್ದಂತೆ ಕಾಣಿಸಿತು. ತ್ಯಾಗರಾಜರು ತಾವು ಕನಸುಕಾಣುತಿದ್ದೇವೋ ಅಥವ ಅದು ನಿಶ್ಚಯವೋ ಎಂದುಕೊಂಡು ಜಾಗ್ರತರಾಗುವುದರೊಳಗಾಗಿ ಆ ರೂಪವು ಅದೃಶ್ಯವಾಗಿ ಬಿಟ್ಟಿತು. ಹೀಗೆ ಶ್ರೀರಾಮನು ಆ ಭಕ್ತೋತ್ತಮರಿಗೆ ದರ್ಶನಕೊಟ್ಟ ವೇಳೆಗೆ ಅವರು, ತಾರಕಮಂತ್ರೋಪದೇಶ ಪಡೆದು ಇಪ್ಪತ್ತು ವರ್ಷಕಾಲವಾಗಿದ್ದಿತಂತೆ! ಈ ಇಪ್ಪತ್ತು ವರ್ಷಗಳಲ್ಲಿ ಪ್ರತಿದಿನವೂ ಒಂದು ಲಕ್ಷ ಇಪ್ಪತ್ತೈದು ಸಹಸ್ರ ತಾರಕನಾಮ ಪಾರಾಯಣ ಮಾಡುತ್ತ ತೊಂಬತ್ತಾರುಕೋಟಿ ನಾಮ ಜಪಮಾಡಿ ಶ್ರೀರಾಮಾರ್ಪಣೆ ಮಾಡಿದ್ದರೆಂದು ಪ್ರತೀತಿಯುಂಟು. ಹೀಗೆ ಅಖಂಡ ನಾಮಜಪಕ್ಕೆ ಸ್ವಾಧೀನನಾದ ಶ್ರೀ ಸ್ವಾಮಿಯು ಮೇಲ್ಕಂಡಂತೆ ದರ್ಶನವಿತ್ತು ಕ್ಷಣಮಾತ್ರದಲ್ಲೇ ಕಣ್ಮರೆಯಾದೊಡನೆಯೇ ಅವರು ತಾಯನ್ನು ಬಿಟ್ಟ ಎಳೆಗರುವಿನಂತೆ—'ಏಲ ನೀ ದಯರಾದು' ಎಂಬ ಕೃತಿಯನ್ನು ರಚಿಸಿ, ಕಣ್ಣುಗಳಿಂದ ಆನಂದಾಶ್ರು ದುಃಖಾಶ್ರುಗಳೆರಡೂ ಮಿಳಿತವಾಗಿ ಪ್ರವಾಹ ರೂಪವಾಗಿ ಹರಿಯುತ್ತಿರಲು- 'ಶ್ರೀರಾಮಾ ನನ್ನ ಮೇಲೆ ನಿನಗೇಕೆ ದಯೆಬಾರದು,? ನಿನ್ನ ದರ್ಶನವಾಗುವುದಕ್ಕೆ ಪೂರ್ವದಲ್ಲಿ ಒಂದು ಯುಗ ಕಾಲವನ್ನು ಕ್ಷಣದಂತೆ ಕಳೆದೆನಾದರೂ, ಈಗ ನಿನ್ನನ್ನು ದರ್ಶಿಸಿ ಕಾಣದಂತಾದ ತರುವಾಯ ಇನ್ನು ಒಂದು ಕ್ಷಣವು ಒಂದು ಯುಗವಾಗಿ ಪರಿಣಮಿಸಿದೆ. ಭಕ್ತನನ್ನು ಪರೀಕ್ಷಿಸಲು ಇದು ಸಮಯವಲ್ಲ. ಶ್ರೀರಾಮಾ ದಯಮಾಡು' ಎಂದು, ತಾವು ಪ್ರತ್ಯಕ್ಷ ಕಂಡು ಅನುಭವಿಸಿದ ಶ್ರೀರಾಮಮೂರ್ತಿಯ ರೂಪ ಗುಣ ವಿಭೂತಿಗಳ ದಿವ್ಯ ಸೌಭಾಗ್ಯವನ್ನು ವರ್ಣಿಸಿದರು. ಆ ಕೃತಿರಾಜದ ಸೌಂದರ್ಯದ ಸೊಬಗನ್ನೂ, ಭಗವದಾವೇಶಯುಕ್ತರಾದ ಅವರ ವದನಾರವಿಂದದಿಂದ, ವರ್ಷಾಕಾಲದ ವಾರಿಧಾರೆಯೋ ಎಂಬಂತೆ ಲೇಶಮಾತ್ರವೂ ತಡೆಬಡೆಯಿಲ್ಲದೆ ಹೊರಬಿದ್ದ ಮನೋಹರ ಪದಪುಂಜ ರಂಜಿತವಾದ ಆ ಕೀರ್ತನೆಯ ವೈಖರಿಯನ್ನೂ ಇಲ್ಲಿ ಸಾಕ್ಷಾತ್ತಾಗಿ ಕೊಡಲು ಬಯಸುತ್ತೇವೆ.

## ಅಠಾಣಾ ಆದಿತಾಳ

ಪ. ಏಲ ನೀ ದಯ ರಾದು ಪರಾಕು ಜೇಸೆದ - ವೇಲ ಸಮಯಮು
[ ಕಾದು ಏ.

ಅ. ಬಾಲಕನಕಮಯಚೇಲ ಸುಜನ ಪರಿ - ಪಾಲ ಶ್ರೀರಮಾಲೋಲ
[ ವಿಧೃತಶರ
ಜಾಲಶುಭದ ಕರುಣಾಲವಾಲ ಘನ - ನೀಲ ನವ್ಯವನಮಾಲಿಕಾ
[ ಭರಣ ಏ.

ಚ. ರಾರಾ ದೇವಾದಿದೇವ - ರಾರಾ ಮಹಾನುಭಾವಾ - ರಾರಾ
[ ರಾಜೀವನೇತ್ರ ರಘುವರಪುತ್ರ
ಸಾರತರ ಸುಧಾಪೂರ ಹೃದಯ ಪರಿ - ವಾರ ಜಲಧಿ ಗಂಭೀರ
[ ದನುಜ ಸಂ
ಹಾರ ಮದನ ಸುಕುಮಾರ ಬುಧಜನ ವಿ - ಹಾರ ಸಕಲ ಶ್ರುತಿ
[ ಸಾರ ನಾದುಪೈ ಏ.

೨. ರಾಜಾಧಿರಾಜ ಮುನಿ - ಪೂಜಿತಪಾದ ರವಿ - ರಾಜ ಲೋಚನ
ಶರಣ್ಯಾ ಅತಿ ಲಾವಣ್ಯಾ
ರಾಜಧರನುತ ವಿರಾಜತುರಗ ಸುರ - ರಾಜ ವಂದಿತ ಪದಾ ಜ
[ ಜನಕ ದಿನ
ರಾಜಕೋಟಿ ಸಮತೇಜ ದನುಜಗಜ-ರಾಜ ನಿಚಯಮೃಗರಾಜ
[ ಜಲಜಮುಖ ಏ.

೩. ಯಾಗ ರಕ್ಷಣ ಪರಮ - ಭಾಗವತಾರ್ಚಿತ - ಯೋಗೀಂದ್ರ
ಸುಹೃದ್ಭಾವಿತ - ಆದ್ಯಂತರಹಿತ
ನಾಗಶಯನ ವರನಾಗವರದ ಪು - ನ್ನಾಗ ಸುಮಧರ ಸದಾ
[ ಘಮೋಚನ ಸ
ದಾ ಗತಿಜಧೃತ ಪದಾಗಮಾಂತ ಚರ - ರಾಗ ರಹಿತ ಶ್ರೀ ತ್ಯಾಗ
[ ರಾಜನುತ ಏ.

ತರುವಾಯ ಶ್ರೀರಾಮಮೂರ್ತಿಯನ್ನು ಪುನಃ ದರ್ಶಿಸಬೇಕೆಂಬ ಅಪೇಕ್ಷೆಯು ಮನಸ್ಸನ್ನು ಬಾಧಿಸತೊಡಗಲು-'ಎನ್ನಡು ಜೂತುನೋ' 'ಏನ ಪೇ ಓ ಮನಸಾ' 'ಉಂಡೇದಿ ರಾಮುಡೊಕಡು' 'ಮನಸಾ ಶ್ರೀರಾಮ ಚಂದ್ರುನಿ' 'ಮರವಕುರಾ' 'ಪರಲೋಕ ಸಾಧನಮೇ ಮನಸಾ' 'ಭಜರೇ ಭಜ ಮಾನಸ' 'ಕಡತೇರರಾದಾ' 'ಭಜನ ಸೇಯರಾದಾ' ಎಂಬ ಹಲವು ಕೀರ್ತನೆಗಳನ್ನು ರಚಿಸಿ ಪಾಡಿ ತಮ್ಮ ಮನಸ್ಸಿನ ತಾಪವನ್ನು ಪರಿಹರಿಸಿಕೊಳ್ಳಲು ಯತ್ನಿಸುತ್ತಿದ್ದರು.



## ಅಧ್ಯಾಯ ೪ " ಎಂದರೋ ಮಹಾನುಭಾವುಲು "

ಅನುದಿನವೂ ಕ್ರಮ ತಪ್ಪದೆ ಸಾಗುತ್ತಿದ್ದ ತ್ರಿಕಾಲ ಪೂಜೆ ಭಜನೆಗಳಾದ ತರುವಾಯ ಪ್ರತಿದಿನ ರಾತ್ರಿಯಲ್ಲಿ ತಾವು ಮಲಗುವುದಕ್ಕೆ ಮುಂಚೆ ಹಣ್ಣು ಹಾಲು ತಾಂಬೂಲಗಳನ್ನು ಶ್ರೀರಾಮಚಂದ್ರನ ಸನ್ನಿಧಿಯಲ್ಲಿಟ್ಟು-'ಆರಗಿಂಪವೇ, ಪಾಲಾರಗಿಂಪವೇ' 'ಪಡೆಮು ಸೇಯರಾವೇ' ಎಂಬ ಹಲವು ಪದಗಳನ್ನು ಪಾಡಿ ಉಪಚರಿಸಿ, ತೆರೆಯನ್ನು ಮುಚ್ಚಿ ಮಲಗಿ ನಿದ್ರಿಸುವರು. ಪ್ರಾತಃಕಾಲ ಎದ್ದು, ಪುನಃ ಸ್ವಾಮಿ ದರ್ಶನ ಮಾಡುವಾಗ್ಗೆ ಹಾಲು ಹಣ್ಣುಗಳಲ್ಲಿ ಅರ್ಧಭಾಗ ಮಾತ್ರವೂ, ವೀಳೆಯದ ತಟ್ಟೆಯಲ್ಲಿ ಅಗಿದುಗುಳಿದ ತಂಬೂಲವೂ ಇರುತ್ತಿದ್ದಿತಂತೆ! ಈ ಪ್ರಸಾದವನ್ನು ಪರಮ ಭಕ್ತಿಯಿಂದ ಕೈಕೊಂಡು ತಾವು ಭುಜಿಸುತ್ತಿದ್ದರಂತೆ! ತಮ್ಮನ್ನು ಇಷ್ಟುಮಟ್ಟಿನ ಪ್ರತ್ಯಕ್ಷರೀತಿಯಲ್ಲಿ ಅನುಗ್ರಹಿಸುತ್ತಿದ್ದ ಶ್ರೀರಾಮಚಂದ್ರನಲ್ಲಿ ಅನಿರ್ವಾಚ್ಯ ಭಕ್ತಿ ಪ್ರವಾಹವು ಉಕ್ಕಿ ಉಕ್ಕಿ ಬರುತ್ತಿರಲು - 'ರಾಮುನಿ ಸಮಾನಮೆವರು' 'ಮೇರುಸಮಾನ ಧೀರವರದ ರಘುವೀರ ಜೂತಮು ರಾರಾ' 'ಕರುಣಾಸಮುದ್ರಾನನು ಕಾವವೇ ಶ್ರೀರಾಮಭದ್ರಾ' 'ಮೋಹನರಾಮಾ ಮುಖಜಿತಸೋಮಾ ಮುದ್ದುಗ ಪಲ್ಕುಮಾ' ಎಂಬ ಹಲವು ಕೀರ್ತನೆಗಳನ್ನು ಪಾಡಿ ದರ್ಶನೋತ್ಸುಕರಾಗಿ ಹಂಬಲಿಸುವರು. ಏಕಾದಶಿಯ ದಿನ ಉಪ

ವಾಸವಿದ್ದು ವಿಶೇಷ ರೀತಿಯಿಂದ ಸ್ವಾಮಿಯ ಪೂಜಾರಾಧನೆಗಳನ್ನು ನಡೆಸಿ ರಾತ್ರಿಯಲ್ಲಿ ಜಾಗರವಿದ್ದು ಭಕ್ತಿ ಭಾಗ್ಯವನ್ನು ಸೂರೆಗೊಳಿಸುವಂತಹ ಅನೇಕ ಗೀತಗಳನ್ನು ಪಾಡಿ, ಪ್ರಾತಃಕಾಲದಲ್ಲಿ ಎಂದಿನಂತೆ ಪೂಜಾನೈವೇದ್ಯ ಆರತಿಗಳನ್ನು ಸಮರ್ಪಿಸಿ-ಜಗಜ್ಜನನಿಯಾದ ತುಲಸಾದೇವಿಯನ್ನೂ ಅರ್ಚಿಸಿ ತರುವಾಯ ತತ್ಪ್ರಸಾದವನ್ನು ಭುಂಜಿಸುವರು.

ಶ್ರೀ ತ್ಯಾಗರಾಜರ ಅಲೌಕಿಕ ಭಕ್ತಿ ಪಾರವಶ್ಯತೆಯೂ, ಅವರ ಅಮಾನುಷ ಸಂಗೀತವಿದ್ಯಾ ನೈಪುಣ್ಯವೂ, ದೇಶ ದೇಶಗಳಲ್ಲೂ ಪ್ರಚಾರ ವಾದುವು. ತಕ್ಕ ಪ್ರೋತ್ಸಾಹಕರಿಲ್ಲದೆ ಅಳಿಯಲನುವಾಗಿದ್ದ ಸಂಗೀತ ಶಾಸ್ತ್ರವನ್ನು ಪುನರುದ್ಧಾರಮಾಡಲು ಅವತರಿಸಿದ ಮಹಾನುಭಾವರೇ ಇವ ರೆಂದೂ, ಲೋಕದಲ್ಲಿ ಶ್ರೀರಾಮಭಕ್ತಿ ಸಾಮ್ರಾಜ್ಯವನ್ನು ಸ್ಥಾಪಿಸಲು ಅವತರಿಸಿದ ವಾಲ್ಮೀಕಿ ಮಹರ್ಷಿಗಳೇ ಈ ತ್ಯಾಗರಾಜರೆಂದೂ ಭಾವುಕ ರಾದ ಜನರು ಹಲವು ಪರಿಯಿಂದ ಅವರ ನಿರ್ಮಲ ಕೀರ್ತಿಯನ್ನು ದಿಕ್ಕು ದಿಕ್ಕುಗಳಲ್ಲಿ ಬಿತ್ತತೊಡಗಿದರು. ಹತ್ತಿರದ ದೂರದ ಅನೇಕರು ಬಂದು ಅವರ ಗಾಂಧರ್ವ ಗಾಯನ ಸಿರಿಯ ವೈಭವವನ್ನು ಕೇಳಿ ಅನುಭವಿಸಿ ಸಂ ತುಷ್ಟರಾಗಿ ಅವರ ಸನ್ನಿಧಿಯನ್ನು ಬಿಡಲಾಗದೆ ಬಿಟ್ಟು, ತಮ್ಮ ಸ್ಥಳಗಳಿಗೆ ಪ್ರಯಾಣಮಾಡುವರು. ಯಾರು ಬಂದರೂ ಯಾರು ಹೋದರೂ, ಯಾರು ಹೊಗಳಿದರೂ ಯಾರು ದೂಷಿಸಿದರೂ, ಅವರ ಮನಶ್ಶಾಂತಿಗೆ ಕುಂದುಂಟಾಗದೆ ಆ ಜಿತೇಂದ್ರಿಯರು ಸಮುದ್ರ ಮಧ್ಯದ ಜಲರಾಶಿಯಂತೆ ಸರ್ವದಾ ಶಾಂತರಾಗಿರುತ್ತಿದ್ದರು. ಹೀಗಿರುವಲ್ಲಿ ತಂಜಾವೂರಿನ ರಾಜನು ಅವರ ಸ್ವರ್ಗೀಯ ಗಾಯನವನ್ನು ಕೇಳಿ ಆನಂದಿಸಬೇಕೆಂದು ಅಪೇಕ್ಷಿಸಿ, ಅವರನ್ನು ತನ್ನ ಆಸ್ಥಾನಕ್ಕೆ ಕರೆತರಲು ತನ್ನ ಕಡೆಯ ಉದ್ಯೋಗಸ್ಥರನ್ನು ಕಳುಹಿಸಿದನು. ಅವರು ತ್ಯಾಗರಾಜರನ್ನು ಸಂದರ್ಶಿಸಿ, - 'ತಾವು ರಾಜಾ ಸ್ಥಾನಕ್ಕೆ ದಯಮಾಡಿಸಿ ನಮ್ಮ ಮಹಾರಾಜರ ಮೇಲೆ ಒಂದೆರಡು ಕೃತಿಗ ಳನ್ನು ರಚಿಸಿ ಪಾಡುವಿರಾದರೆ ವಿಶೇಷವಾದ ಭೂಸ್ವಾಸ್ಥ್ಯವನ್ನು ಜಹಗೀ ರಾಗಿ ಪಡೆಯಬಹುದು' ಎಂದರು. ಅದನ್ನು ಕೇಳಿದ ಆ ಮಹಾನುಭಾ ವರು-'ಎಲೈ ನಿಮ್ಮ ರಾಜನು ಭಗವಾನನಿಂದ ಕೊಡಲ್ಪಟ್ಟಿರುವ ಐಶ್ವರ್ಯ ವನ್ನು ಹೀಗೇಕೆ ಅಪವ್ಯಯಮಾಡಲು ಯತ್ನಿಸುವನು! ಬುದ್ಧಿಹೀನತೆಯಿಂದ

ಅವನು ಹಾಗೆ ಮಾಡುವನಾದರೂ, ಪವಿತ್ರವಾದ ಸಂಗೀತವಿದ್ಯಾ ಕನ್ಯೆಯನ್ನು ನಾನು ಈ ಬಗೆಯ ವ್ಯಭಿಚಾರ ಕೃತ್ಯಕ್ಕಾಗಿ ಉಪಯೋಗಿಸಲು ನನ್ನ ಜನ್ಮದಲ್ಲೂ ಇಷ್ಟಪಡಲಾರೆನು ! ನರಸ್ತುತಿಯು ಮಹಾ ಪಾಪ ಸಾಧನವು' ಎಂದು ನುಡಿದರು. ಅದನ್ನು ಕೇಳಿದ ಆ ಅಧಿಕಾರಿಯು, ವಿಶೇಷ ಧನ ಕನಕಗಳಿಂದ ಅವರನ್ನು ಮರುಳುಗೊಳಿಸಬಹುದೆಂದು ಯತ್ನಿಸಲು, ಶ್ರೀ ತ್ಯಾಗರಾಜರು ಅವನ ಮಾತಿಗಾಗಿ ಬಹು ಅಸಹ್ಯಪಟ್ಟು ಅವನಿಗೆ ಪ್ರತ್ಯುತ್ತರವನ್ನೇ ಕೊಡದೆ ಶ್ರೀರಾಮನನ್ನುದ್ದೇಶಿಸಿ – ' ನಿಧಿಚಾಲ ಸುಖಮಾ ' ಎಂಬ ಕೀರ್ತನೆಯನ್ನು ಪಾಡಿದರು. ಅದರ ಸೌಂದರ್ಯವನ್ನು ಗಮನಿಸಿರಿ:—

**ಕಲ್ಯಾಣಿ ಛಾಪುತಾಳ**

ಪ. ನಿಧಿ ಚಾಲ ಸುಖಮಾ, ರಾಮುನಿ ಸ
ನ್ನಿಧಿ ಸೇವ ಸು-ಖಮಾ-ನಿಜಮುಗ ಪಲ್ಕು ಮನಸಾ ನಿ.
ಅ. ದಧಿ ನವನೀತ ಕ್ಷೀರಮುಲು ರುಚಿಯೋ - ದಾಶರಥಿ
ಧ್ಯಾನ ಭಜನ ಸುಧಾ - ರಸಮು ರುಚಿಯೋ ನಿ.
ಚ. ದಮ ಶಮ ಮನುಗಂಗಾ ಸ್ನಾನಮು ಸುಖಮಾ ಕ
ರ್ದಮ ದುರ್ವಿಷಯ ಕೂಪ ಸ್ನಾನಮು ಸುಖಮಾ
ಮಮತ ಬಂಧನ ಯುತ ನರಸ್ತುತಿ ಸುಖಮಾ
ಸುಮತಿ ತ್ಯಾಗರಾಜನುತುನಿ ಕೀರ್ತನ ಸುಖಮಾ ನಿ.

ಇದರ ಅರ್ಥಗ್ರಹಣಮಾಡಿ ಆ ಉದ್ಯೋಗಿಯು ಪ್ರತಿ ಮಾತನಾಡದೆ ಹೊರಟುಹೋದನು. ಮತ್ತೊಂದು ವೇಳೆ ಆಗ ತಿರುವಾಂಕೂರಿನಲ್ಲಿ ರಾಜ್ಯವಾಳುತ್ತಿದ್ದ ಸ್ವಾತಿ ತಿರುನಾಳ್ ಎಂಬ ರಾಜನು ಶ್ರೀ ತ್ಯಾಗರಾಜರನ್ನು ತನ್ನ ಆಸ್ಥಾನಕ್ಕೆ ಕರೆತರಬೇಕೆಂದು ವಡಿವೇಲು ಎಂಬ ತಮ್ಮ ಕಡೆಯ ಸಂಗೀತ ವಿದ್ವಾಂಸನನ್ನು ಕಳುಹಿಸಿದನು. ಆಗಿನ ತಿರುವಾಂಕೂರು ರಾಜಾಸ್ಥಾನವು, ಗೋವಿಂದ ಮಾರಾರ್, ವಡಿವೇಲು, ಶಿವಾನಂದ, ಚಿನ್ನಯ್ಯ, ಪೊನ್ನಯ್ಯ, ಕ್ಷೀರಾಬ್ಧಿ ಶಾಸ್ತ್ರಿ, ಪರಮೇಶ್ವರ ಭಾಗವತರ್, ಮೇರುಸ್ವಾಮಿ ಮೊದಲಾದ ಹಲವುಮಂದಿ ಸಂಗೀತ ವಿದ್ವಾಂಸರಿಂದ ಸಿಂಗರಿಸಲ್ಪಟ್ಟಿದ್ದಿತು. ರಾಜನೇ ಸ್ವತಃ ಕವಿಯೂ ಸಂಗೀತ ವಿದ್ವಾಂಸನೂ ಆಗಿದ್ದನು. ಆತನ

ತಂಗಿ ರುಕ್ಮಿಣೀಬಾಯಿಯೆಂಬ ನಾರೀಮಣಿಯೂ ಸಂಗೀತ ಕವಿತೆಗಳಲ್ಲಿ ಅಪೂರ್ವ ಸಾಮರ್ಥ್ಯವನ್ನು ಗಳಿಸಿದ್ದಳು. ತಿರುವಾಂಕೂರು ರಾಜಾಸ್ಥಾನವು ಹೀಗೆ ಸಂಗೀತ ವಿದ್ಯಾ ಪ್ರೌಢಿಮೆಯಿಂದ ಗರ್ವಿಸಿ ಮೆರೆಯುತ್ತಿದ್ದ ಕಾಲಕ್ಕೆ ಇತ್ತ ನಿರ್ಮಲಭಕ್ತಿ ಮೂಲಕವಾಗಿ ಶ್ರೀರಾಮನಾಮದಿಂದ ಪವಿತ್ರವಾಗಿ ಪ್ರವಹಿಸತೊಡಗಿದ ಗಾನ ರಸ ತರಂಗಿಣಿಯು ಹೊರಟು, ತನ್ನ ಪಾವಿತ್ರ್ಯತೆಯಿಂದ ಅದರ ಪ್ರಕಾಶವನ್ನು ಕುಂದಿಸಲನುವಾಯಿತು. ಶ್ರೀ ತ್ಯಾಗರಾಜರ ಶಿಷ್ಯರಲ್ಲಿ ಒಬ್ಬರಾದ ಕನ್ನಯ್ಯ ಭಾಗವತರೆಂಬುವರು, ತಿರುನಾಳ್ ರಾಜನೆದುರಿಗೆ ತಮ್ಮ ಗುರುಗಳಿಂದ ವಿರಚಿತವಾದ ಕೀರ್ತನೆಗಳಲ್ಲಿ ಹಲವನ್ನು ಪಾಡಿದ್ದನು. ಆ ಕೀರ್ತನೆಗಳ ಲಕ್ಷ್ಯಲಕ್ಷಣಭಾವ ಪದಜೋಡಣೆ, ಅರ್ಥಪುಷ್ಟಿ, ಎಲ್ಲಕ್ಕೂ ಹೆಚ್ಚಾಗಿ ಶ್ರೋತೃಗಳ ಹೃದಯವನ್ನೇ ಸೂರೆಗೊಂಡು ಶ್ರೀರಾಮ ಭಕ್ತಿ ಸುಧಾ ಶರಧಿಯಲ್ಲಿ ಓಲಾಡಿಸುತ್ತಿದ್ದ-ಅವುಗಳಲ್ಲಡಗಿದ್ದ ಶ್ರೀ ತ್ಯಾಗರಾಜರ ಹೃತ್ಪೂರ್ವಕವಾದ ಮೊರೆ ಇವುಗಳು ಆತನನ್ನು ಮೂಕನನ್ನಾಗಿ ಮಾಡಿದುವು. ಶ್ರೀಯುವರ ಕವಿತೆ ಗೀತೆಗಳೆದುರಿಗೆ ತಿರುವಾಂಕೂರಿನ ಸಂಗೀತವು - 'ಕೋಗಿಲೆಯೆದುರಿನ ಕಾಗೆಯ ಗಾನದಂತೆ' ಎಂದುಕೊಂಡು - ಸರ್ವ ಪ್ರಯತ್ನಗಳಿಂದಲೂ ಆ ಮಹಾನುಭಾವರನ್ನು ತನ್ನ ಆಸ್ಥಾನಕ್ಕೆ ಕರೆತಂದೇ ತೀರಬೇಕೆಂದು ಆ ವಿದ್ವಾಂಸನಿಗೆ ಆಜ್ಞೆ ಮಾಡಿ ಕಳುಹಿಸಿದರು.

ವಡಿವೇಲು ವಿದ್ವಾಂಸನು ತಿರುವೈಯಾರಿಗೆ ಪ್ರಯಾಣಮಾಡಿ, ಧನ ಕನಕಾದಿಗಳ ವಿಷಯದಲ್ಲಿ ಶ್ರೀ ತ್ಯಾಗರಾಜರ ಮನೋಭಾವವನ್ನೂ, ಹಿಂದೊಂದು ವೇಳೆ ತಂಜಾವೂರು ರಾಜನಿಂದ ಬಂದಿದ್ದ ಆಹ್ವಾನವನ್ನು ಅವರು ನಿರಾಕರಿಸಿದ್ದ ವಿಚಾರವನ್ನೂ ತಿಳಿದು ಒಡನೆ ಆ ಸಂಗತಿಯನ್ನೆತ್ತಲು ಸಂದೇಹಪಟ್ಟನು. ಸಮಯ ಬಂದಾಗ ಆ ಕೆಲಸ ಸಾಧಿಸಿಕೊಳ್ಳಬಹುದೆಂದು ಕೆಲವು ದಿನಗಳವರೆಗೆ ಅಲ್ಲೇ ವಾಸಿಸಿದ್ದನು. ಶ್ರೀ ತ್ಯಾಗರಾಜರು ನಡಿಸುತ್ತಿದ್ದ ನಿತ್ಯಪೂಜೆ ಭಜನೆಗಳಿಗೆ ಆಗಾಗ ಹೋಗುತ್ತ, ಕೆಲವು ದಿನಗಳ ಮೇಲೆ ತನ್ನ ಪರಿಚಯವನ್ನಿತ್ತು, ತನ್ನ ದೇಶವಾದ ತಿರುವಾಂಕೂರಿನ ಪ್ರಾಕೃತಿಕ ಸೌಂದರ್ಯ, ಮನೋಲ್ಲಾಸಕರವಾದ ಅಲ್ಲಿಯ ವಾಯುಗುಣ, ಆ ದೇಶದ ಖನಿಜ ಉದ್ಭಿಜಾದಿ ಸಂಪತ್ತು, ಪ್ರಜೆಗಳ ಧಾರ್ಮಿಕ ಸ್ವಭಾವ

ಮುಂತಾದವುಗಳನ್ನು ಕ್ರಮಕ್ರಮವಾಗಿ ವರ್ಣಿಸಿ ಹೇಳುತ್ತ, ಕೊನೆಗೆ ರಸಿಕನೂ ವಿದ್ವಾಂಸನೂ ಪ್ರಜಾಭಿಮಾನಿಯೂ ಆದ ಅಲ್ಲಿಯ ರಾಜನ ದಯಾಳುತನ ಔದಾರ್ಯ ಮುಂತಾದುವುಗಳನ್ನೂ ವರ್ಣಿಸಿದನು. ಅವನ ಉದ್ದೇಶವು, ತ್ಯಾಗರಾಜರು ಸ್ವಸ್ಥಳವಾದ ತಿರುವೈಯಾರಿನಲ್ಲೂ - ಆ ಪ್ರಾಂತದಲ್ಲೂ ಜಿಗುಪ್ಸೆಪಟ್ಟು ತಿರುವಾಂಕೂರು ರಾಜಧಾನಿಗೆ ಪ್ರಯಾಣಮಾಡಿ ಅಲ್ಲಿ ವಾಸಮಾಡಲು ಇಷ್ಟಪಡುವಂತೆ ಮಾಡಬೇಕೆಂಬುದೇ ಆಗಿದ್ದುದರಿಂದ, ತನ್ನ ಭಾಷಣದ ಮಧ್ಯೆ ಮಧ್ಯೆ ಈ ಪ್ರಾಂತವನ್ನು ಅದರೊಂದಿಗೆ ಹೋಲಿಸಿ, ಇದನ್ನು ಹಳಿದು ಅದನ್ನು ಹೊಗಳುವುದನ್ನು ಮರೆಯುತ್ತಿರಲಿಲ್ಲ. ಕೊನೆಗೆ "ತಾವು ತಿರುವಾಂಕೂರಿಗೆ ಪ್ರಯಾಣಮಾಡಿ ಅಲ್ಲಿಯ ರಾಜಾಸ್ಥಾನವನ್ನು ಅಲಂಕರಿಸಿ ಕೀರ್ತಿ ಸಂಪಾದನೆ ಮಾಡಬೇಕು" ಎಂದು ಬಿನ್ನವಿಸಿದನು. ಅದನ್ನು ಕೇಳಿದ ತ್ಯಾಗರಾಜರು-'ಅಯ್ಯಾ ಕೀರ್ತಿಯೆಂದರೇನು ? ಜನಗಳ ಹೊಗಳಿಕೆ ತಾನೇ! ಜನಗಳೆಂದರಾರು, ಸ್ವಾಭಿಪ್ರಾಯವಿಲ್ಲದ, ಕೊಟ್ಟರೆ ಹೊಗಳಿ ಕೊಡದಿದ್ದರೆ ಬೊಗಳುವ ಸ್ವಾರ್ಥಸಾಧಕರು ತಾನೆ !' ಎಂದರು. ವಡಿವೇಲುವು ಅವರ ಈ ಮಾತಿಗೆ ಪ್ರತ್ಯುತ್ತರ ಕೊಡಲಾರದೆ-'ಹೋಗಲಿ ಪ್ರಜಾಭಿಪ್ರಾಯವನ್ನು ಕುರಿತು ಗಮನಿಸಬೇಕಾದುದಿಲ್ಲ - ಸ್ವಯಂ ಮಹಾರಾಜರೇ ತಮ್ಮ ಆಗಮನಕ್ಕಾಗಿ ಎದುರುನೋಡಿಕೊಂಡಿದ್ದಾರೆ. ಮಹಾರಾಜರಿಂದ ನಿಶ್ಚಯವಾಗಿಯೂ ತಮ್ಮ ಪದವಿಯು ಉನ್ನತಿಯನ್ನೈದುವುದು' ಎಂದು ನುಡಿದನು-'ಪದವಿಯೆಂದರೇನಯ್ಯಾ! ಭಾಗವತರಾದ ನಮಗೆ ಪದವಿಯೆಂತಹುದು ?' ಎಂದು ತ್ಯಾಗರಾಜರು ನುಡಿಯಲು - ಕೇವಲ ಪ್ರಾಪಂಚಿಕನಾದ ಆತನು-'ರಾಜರ ಕಟಾಕ್ಷಕ್ಕೆ ಪಾತ್ರರಾದ ತಾವು ಅಖಂಡ ಧನಕನಕಗಳ ಸಂಪತ್ತನ್ನು ಗಳಿಸಬಹುದು. ತಮ್ಮ ಪತ್ನೀಪುತ್ರರೊಂದಿಗೆ ಚ್ಯುತಿಯಿಲ್ಲದ ಸುಖಸಂತೋಷಗಳನ್ನು ಅನುಭವಿಸಬಹುದು' ಎಂದು ಪ್ರತ್ಯುತ್ತರವಿತ್ತನು.

ಆತನ ಮಾತುಗಳನ್ನು ಕೇಳಿದ ಶ್ರೀ ತ್ಯಾಗರಾಜರು, ತಿರಸ್ಕಾರ ಸೂಚಕವಾದ ಹುಸಿನಗುವನ್ನು ನಕ್ಕು-'ಮಿತ್ರನೇ, ನೀನು ಮೊದಲು ಕೀರ್ತಿಯನ್ನೂ ತರುವಾಯ ಪ್ರಭು ಕಟಾಕ್ಷವನ್ನೂ ತನ್ಮೂಲಕ ಅರ್ಥ ಲಾಭವನ್ನೂ ಕುರಿತು ಪ್ರಸ್ತಾಪಿಸಿದೆಯಲ್ಲವೆ ? ಆದರೆ ಕೇಳು, ನಾನು ದ್ರವ್ಯವು

ಯಾವಾಗಲೂ ಮಾನವನ ವಾಸ್ತವವಾದ ಅಭಿವೃದ್ಧಿಗೆ ಪ್ರತಿಬಂಧಕ ಸಾಮ ಗ್ರಿಯೆಂದೇ ಎಣಿಸಿದ್ದೇನೆ. ಧನಧಾನ್ಯಾದಿ ಪ್ರಾಪಂಚಿಕ ಸಾಮಗ್ರಿಯನ್ನೇ ಅಮಿತವಾಗಿ ಗಳಿಸಿ ಒಂದಿಗೇ ಪಾರತ್ರಿಕ ಸಾಧನವನ್ನೂ ಮಾಡಿಕೊಳ್ಳುತ್ತೇ ನೆಂದು ಯೋಚಿಸುವುದು ದೊಡ್ಡದೊಂದು ಗುಂಡುಕಲ್ಲನ್ನು ಕುತ್ತಿಗೆಗೆ ಕಟ್ಟಿಕೊಂಡು ಮಡುವಿನಲ್ಲಿ ಈಜುತ್ತೇನೆಂದು ಎಣಿಸುವಷ್ಟು ಸುಲಭವೆಂದು ತಿಳಿಯಬೇಕು. 'ಯಸ್ಯಾನುಗ್ರಹ ಮಿಚ್ಛಾಮಿ ತಸ್ಯವಿತ್ತಂ ಹರಾಮ್ಯಹಂ' ಎಂದು ಶ್ರೀಕೃಷ್ಣನ ವಾಕ್ಯವಿದೆ. ಲೌಕಿಕ ಧನಕನಕಾದಿ ಭಾರಕವಸ್ತುಗಳ ವಿಮೋಚನೆಯಾಗದೆ ಶ್ರೀವರನ ಪಾದಕಮಲಗಳಲ್ಲಿ ನಿಶ್ಚಲಭಕ್ತಿ ಭಾಗ್ಯವು ಲಭಿಸದು. ಇನ್ನು ರಾಜಾನುಗ್ರಹದಿಂದ ಪ್ರಾಪ್ತವಾಗಬಹುದಾದ ಪದವಿ ಯನ್ನು ಕುರಿತು ನುಡಿದೆಯಲ್ಲವೆ? ಕೇಳು, ಎಂದು 'ಪದವಿ ನೀ ಸದ್ಭ ಕ್ತಿಯು ಕಲ್ಗ' ಎಂಬ ಕೀರ್ತನೆಯನ್ನು ಪಾಡಿದರು, ಅದರಲ್ಲಿ 'ಶ್ರೀ ರಾಮನ ಪಾದಕಮಲಗಳಲ್ಲಿ ನಿಶ್ಚಲವಾದ ಭಕ್ತಿಯನ್ನಿಡುವಂತೆ ಪ್ರೇರಿ ಸುವ ಮನಸ್ಥಿತಿ ಯಾವುದೋ ಅದೇ ಉಚ್ಚಪದವಿಯು. ಲೋಕದಲ್ಲಿ ವೇದ ಶಾಸ್ತ್ರಾದಿಗಳು ಉಪನಿಷತ್ತುಗಳು ಮುಂತಾದುವನ್ನು ಆಮೂಲಾಗ್ರವಾಗಿ ಬಾಯಿಪಾಠವಾಗಿ ಹೇಳಲು ಕಲಿತಿರುವ ಹಲವರಿರುವರು. ಆದರೇನು! ಅವರು ಅವುಗಳ ಹೃದಯವೇನೆಂಬುದನ್ನೇ ತಿಳಿಯದಿದ್ದರೆ, ಅವರು ಉಚ್ಚಪದವನ್ನು ಪಡೆದಂತಾಯಿತೆ? ಮೇರು ಮಂದರಗಳಷ್ಟು ಉನ್ನತವಾದ ಧನ ರಾಸಿಗ ಳನ್ನು ಗಳಿಸಿ, ಹಲವರು ಪತ್ನಿಯರು ಅನೇಕಮಂದಿ ಪುತ್ರರು ಮುಂತಾದ ಸೌಭಾಗ್ಯಗಳನ್ನು ಪಡೆದು, ಅಮಿತ ಸುಖಭೋಗಗಳನ್ನು ಅನುಭವಿಸುವವರೂ ಲೋಕದಲ್ಲಿ ಇರಬಹುದು. ಆದರೆ ಅವರು ಉಚ್ಚಪದವಿಯನ್ನು ಪಡೆದಂತಾ ಯಿತೆ? ಯಾವ ಮನುಷ್ಯನ ಸುಖಸಂಪದಗಳೆಂಬುವು ಕಾಮಕ್ರೋಧಾದಿಗ ಳಿಂದ ಕೂಡಿದ ಅಜ್ಞಾನಾಂಧಕೂಪವನ್ನು ಬಿಟ್ಟು ಹೊರಕ್ಕೆ ಹೊರಡಲಾ ರವೋ ಆ ಮನುಷ್ಯನು ಉಚ್ಚಪದವನ್ನು ಹೊಂದಿದವನೆಂದು ತಿಳಿಯಬಹು ದೇನು?" ಎಂದು ಸೂಚಿತವಾಯಿತು. ಅದನ್ನು ಕೇಳಿದ ಆ ತಿರುವಾಂ ಕೂರು ವಿದ್ವಾಂಸನು - ಪುನಃ ಆ ವಿಚಾರವನ್ನು ಕುರಿತು, ತ್ಯಾಗರಾಜ ರೊಂದಿಗೆ ಮಾತನಾಡಲಾರದೆ ತನ್ನ ದೇಶಾಭಿಮುಖವಾಗಿ ಹೊರಟು ಹೋದನು.

ಹೀಗೆ ದೇಶದೇಶಗಳ ರಾಜಾಧಿರಾಜರು ಅಪೇಕ್ಷಿಸಿದರೂ ಅದನ್ನು ಲಕ್ಷ್ಯಮಾಡದೆ, ತಾವು ನಂಬಿ ಭಜಿಸುತ್ತಿದ್ದ ಶ್ರೀರಾಮಚಂದ್ರನ ಸೇವೆಗಿಂತಲೂ ಉನ್ನತವಾದ ವಸ್ತುವೊಂದು ಪ್ರಪಂಚದಲ್ಲೇ ಇಲ್ಲವೆಂದು ತಿಳಿದಿದ್ದ ತ್ಯಾಗರಾಜರು, ಪ್ರಾಪಂಚಿಕವಾಗಿ ಐಶ್ವರ್ಯವನ್ನಲ್ಲದಿದ್ದರೂ ಅನ್ನ ಬಟ್ಟೆಗಾದರೂ ತಕ್ಕಷ್ಟು ಉಪಪತ್ತಿಯುಳ್ಳವರಾಗಿದ್ದರೆಂದು ವಾಚಕರು ಭಾವಿಸಬಹುದು ! ಆದರೆ ತ್ಯಾಗರಾಜರಿಗೆ ಪಿತ್ರಾರ್ಜಿತ ಆಸ್ತಿಯಾಗಲೀ ಮೇಲ್ಕಂಡಂತೆ ಶ್ರೀರಾಮನಾಮ ಜಪ ಭಜನಾದಿಗಳಲ್ಲದೆ, ಸಂಪಾದನೆಗೆ ಸಾಧಕವಾಗುವಂತಹ ಮತ್ತಾವ ಬಗೆಯ ಉಪವೃತ್ತಿಯಾಗಲೀ ಇರಲಿಲ್ಲ. ಅವರು ತಮ್ಮ ಪಿತ್ರಾರ್ಜಿತ ಸ್ವತ್ತಾಗಿದ್ದ ಉಂಛವೃತ್ತಿಯನ್ನೇ ಸ್ಥಿರವಾಗಿ ಅವಲಂಬಿಸಿ ನಾಳೆಯ ಪಾಡೇನೆಂದು ಗಮನಿಸದೆ, ಭಕ್ತವತ್ಸಲನಾದ ಶ್ರೀರಾಮನ ದಯಾವರ್ಷವು ಜಗತ್ತಿನಮೇಲೆ ನಿರಂತರ ಪ್ರವಹಿಸಿ ಸಕಲ ಪ್ರಾಣಿಗಳಿಗೂ ಅಂದಂದಿನ ಅಶನವಸನಗಳನ್ನಿತ್ತು ಕಾಪಾಡುವುದೆಂಬುದನ್ನು ನಿಶ್ಚಲಭಕ್ತಿಯಿಂದ ನಂಬಿದ್ದರಾದುದರಿಂದ, ತಮ್ಮ ಆಹಾರ ಸಂಪಾದನೆಗಾಗಿಯಾಗಲೀ, ಸುಖಸಂಪದಾದಿಗಳ ಲಾಭೋದ್ದೇಶದಿಂದಲಾಗಲೀ ಯಾವ ಬಗೆಯ ಪುರುಷ ಪ್ರಯತ್ನವನ್ನೂ ಮಾಡುತ್ತಿರಲಿಲ್ಲ. ಮನೆಯಲ್ಲಿ ನಿತ್ಯ ಪೂಜೆ ಭಜನೆಗಳನ್ನು ನಡೆಯಿಸುತ್ತಿದ್ದು ವಾರಕ್ಕೊಂದುದಿನ ಪ್ರಾತಃಕಾಲ ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು, ಗ್ರಾಮಭಜನೆಗಾಗಿ ಹೊರಡುವರು. ಅವರ ಶಿಷ್ಯರೂ ಕೀರ್ತನೆಗಳನ್ನು ಪಾಡುತ್ತ ಜೊತೆಗೆ ಬರುತ್ತಿರಲು ತಿರುವೈಯಾರಿನ ಮುಖ್ಯಮುಖ್ಯವಾದ ಬೀದಿಗಳಲ್ಲಿ ತಂಬೂರಿ ತಾಳಮೇಳಗಳೊಂದಿಗೆ ಭಜನೆ ಮಾಡಿಕೊಂಡು ಸಂಚರಿಸುವರು. ಶ್ರೀ ತ್ಯಾಗರಾಜರ ಶನಿವಾರದ ಗ್ರಾಮಭಜನೆಯನ್ನೇ ಅನೇಕರು ಅತ್ಯುತ್ಸುಕರಾಗಿ ಕಾದುಕೊಂಡಿದ್ದು ಭಜನೆಯು ತಮ್ಮ ಬೀದಿಗೂ ತಮ್ಮ ಮನೆಗಳ ಬಳಿಗೂ ಬಂದಿತೆಂದೊಡನೆಯೇ, ಶಿಷ್ಯ ಸಮೇತರಾದ ಆ ಭಕ್ತವರ್ಯರ ಪಾದಗಳನ್ನು ತೊಳೆದು ಗಂಧಪುಷ್ಪಾದಿಗಳನ್ನಿತ್ತು ಪೂಜಿಸಿ, ತಮ್ಮ ತಮ್ಮ ಯೋಗ್ಯತಾನುಸಾರ ಧಾನ್ಯ ದವಸಾದಿ ಸಕಲವಿಧ ಪಾಕ ಸಾಮಗ್ರಿಗಳನ್ನೂ ದಕ್ಷಿಣೆಯನ್ನೂ ಕೊಟ್ಟು ಪಾದಾಭಿವಾದನಮಾಡಿ ಧನ್ಯರಾದೆವೆಂದುಕೊಳ್ಳುವರು. ಹಾಗೆ ಸಂಗ್ರಹವಾದ ಪದಾರ್ಥಗಳು ತರುವಾಯ ಒಂದು ವಾರದವರೆಗೂ

ಅವರಿಗೂ ಅವರ ಶಿಷ್ಯ ಸಮುದಾಯಕ್ಕೂ ಸಾಕಾಗುವುದು. ಹೀಗೆ ಅವರ ಕಾಲಕ್ಷೇಪವು ಕಳೆಯುತ್ತಿರಲು ಶ್ರೀ ತ್ಯಾಗರಾಜರು, ತಮ್ಮ ಕಾಲವನ್ನು ಪ್ರಾರ್ಥನೆ ಪೂಜೆ ಭಜನೆ ಕೀರ್ತನರಚನೆ ಬೋಧನೆ ಮುಂತಾದುವುಗಳಲ್ಲಿ ಕಳೆಯುತ್ತಾ, Plain living and high thinking ಎಂದರೆ 'ಸಾದಾ ಜೀವನ ಮತ್ತು ಉನ್ನತ ಚಿಂತನ' ಎಂಬ ಗಾಥೆಯಿಂದ ಯಾವ ಋಷಿಜೀವನಸ್ಥಿತಿಯು ಬೋಧವಾಗುವುದೋ ಅಂತಹ ಉಪಯುಕ್ತ ರೀತಿಯಲ್ಲಿ ತಮ್ಮ ಜೀವನ ಯಾತ್ರೆಯನ್ನು ಸಾಗಿಸಿಕೊಂಡಿದ್ದರು.

ಇವರಿಗಿದ್ದ ಮನೋಭಾವವು ಇವರ ಅಣ್ಣಂದಿರಿಗಿರಲಿಲ್ಲ! ಜನ್ಮಾಂತರ ಸಂಸ್ಕಾರ ಬಲದಿಂದ ಐಹಿಕೈಶ್ವರ್ಯ - ಪಾರತ್ರಿಕೈಶ್ವರ್ಯಗಳ ಗೊತ್ತಾದ ಬೆಲೆಯನ್ನು ಕಂಡುಕೊಂಡಿದ್ದ ನಮ್ಮ ಕಥಾನಾಯಕರ ಜೀವಿತಾನುಭವವೂ ತೃಪ್ತಿ ಶಾಂತತೆಗಳೂ ಅವರಿಗೆ ಎಳ್ಳಷ್ಟೂ ಇರಲಿಲ್ಲ. ರಾಜಾಧಿರಾಜರೂ ತಮ್ಮ ಮನೆಯ ಬಾಗಿಲವರೆಗೆ ಆಹ್ವಾನವನ್ನು ಕಳುಹಿಸಿ ಪ್ರಾರ್ಥಿಸಿದರೂ - ಮನೆಗೆ ಬರಲು ಅಪೇಕ್ಷಿಸುವ ಲಕ್ಷ್ಮಿಯನ್ನು ಕಾಲಿನಿಂದೊದ್ದು ನಿರಾಕರಿಸುವ ಹತಭಾಗ್ಯನಂತೆ - ಲಕ್ಷಿಸದೆ, ದೇವರು ದೇವರೆಂದು ಮೂರು ಹೊತ್ತೂ ಮನೆಮೂಳನಾಗಿ ಕುಳಿತಿರುವ ಇವನಿಂದ ಮನೆತನಕ್ಕೆ ಏನು ಪ್ರಯೋಜನವೆಂದು ಅವರು ಗೊಣಗಲಾರಂಭಿಸಿದರು. ಭಜನೆಯ ಸಮಯಗಳಲ್ಲ ಆ ಊರಿನವರೂ ಪರಸ್ಥಳದವರೂ ಬಂದು ಮನೆಯಲ್ಲಿ ನೆರೆಯುತ್ತಿದ್ದುದೂ ಅವರಿಗೆ ಅತಿಶಯ ಬೇಸರವನ್ನುಂಟುಮಾಡುತ್ತಿದ್ದಿತು. ಈ ಗಲಭೆಯನ್ನು ಹೇಗಾದರೂ ನೀಗಿಸಬೇಕೆಂದು ಯೋಚಿಸಿದ ಅವರು, ಒಂದು ದಿನ ರಾತ್ರೆ, ಪೂಜೆ ಭಜನೆಗಳೆಲ್ಲವೂ ನಡೆದ ತರುವಾಯ ತ್ಯಾಗರಾಜರು ಶ್ರಾಂತರಾಗಿ ಮಲಗಿದ್ದ ವೇಳೆಯಲ್ಲಿ ತಮ್ಮ ಪಿತೃಪಿತಾಮಹರ ಕಾಲದಿಂದಲೂ ಮನೆಯಲ್ಲಿದ್ದ ಅವರ ಆ ಆರಾಧ್ಯ ಮೂರ್ತಿಗಳನ್ನು ಹೊತ್ತೊಯ್ದು ಕಾವೇರೀ ನದಿಯಲ್ಲಿ ಎಸೆದುಬಿಟ್ಟರು. ಮಾರನೆಯ ಪ್ರಾತಃಕಾಲ ತ್ಯಾಗರಾಜರು ಎದ್ದು, ದರ್ಶನ ಮಾಡಬೇಕೆಂದು ಹೋಗಿ ನೋಡಲು ಅಲ್ಲಿ ಮೂರ್ತಿಗಳೇ ಇರದಿರಲು, ಅವರು ಮಹಾ ವ್ಯಸನಾಕ್ರಾಂತರಾಗಿ - ತಮ್ಮಾ ಹೃದಯಾಧಿದೇವತೆಯನ್ನು ಹಲವು ಬಗೆಯಿಂದ ಹಾಡಿ

ಹಾಡಿ ಹಲುಬಿಕೊಳ್ಳತೊಡಗಿದರು. ‘ಏ ಪಾಪಮು ಜೇಸಿತಿರಾ ರಾಮ ನೀಕೇ ಪಾಟಿಯೈನ ದಯರಾದು’ ಎಂಬ ಕೀರ್ತನೆಯನ್ನು ಪಾಡಿ, ‘ನಾನು ಮಾಡಿದ ಯಾವ ಪಾಪ ಫಲವಾಗಿ ನನ್ನ ಕಣ್ಣುಗಳಿಗೆ ಕಾಣದೆ ಮರೆಯಾದೆಯೋ ಶ್ರೀರಾಮಾ’ ಎಂದು ಬಗೆಬಗೆಯಿಂದ ಪ್ರಾರ್ಥಿಸಿಕೊಂಡರು. ‘ಎಂದುದಾಗಿನಾಡೋ ಈಡಕು ರಾನೆನ್ನಡು ದಯವಚ್ಚುನೋ ಓ ಮನಸಾ’ ಎಂಬ ಕೀರ್ತನೆಯನ್ನು ಪಾಡಿಕೊಂಡು ಹಲುಬಿ ಹಂಬಲಿಸಿದರು-‘ನನ್ನ ಹೃದಯೇಶ್ವರನಾದ ಶ್ರೀರಾಮನು ಎಲ್ಲಿ ಅವಿತುಕೊಂಡಿದ್ದಾನೆ. ಮತ್ತೆಂದು ನನ್ನ ಮೇಲೆ ದಯತೋರಿಸಿ ಆತನು ಹಿಂದಿರುಗಿ ಬಂದು ದರ್ಶನ ಕೊಡುವನು? ಹಿಂದೆ ಹಿರಣ್ಯಕಶಿಪುವು ನಿಶ್ಚಲಭಕ್ತನಾದ ತನ್ನ ಮಗ ಪ್ರಹ್ಲಾದನನ್ನು ಬಗೆಬಗೆಯಿಂದ ಪೀಡಿಸಿದಾಗ, ನನ್ನ ಪ್ರಭುವು ಮೊದಲು ಕಂಭದಲ್ಲಿ ಅವಿತುಕೊಂಡಿದ್ದು ತರುವಾಯ ಆ ಭಕ್ತಶಿರೋಮಣಿಯನ್ನು ಕಾಪಾಡಲು ಹೊರಕ್ಕೆ ಬಂದು ದೃಷ್ಟಿಗೋಚರನಾಗಲಿಲ್ಲವೆ? ಹಾಗೆ ಈಗಲೂ ಎಲ್ಲಿ ಮರೆಯಾಗಿದ್ದಾನೆ? ತರುವಾಯ ಇಂದ್ರಪುತ್ರನಾದ ವಾಲಿಯು ತನ್ನ ತಮ್ಮನಾದ ಸುಗ್ರೀವನನ್ನು ದಯಾಹೀನನಾಗಿ ಬಾಧಿಸಿದಾಗ, ಮೊದಲು ಮರಗಳ ಶಾಖೆಗಳ ಮರೆಯಲ್ಲಿ ಅವಿತುಕೊಂಡಿದ್ದು, ತರುವಾಯ ನನ್ನ ಪ್ರಭುವು ಆ ದುರುಳನನ್ನು ಸಂಹರಿಸಲಿಲ್ಲವೆ? ಹಾಗೆಯೇ ಈಗಲೂ, ನನ್ನಲ್ಲಡಗಿ ಬಾಧಿಸುತ್ತಿರುವ ಕಾಮಕ್ರೋಧಾದಿ ಅರು ಮಂದಿ ಶತ್ರುಗಳನ್ನು ಮೂಲೋತ್ಪಾಟನಗೊಳಿಸದೆ ನನ್ನಾ ಸ್ವಾಮಿಯು ಎಲ್ಲಿ ಅಡಗಿರುವನು? ಏಕೆ ವೈದೋರನು?” ಎಂದು ಪ್ರಾರ್ಥಿಸಿದರು. ಹೀಗೆ ನಿದ್ರೆ ಆಹಾರಗಳ ಗಮನವಿಲ್ಲದೆ, ಹಗಲು ರಾತ್ರಿಗಳೆಂಬ ಭೇದಗಳನ್ನೇ ಮರೆತು ತಮ್ಮ ಸರ್ವಸ್ವವೂ ಆಗಿದ್ದ ಆ ಶ್ರೀರಾಮಮೂರ್ತಿಯು ಮಾಯವಾದುದರಿಂದ ತಮಗೆ ಇನ್ನು ಈ ಲೋಕದಲ್ಲಿ ಯಾವ ಪ್ರಯೋಜನವೂ ಇಲ್ಲವೆಂದು ತಿಳಿದು ಅವಿರಳ ಚಿಂತಾಶರಧಿಯಲ್ಲಿ ಮುಳುಗಿ ತಪಿಸುತ್ತಿದ್ದರು. ಹೀಗೆ ಹಲವು ದಿನಗಳೂ ತಿಂಗಳುಗಳೂ ಕಳೆದುಹೋದುವು. ದಿನದಿನಕ್ಕೆ ಚಿಂತಾಧಿಕ್ಯದಿಂದಲೂ, ಕಾಲಕಾಲಕ್ಕೆ ಆಹಾರ ನಿದ್ರಾದಿಗಳಿಲ್ಲದೆಯೂ, ವಿಶೇಷ ಕೃಶವಾದರು. ಕೊನೆಗೆ ಒಂದು ವರ್ಷವು ಕಳೆಯುತ್ತಿರುವಾಗ ಒಂದು ದಿನ ಬೆಳಗಿನ ಜಾವದ ಕನಸಿನಲ್ಲಿ ಕಾವೇರೀ ನದಿಯಲ್ಲಿ ಆ ವಿಗ್ರಹಗಳಿದ್ದ ಸ್ಥಳವು

ಗೋಚರವಾಗಲು, ಒಡನೆ ಎದ್ದು ಆ ಸ್ಥಳವನ್ನು ಸೇರಿ ಮಳಲನ್ನು ತೋಡಿ ತೋಡಿ ಹೂತುಕೊಂಡಿದ್ದ ಆ ವಿಗ್ರಹಗಳನ್ನು ಎತ್ತಿಕೊಂಡು ನಿಧಿಯನ್ನು ಕಂಡ ಕಡುಬಡವನಂತೆ ಮನಶ್ಶಾಂತಿಯನ್ನು ಹೊಂದಿದರು. ಹಾಗೆ ಆ ವಿಗ್ರಹಗಳು ದೊರಕಿದಾಗ 'ಎಟ್ಲ ದೊರಕಿತಿವೋ' 'ಎಂತ ಭಾಗ್ಯಮು' 'ರಘುವೀರ ರಣಧೀರ ರಾರಾ ರಾಜಕುಮಾರ' 'ದೊರಕುನಾ ಇಟುವಂಟಿ ಸೇವಾ' ಎಂಬ ಮುಂತಾದ ಕೀರ್ತನೆಗಳನ್ನು ಪಾಡಿ, ಸೀತಾ ಲಕ್ಷ್ಮಣಾಂಜನೇಯ ಸಮೇತವಾದ ಶ್ರೀರಾಮ ವಿಗ್ರಹವನ್ನು ಎಂದಿನಂತೆ ಮನೆಯಲ್ಲಿ ಪ್ರತಿಷ್ಠಿಸಿ, ಪರಮೋತ್ಸಾಹದಿಂದ ಅನೇಕವಿಧ ಪೂಜೆಗಳನ್ನೂ, ಭಜನೆಯನ್ನೂ ನಡಿಸಿ, ಅಂದು ತಮ್ಮ ಬದುಕು ಸಾರ್ಥಕವಾಯಿತೆಂದು ಪರಮಾನಂದದಿಂದ ಇದ್ದರು.—

ತಿರುವಾಂಕೂರಿನ ರಾಜಾಸ್ಥಾನದಲ್ಲಿ ಸುಪ್ರಸಿದ್ಧರಾದ ಅನೇಕಮಂದಿ ಸಂಗೀತ ವಿದ್ವಾಂಸರಿದ್ದರೆಂದು ಹಿಂದೆಯೊಂದೆಡೆಯಲ್ಲಿ ಹೇಳಿದೆಯಲ್ಲವೆ ! ಅವರಲ್ಲಿ ಗೋವಿಂದ ಮಾರಾರ್ ಎಂಬಾತನಿಗೆ ಶ್ರೀ ತ್ಯಾಗರಾಜರನ್ನು ನೋಡಿ ಅವರ ಗೀತವನ್ನು ಕೇಳಬೇಕೆಂಬ ಆಸೆಯು ಬಲವಾಯಿತು. ಒಡನೆ ವಡಿವೇಲು ಮತ್ತು ಇನ್ನೂ ಒಬ್ಬರಿಬ್ಬರೊಂದಿಗೆ ತಿರುವೈಯಾರನ್ನು ಸೇರಿದನು. ಶ್ರೀ ತ್ಯಾಗರಾಜರು, ಅವರ ಆಗಮನ ವಿಚಾರವನ್ನು ಕೇಳಿ ಅವರ ಬಿಡಾರಕ್ಕೂ ಭೋಜನಾದಿಗಳಿಗೂ ತಕ್ಕ ಅನುಕೂಲತೆಗಳನ್ನು ಒದಗಿಸಿ ಕೊಟ್ಟರು. ಆ ದಿನ ರಾತ್ರಿ ಸುಮಾರು ಎಂಟು ಗಂಟೆಯಲ್ಲಿ ತ್ಯಾಗರಾಜರು ತಮ್ಮ ಮನೆಯ ಹಜಾರಿನಲ್ಲಿ ದೊಡ್ಡದೊಂದು ಸಭೆ ನೆರೆಯಿಸಿ ಅಲ್ಲಿಗೆ ಆ ವಿದ್ವಾಂಸರನ್ನೂ ಕರೆಯಿಸಿಕೊಂಡು ಪರಸ್ಪರ ದರ್ಶನ ಮಾಡಿದರು. ಪರಸ್ಪರ ವಂದನೆಗಳೂ ಕುಶಲ ಪ್ರಶ್ನೆಗಳೂ ನಡೆದ ತರುವಾಯ, ಗೋಎಂದ ಮಾರಾರನು ತ್ಯಾಗರಾಜರನ್ನು ಕುರಿತು,–'ತಮ್ಮದೊಂದು ಗೀತೆಯು ಪ್ಪಣೆಯಾಗಲಿ' ಎಂದನು. ತ್ಯಾಗರಾಜರಿಗೆ ಸ್ವಯಂಸ್ಫೂರ್ತಿ ಬಂದಾಗ ಮಾತ್ರ ಅವರು ಹಾಡುತ್ತಿದ್ದರಲ್ಲದೆ, ಬೇರೆ ಎಲ್ಲಾ ಸಮಯಗಳಲ್ಲೂ ಅವರು ಎಲ್ಲೆಂದರಲ್ಲಿ ಹೇಗೆಂದರೆಹಾಗೆ ಹಾಡಿದವರಲ್ಲ. ಅಲ್ಲದೆ, ಸ್ವತಃ ಅವರನ್ನು ಉದ್ದೇಶಿಸಿ 'ನೀವು ಹಾಡಿ' ಎಂದು ಹೇಳಿದುದು ಅವರ ಸ್ವಾಭಿಮಾನಕ್ಕೆ ಲೇಶಮಾತ್ರ ಕುಂದನ್ನುಂಟುಮಾಡಿತೆಂದು ಅವರ ಮನಸ್ಸಿಗೆ

ತೋರಿರಬಹುದು. ಒಡನೆ ಅವರು, - 'ಇದೇನು ಎಪ್ಪತ್ತೊಂಭತ್ತು ವರ್ಷಗಳ ವೃದ್ಧನಾದ ನಾನು ಆಜ್ಞಾಬದ್ಧನಾಗಿ ಹಾಡುವುದೇ! ಹಾಡೆಂದು ನನಗೆ ಆಜ್ಞಾಪಿಸುವ ಈತನಾರು?' ಎಂದು ಆಕ್ಷೇಪಿಸಿದರು.

ತಮಗೆ ಹಾಡಬೇಕೆಂದು ಹೇಳಿದವನು ಗೋವಿಂದ ಮಾರಾರನೆಂಬ ಸಂಗತಿಯು ಅವರಿಗೆ ತಿಳಿಯದು. ಸ್ವಾಭಾವಿಕವಾಗಿ ಸ್ವಲ್ಪ ಮುಂಗೋಪ ಸ್ವಭಾವದ ತ್ಯಾಗರಾಜರಿಗೆ, ಕುರೂಪಿಯಾಗಿ ಕುಳ್ಳನಾಗಿ ವಾತರೋಗ ಪೀಡಿತನಾಗಿ ಅಶುಭ್ರ ವಸ್ತ್ರಗಳನ್ನು ಧರಿಸಿ ಭಿಕ್ಷುಕನಂತೆ ತೋರುತ್ತಿದ್ದ ಆ ಮನುಷ್ಯನು, ಅಷ್ಟು ದೊಡ್ಡಸಭೆಯಲ್ಲಿ ತಮ್ಮನ್ನು ಸಾಕ್ಷಾತ್ ಉದ್ದೇಶಿಸಿ ಹೇಳಿದನಲ್ಲಾ ಎಂದು ಸ್ವಲ್ಪ ಕೋಪವುಂಟಾದಂತಾಗಿ ಮೇಲ್ಕಂಡಂತೆ ಆಕ್ಷೇಪಿಸಿದರು. ಒಡನೆ ವಡಿವೇಲುವು, - 'ಕ್ಷಮಿಸಬೇಕು. ಹಾಗಾದರೆ ಈ ಗೋವಿಂದ ಮಾರಾರನನ್ನು ಹಾಡಲು ಹೇಳುತ್ತೇನೆ' ಎಂದು ಆತನನ್ನು ತೋರಿಸಿದನು. - 'ಸರಿ, ಏನು ಈ ವಾತರೋಗ ಪೀಡಿತನು ಹಾಡಬಲ್ಲನೆ ? ' ಎಂದು ತಮ್ಮ ಸರದಿಯಲ್ಲಿ ತಾವೂ ಆಕ್ಷೇಪಿಸಿಬಿಟ್ಟರು. ಹೇಗೂ ಒಡನೆ ಗೋವಿಂದ ಮಾರಾರನು, ತನ್ನ ಏಳು ತಂತಿಗಳಿಂದ ಅಪೂರ್ವವೆನ್ನಿಸಿದ್ದ ದಿವ್ಯ ತಂಬೂರಿಯನ್ನು ತೆಗೆದುಕೊಂಡು ಹಾಡಲು ಆರಂಭಿಸಿದನು. ಆತನಿಗೆ ಷಟ್ಕಾಲ ಗೋವಿಂದ ಮಾರಾರನೆಂಬ ಖ್ಯಾತಿಯುಂಟು. ಎಂದರೆ ಆತನು ತನ್ನ ರಾಗಾಲಾಪನೆಯಲ್ಲೂ ಪಲ್ಲವಿಗಳಲ್ಲೂ ಆರನೆಯ ಕಾಲವನ್ನು ಅವಲಂಬಿಸಿ ಹಾಡುವನು. ಎರಡನೆಯ ಕಾಲ ಮೂರನೆಯ ಕಾಲಗಳಲ್ಲಿ ಹಾಡುವಿಕೆ ಎಂದು ಪ್ರತೀತಿಯುಂಟಷ್ಟೆ! ಆರನೆಯ ಕಾಲದಲ್ಲಿ ಎಷ್ಟು ಅತಿಶಯ ಜಾಗ್ರತಿಯಾಗಿ - ಎಷ್ಟು ಅಲ್ಪ ಕಾಲಾವಧಿಯಲ್ಲಿ ಹಾಡಬೇಕಾಗುವುದೆಂಬುದು ಸಂಗೀತ ಪಾಠಕರಿಗಲ್ಲದೆ ಇತರರ ಅನುಭವಕ್ಕೆ ಬರಲಾರದು. ಷಟ್ಕಾಲವನ್ನು ಆ ಸ್ಥಿತಿಯಲ್ಲಿ ಹೇಳಲು, ಐದನೆಯ ನಾಲ್ಕನೆಯ ಮೂರನೆಯ ಎರಡನೆಯ ಒಂದನೆಯ ಕಾಲಗಳನ್ನು ಒಂದಕ್ಕಿಂತ ಒಂದನ್ನು ದ್ವಿಗುಣಿತ ನಿಧಾನವೇಳೆಯನ್ನು ತೆಗೆದುಕೊಂಡು ಹೇಳಬೇಕಾಗುವುದು. ಆಗ ಒಂದನೆಯ ಕಾಲವನ್ನು ಪರಮಾವಧಿ ನಿಧಾನವಾಗಿ ಹಾಡಬೇಕಾಗುವುದು. ಈ ಆಲಾಪನೆಯ ರಹಸ್ಯವನ್ನು ಕಂಡುಹಿಡಿದು ಆ ಕಾಲದಲ್ಲಿ

ಹಾಡುತ್ತಿದ್ದವನೆಂದರೆ ಗೋವಿಂದ ಮಾರಾರನೊಬ್ಬನೇ, ಆ ಆಲಾಪನಾ ಪದ್ಧತಿಯನ್ನು ಈ ಪ್ರಾಂತ ಯಾರೂ ಅರಿತವರೇ ಇರಲಿಲ್ಲ. ಹೀಗೆ ಅಪೂರ್ವ ಪದ್ಧತಿಯನ್ನವಲಂಬಿಸಿ ಸುಸ್ವರ ಶಾರೀರದಿಂದ ಹಾಡತೊಡಗಿದ ಆತನ ಗಾಯನವು ನೆರೆದ ಅಶೇಷ ಶ್ರೋತೃಗಳನ್ನೂ ಕ್ಷಣಕಾಲದಲ್ಲಿ ಆನಂದಾ ಮೃತಶರಧಿಯಲ್ಲಿ ಓಲಾಡಿಸಿಬಿಟ್ಟಿತು. ಶ್ರೋತೃಗಳು ಹರ್ಷಶೋಕ ಭಯಮೂರ್ಛೆಗಳೆಂಬ ವಿವಿಧಾವಸ್ಥೆಗಳನ್ನು ಏಕಕಾಲದಲ್ಲಿ ಅನುಭವಿಸುತ್ತಾ, ತಾವು ಭೂಮಿಯ ಮೇಲಿದ್ದೇವೆ ಎಂಬ ಭಾವನೆಯೇ ಮರೆತುಹೋಗಿ ತೊಟ್ಟಿಲಲ್ಲಿ ತೂಗಲ್ಪಟ್ಟ ಮಗುವಿನಂತೆ ಪರವಶರಾಗತೊಡಗಿದರು. ಶರಧಿ ತರಂಗದಲ್ಲಿ ತೇಲಿಸಲ್ಪಟ್ಟವರಂತೆ, ಆ ಹಾಡುಗಾರನು ಆರೋಹಣ ಅವ ರೋಹಣ ಕ್ರಮವನ್ನೂ ತನ್ನ ನೂತನ ಪದ್ಧತಿಯ ತ್ರಿಕಾಲ ಚತುರ್ಥಕಾಲ ಪಂಚಮಕಾಲ ಷಟ್ಕಾಲಗಳನ್ನೂ ಅನುಸರಿಸಿ ಹಾಡುತ್ತಿದ್ದಾಗ ಗಾನಾಮೃತ ಶರಧಿಯಲ್ಲಿ ಓಲಾಡಿಸಲ್ಪಟ್ಟರು. ಆತನ ಬಾಹ್ಯರೂಪು ವೇಷಗಳಿಂದ ಅವನು ಯಾರೆಂಬುದನ್ನು ತಿಳಿಯದೆ, ತಿರಸ್ಕರಿಸಿದ್ದ ಶ್ರೀ ತ್ಯಾಗರಾಜರೇ,-'ಮೇಲು ಮೇಲು' ಎಂದು ಹೊಗಳಿ, ಅವಿಚಾರಿಯಾಗಿ ಕೋಪಗೊಂಡ, ತಮ್ಮ ಲೋಪಕ್ಕಾಗಿ ಪಶ್ಚಾತ್ತಾಪಪಟ್ಟರು. ಅವರ ಆ ಪಶ್ಚಾತ್ತಾಪವೇ ಒಂದು ಕೃತಿರೂಪವಾಗಿ ಹೊರಬಿದ್ದಿತು.

"ಎಂದರೋ ಮಹಾನುಭಾವು-ಲಂದರಿಕಿ ವಂದನಮು-ಚಂದುರು ವರ್ಣುನಿ ಯಂದ ಚಂದಮುನು ಹೃದಯಾರವಿಂದಮುನ ಜೂಚಿ ಬ್ರಹ್ಮಾ ನಂದ ಮನುಭವಿಂಚುವಾರೆಂದರೋ!" 'ಲೋಕದಲ್ಲಿ ಎಷ್ಟುಮಂದಿ ಮಹಾನುಭಾವರು ಇದ್ದಾರೋ ಆ ಎಲ್ಲರಿಗೂ ಅನಂತ ವಂದನೆಗಳು' ಎಂದು ಅತ್ಯಂತ ನಮ್ರರಾಗಿ ನುಡಿದು, ಆ ವಿದ್ವಾಂಸನನ್ನು 'ಗೋವಿಂದ ಮಾರಾರ ಎಂಬ ಹೆಸರಿನಿಂದ ಕರೆವುದಕ್ಕೆ ಬದಲು 'ಗೋವಿಂದಸ್ವಾಮಿ' ಎಂದು ಸಂಬೋಧಿಸಿ ಗೌರವಿಸಿದರು. ತರುವಾಯ ಆತನಿಗೆ 'ಷಟ್ಕಾಲ ಗೋವಿಂದ ಸ್ವಾಮಿ' ಎಂಬ ನಾಮಧೇಯವೇ ಸ್ಥಿರವಾಯಿತು.



## ಅಧ್ಯಾಯ ೫ " ಶಾಂತಮು ಲೇಕ ಸೌಖ್ಯಮು ಲೇದು "

ಕೆಲವು ದಿನಗಳಮೇಲೆ ಶ್ರೀ ತಿರುಪತಿ ಕ್ಷೇತ್ರಕ್ಕೆ ಹೋಗಿ ಶ್ರೀ ವೇಂಕಟೇಶನ ದರ್ಶನ ಮಾಡಬೇಕೆಂದು ಅವರಿಗೆ ಆಸೆಯಾಯಿತು. ಒಡನೆ ಪರಿವಾರದೊಂದಿಗೆ ಹೊರಟು ಭಕ್ತಿಯುತರಾಗಿ ಬೆಟ್ಟವನ್ನು ಹತ್ತಿ, ದೇವ ಸ್ಥಾನವನ್ನು ಪ್ರವೇಶಿಸಿ ಸ್ವಾಮಿದರ್ಶನ ಮಾಡಬೇಕೆಂಬ ವೇಳೆಗೆ ಅಲ್ಲಿ ಅಡ್ಡವಾಗಿದ್ದ ತೆರೆಯು ಅವರ ದೃಷ್ಟಿಯನ್ನು ಪ್ರತಿಬಂಧಗೊಳಿಸಿತು. ಒಡನೆ ಅವರು-'ತೆರತೀಯರಾದಾ' ಎಂಬ ಕೀರ್ತನೆಯನ್ನು ಹಾಡಿ, 'ಶ್ರೀ ವೆಂಕಟೇಶಾ ನನ್ನ ಕಣ್ಣುಗಳಿಗೆ ಅಡ್ಡವಾಗಿರುವ ಮತ್ಸರವೆಂಬ ಈ ತೆರೆ ಯನ್ನು ತೆಗೆದು, ನನಗೆ ದರ್ಶನ ಕೊಡಲಾಗದೇ' ಎಂದು ಮೊರೆಯಿಟ್ಟರು. ಒಡನೆ ಆ ತೆರೆಯು ಹರಿದು ಕೆಳಕ್ಕೆ ಬಿದ್ದು, ಅವರಿಗೆ ಸ್ವಾಮಿಯ ದಿವ್ಯ ಮಂಗಳ ವಿಗ್ರಹವು ದರ್ಶನ ಗೋಚರವಾಗಲು-'ವೆಂಕಟೇಶ ನಿನು ಸೇವಿಂ ಪನು ಪದಿವೇಲು ಕನ್ನುಲು ಕಾವಲೆನಯ್ಯ'-'ಶ್ರೀ ವೆಂಕಟೇಶಾ ನಿನ್ನೀ ದಿವ್ಯ ಸುಂದರ ವಿಗ್ರಹವನ್ನು ನೋಡಲು ಹತ್ತು ಸಾವಿರ ಕಣ್ಣುಗಳು ಬೇಕಯ್ಯ' ಎಂದು ಹೊಗಳಿ ಸ್ತುತಿಸಿದರು.

ಸ್ವಾಮಿ ಸೇವೆಯನ್ನು ತೀರಿಸಿಕೊಂಡು ಅಲ್ಲಿಂದ ಹೊರಟ ಶ್ರೀ ತ್ಯಾಗ ರಾಜರು, ಮಾರ್ಗದಲ್ಲಿದ್ದ ಕೋವೂರೆಂಬ ಒಂದು ಗ್ರಾಮವನ್ನು ಸೇರಿದರು. ಅಲ್ಲಿಂದ ಸುಂದರೇಶ ಮೊದಲಿಯಾರೆಂಬ ಆಸ್ತಿಕನಾದ ಜಮೀನುದಾರನು, ಈ ವರೆಗೇ ಶ್ರೀಯುವರ ಮಹಿಮೆಯನ್ನು ಕೇಳಿದ್ದನಾದುದರಿಂದ ಅತಿಶಯ ಗೌರವದಿಂದ ಅವರನ್ನು ಎದುರುಗೊಂಡು, ಒಂದು ವಾರಕಾಲ ತನ್ನ ಗ್ರಾಮದಲ್ಲಿ ಅವರನ್ನು ಇರಿಸಿಕೊಂಡು ಉಪಚರಿಸಿ ಬೀಳ್ಕೊಟ್ಟನು. ಪರಮ ನಿಸ್ಪೃಹರಾದ ಅವರು ತನ್ನಿಂದ ಯಾವ ದಕ್ಷಿಣೆ ದಾನಾದಿಗಳನ್ನೂ ಕಾಣಿಕೆಯನ್ನೂ ತೆಗೆದುಕೊಳ್ಳಲಾರರೆಂದು ತಿಳಿದ ಆತನು, ಅವರು ಕುಳ್ಳಿ ರುವ ಪಾಲಕಿಯ ಅಡಿಭಾಗದಲ್ಲಿ ಒಂದು ಸಾವಿರ ರೂಪಾಯಿಗಳ ಚೀಲವ ನ್ನೊಂದನ್ನು ಇಟ್ಟು ಆ ಸಂಗತಿಯನ್ನು ತನ್ನ ಸೇವಕರಿಗೆ ಮಾತ್ರ ತಿಳಿಸಿ, ಮನೆಯನ್ನು ಸೇರಿದಮೇಲೆ ಅದನ್ನು ತೆಗೆದುಕೊಡಬೇಕೆಂದು ಆಜ್ಞಾಪಿಸಿ, ವಂದನಾಪೂರ್ವಕ ಅವರನ್ನು ಪ್ರಯಾಣ ಮಾಡಿಸಿದನು. ಮಾರ್ಗ ಮಧ್ಯ

ದಲ್ಲಿ ಕೆಲವು ಮಂದಿ ಕಳ್ಳರು ಬಂದು ಅಡ್ಡಗಿಸಿ, ಕಲ್ಲುಗಳನ್ನು ಬೀರಲಾರಂಭಿಸಿದರು. ಪಾಲಕಿಯನ್ನು ಹೊತ್ತ ಬೋಯಿಗಳು ಬೆದರಿ ಗಡಗಡನೆ ನಡುಗಿ ಹೋದರು. ಒಳಗೆ ಧ್ಯಾನ ಮಗ್ನರಾಗಿ ಕುಳಿತಿದ್ದ ಶ್ರೀ ತ್ಯಾಗರಾಜರಿಗೆ ಕಳ್ಳರು ಬಂದು ಅಡ್ಡಗಿಸಿದ ಸಂಗತಿಯು ತಿಳಿಸಲ್ಪಟ್ಟಿತು. ಅವರು–'ನಮ್ಮಲ್ಲೇನಿದೆ? ಕಳ್ಳರು ನಮ್ಮ ಬಳಿಗೆ ಬರಲು ಕಾರಣವೇನು ?' ಎನ್ನಲು, ಸೇವಕರು ಸುಂದರೇಶ ಮೊದಲಿಯಾರನು ಇಟ್ಟದ್ದ ಸಾವಿರ ರೂಪಾಯಿಗಳ ಹಣದ ಚೀಲದ ವಿಚಾರವನ್ನು ತಿಳಿಸಿದರು. ಒಡನೆ ಆ ಸಾಧುವರ್ಯರು ಆಪದ್ಬಾಂಧವನಾದ ಶ್ರೀ ರಘುವೀರನನ್ನು ಸ್ತುತಿಸತೊಡಗಿದರು. ಒಡನೆ ಕಲ್ಲುಗಳನ್ನು ಬೀರುತ್ತಾ ಸಮೀಪಿಸುತ್ತಿದ್ದ ಕಳ್ಳರಿಗೆ, ಪಲ್ಲಕ್ಕಿಯ ಬಳಿ ಧನುರ್ಧಾರಿಗಳಾಗಿ ಅಪೂರ್ವ ತೇಜಸ್ಸಿನಿಂದ ಕಂಗೊಳಿಸುತ್ತ ನಿಂತ ಇಬ್ಬರು ವೀರಭಟರ ಸಂದರ್ಶನವಾಯಿತು. ಅವರನ್ನು ಕಂಡು ನಡನಡುಗಿದ ಆ ಚೋರರು ತಮ್ಮ ಆ ದುರಿತಕೃತ್ಯವನ್ನು ನೀಗಿ ನಮ್ರರಾಗಿ ಬಂದು ನಮಸ್ಕರಿಸಿ–'ಸ್ವಾಮಿ ನಾವು ಚೋರರು. ಈ ದಿನ ತಮ್ಮನ್ನು ಬಡಿದು ತಮ್ಮ ಬಳಿಯಿದ್ದುದನ್ನು ಅಪಹರಿಸಬೇಕೆಂದು ಬಂದೆವು. ನಮ್ಮ ಈ ಅಪರಾಧವನ್ನು ದಯಾಳುಗಳಾದ ತಾವು ಮನ್ನಿಸಬೇಕು. ತಮ್ಮ ಪಾಲಕಿಯ ಬಳಿ, ಅಪೂರ್ವ ತೇಜೋವಂತರಾಗಿ ಧನುರ್ಧಾರಿಗಳಾಗಿದ್ದ ಇಬ್ಬರು ಸೇವಕರನ್ನು ಕಂಡೆವು. ಅವರು ಯಾರು? ಈಗ ಕ್ಷಣಕಾಲಕ್ಕೆ ಮುಂಚೆ ಇಲ್ಲಿದ್ದ ಅವರು ಈಗ ಕಾಣುವದಿಲ್ಲವಲ್ಲ' ಎಂದರು. ಶ್ರೀ ತ್ಯಾಗರಾಜರು, ಹಾಗೆ ತಮ್ಮನ್ನು ಚೋರಬಾಧೆಯಿಂದ ಕಾಪಾಡಲು ಬಂದ ಆ ಇಬ್ಬರೂ ರಾಮಲಕ್ಷ್ಮಣರೆಂಬುದನ್ನು ತಿಳಿದು,–'ಎಲೈ ಚೋರರೇ ನೀವೇ ಧನ್ಯರು. ನೀವು ನೋಡಿದ ಆ ಧನುರ್ಧಾರಿಗಳನ್ನು ನನಗೂ ತೋರಿಸಿರಿ. ಇಗೋ ಇಲ್ಲಿರುವ ಸಾವಿರ ರೂಪಾಯಿಗಳನ್ನು ತೆಗೆದುಕೊಳ್ಳಿರಿ' ಎಂದು ನುಡಿದರು. ಚೋರರು ಪುನಃ ಸಾಷ್ಟಾಂಗವಾಗಿ ನಮಸ್ಕರಿಸಿ ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಪುನಃ ಪುನಃ ಪ್ರಾರ್ಥಿಸಿಕೊಂಡು, ಮುಂದೆ ಅವರ ಬೆಂಗಾವಲಿನ ಭಟರಾಗಿ ಜೊತೆಗೆ ಬಂದರು.

ಮುಂದೆ ಹಾಗೆಯೇ ಪ್ರಯಾಣಮಾಡುತ್ತಾ ಬಂದು ಒಂದು ಅಗ್ರಹಾರವನ್ನು ಸೇರಿದರು. ಅಲ್ಲಿ ವ್ಯಾಘ್ರಬಾಧೆಯಿಂದ ತನ್ನ ಕುಟುಂಬವ

ರನ್ನು ಕಾಪಾಡಲು ಪ್ರಯತ್ನಿಸಿ ಕಾಣದೆ ಬಾವಿಯಲ್ಲಿ ಬಿದ್ದು ಮೃತನಾದ ಒಬ್ಬ ಯಾತ್ರಾರ್ಥಿಯಾದ ಬ್ರಾಹ್ಮಣನ ಶವವನ್ನೂ, ಅನಾಥಳಾಗಿ ರೋದಿಸುತ್ತಿದ್ದ ಬ್ರಾಹ್ಮಣ ಪತ್ನಿಯನ್ನೂ ನಿಸ್ಸಹಾಯಕರಾಗಿ ಸುತ್ತುಗಟ್ಟಿ ನಿಂತು ನೋಡುತ್ತಿದ್ದ ಜನಗಳನ್ನೂ ಕಂಡು ಶ್ರೀ ತ್ಯಾಗರಾಜರು-ಆ ಅನಾಥಳ ಮೇಲೆ ಕನಿಕರವು ಮೇರೆ ತಪ್ಪಿ ಉಕ್ಕಿ ಬರಲು ಅಘಟನ ಘಟನಾ ಪಟೀಯನಾದ ಶ್ರೀರಾಮಚಂದ್ರನನ್ನು ಮನಸಾರೆ ವರ್ಣಿಸಿ, ಅಕಾಲ ಮೃತ್ಯುವಿಗೆ ಒಳಗಾದ ಆ ಬ್ರಾಹ್ಮಣನನ್ನು ಬದುಕಿಸೆಂದು ಪ್ರಾರ್ಥಿಸಿದರು. ಒಡನೆ ಆ ಬ್ರಾಹ್ಮಣನು ನಿದ್ರೆಯಿಂದ ಎದ್ದಂತೆ ಕಣ್ತೆರೆದನು. ಆ ಸ್ಥಳದಿಂದ ಮುಂದೆ ಪ್ರಯಾಣಮಾಡಿ ಶ್ರೀರಂಗ ಕ್ಷೇತ್ರವನ್ನು ಸೇರಿ ಶ್ರೀರಂಗನಾಥ ಸ್ವಾಮಿಯನ್ನು ವಿವಿಧ ಕೀರ್ತನೆಗಳಿಂದ ಸ್ತುತಿಸಿ ತರುವಾಯ ಕೆಲವು ದಿವಸಗಳ ಪ್ರಯಾಣದಿಂದ ತಮ್ಮ ಪಂಚನದ ಕ್ಷೇತ್ರವನ್ನು ಸೇರಿದರು.

ಯಾತ್ರೆಯನ್ನು ತೀರಿಸಿಕೊಂಡು ಹಿಂದಿರುಗಿ ಬಂದ ಕೆಲವು ದಿನಗಳೊಳಗಾಗಿ ಅವರ ಸಹಧರ್ಮಿಣಿಯು ಪರಲೋಕಯಾತ್ರೆ ಮಾಡಿದರು. ಭೂತದಯಾಪರರಾಗಿದ್ದ ಆ ಮಹಾತ್ಮರು ತಮ್ಮ ಜೀವಮಾನದಲ್ಲಿ ತಮಗೆ ಅತಿಶಯ ಸಹಾಯಕರಾಗಿದ್ದ ಆ ತಮ್ಮ ಭಾರ್ಯೆಯ ವಿಷಯದಲ್ಲಿ ಬಹು ಅಭಿಮಾನವಿಟ್ಟುಕೊಂಡಿದ್ದರು. ಒಂದಾನೊಂದುವೇಳೆ ಆಕೆಯು ಮನೆಯಲ್ಲಿದ್ದ ಶಿಷ್ಯರನ್ನು ವಹಿಸಿಕೊಂಡು ತಮ್ಮ ಮುಂಗೋಪ ಸ್ವಭಾವವನ್ನು ತಿದ್ದಿ 'ಇಷ್ಟು ಪ್ರಾಜ್ಞರಾದ ತಾವು ಕೋಪವನ್ನು ಜಯಿಸಿ ಶಾಂತರಾಗಿರಬೇಕಲ್ಲವೆ?' ಎಂದು ವಿಜ್ಞಾಪಿಸಿಕೊಂಡಿದ್ದಳು. ಅದಕ್ಕೆ ರಾಜರು - 'ಹೌದು ಏನು ಮಾಡಲಿ! ಗಿಡದಲ್ಲಿ ಗುಲಾಬಿಯೂ ಮುಳ್ಳೂ ಒಟ್ಟಿಗೇ ತಾನೇ ಬೆಳೆಯುವುದು' ಎಂದರು. ಪತ್ನಿಯು ಅದಕ್ಕೆ ಪ್ರತ್ಯುತ್ತರವಾಗಿ- 'ನಿಜ, ಆದರೆ ಜನರು ಹೂವನ್ನು ಕಿತ್ತು ತಲೆಯಮೇಲಿಟ್ಟುಕೊಂಡು ಗೌರವಿಸುವರು. ಮುಳ್ಳನ್ನು ಕಿತ್ತು ತಿಪ್ಪೆಯಲ್ಲಿ ಬಿಸಾಡುವರಲ್ಲವೆ?' ಎಂದು ನುಡಿದಳು. ಮಾರ್ಮಿಕವಾದ ಈ ಮಾತು ಅವರ ಮನಸ್ಸಿಗೆ ತಟ್ಟಿ - ತಮ್ಮ ಪತ್ನಿಯನ್ನು ಅಭಿನಂದಿಸಿ ಅವರು ಒಡನೆ, 'ಶಾಂತಮು ಲೇಕ ಸೌಖ್ಯಮು ಲೇದು ಸಾರಸದಳನಯನ' ಎಂಬ ಕೃತಿಯನ್ನು ರಚಿಸಿ ಪಾಡಿ

ದರು. ಅದರಲ್ಲಿ ಅವರು ಪ್ರತಿಪಾದಿಸುವ ನೀತಿಯು ಎಷ್ಟು ಉದಾತ್ತ ವಾದುದೆಂಬುದನ್ನು ಗಮನಿಸಿರಿ.

## ಸಾಮ ಆದಿತಾಳ

ಪ. ಶಾಂತಮು ಲೇಕ ಸೌಖ್ಯಮು ಲೇದು ಸಾರಸದಳನಯನ ಶಾಂ.

ಅ. ದಾಂತುನಿ ಕೈನ ವೇದಾಂತುನಿ ಕೈನ ಶಾಂ.

೧. ದಾರಸುತುಲು ಧನ ಧಾನ್ಯಮುಲುಂಡಿನ
ಸಾರೆಕು ಜಪತಪ ಸಂಪದ ಕಲಿಗಿನ ಶಾಂ.

೨. ಆಗಮ ಶಾಸ್ತ್ರಮುಲನ್ನಿಯು ಚದಿವಿನ
ಬಾಗುಗ ಸಕಲ ಹೃದ್ಭಾವಮು ದೆಲಿಸಿನ ಶಾಂ.

೩. ಯಾಗಾದಿ ಕರ್ಮಮುಲನ್ನಿಯು ಜೇಸಿನ
ಭಾಗವತುಲನುಚು ಬಾಗುಗ ಪೇರ್ಕೈನ ಶಾಂ.

೪. ರಾಜಾಧಿರಾಜ ಶ್ರೀ ರಾಘವ ತ್ಯಾ - ಗ
ರಾಜ ವಿನುತ ಸಾಧು ರಕ್ಷಕ ತನಕುಪ ಶಾಂ.



# ಉ ಪ ಸ ಂ ಹಾ ರ

ಶ್ರೀ ತ್ಯಾಗರಾಜರಿಗೆ, ಎಂಭತ್ತೇಳು ವರ್ಷಗಳು ವಯಸ್ಸಾಗಿ ಪತ್ನಿಯೂ ಮೃತಳಾಗಿ ಅವರ ದೇಹಶಕ್ತಿಯು ಕುಗ್ಗುತ್ತಿದ್ದ ಕಾಲದಲ್ಲಿ ಒಂದು ದಿನ, ಶ್ರೀರಾಮಮೂರ್ತಿಯು ಮಾರು ರೂಪದಿಂದ ಅವರಿಗೆ ಪ್ರತ್ಯಕ್ಷನಾಗಿ 'ಭಕ್ತೋತ್ತಮಾ ನೀನಿನ್ನು ಹತ್ತು ತಿಂಗಳು ಭೂಮಿಯ ಮೇಲಿದ್ದು ತರುವಾಯ ಒಂದು ವೇಳೆ ಮರುಜನ್ಮವನ್ನೆತ್ತಿ, ಮೂರನೆಯ ಜನ್ಮದಲ್ಲಿ ಮುಕ್ತನಾಗಿ ವೈಕುಂಠಲೋಕವನ್ನು ಸೇರುವೆ' ಎಂದು ಹೇಳಿದಂತಾಯಿತಂತೆ! ತಮಗೆ ಮತ್ತೊಂದು ಜನ್ಮವು ಬರಲಿರುವುದೆಂಬುದನ್ನು ತಿಳಿದು ಬಹು ಭಯಗ್ರಸ್ತರಾದ ಅವರು, ಶ್ರೀರಾಮನನ್ನು ಹಲವು ಬಗೆಯಿಂದ ಪ್ರಾರ್ಥಿಸಿ ಜನ್ಮ ಮರಣಗಳ ಬಾಧೆಯಿಂದ ತಪ್ಪಿಸೆಂದು ಬೇಡಿಕೊಳ್ಳುತ್ತಿದ್ದರು. ಹೀಗೆ ಒಂಬತ್ತು ತಿಂಗಳೂ ಇಪ್ಪತ್ತೆರಡು ದಿನಗಳು ಕಳೆದ ತರುವಾಯ ಒಂದು ದಿನ ಪುನಃ ಶ್ರೀರಾಮನು ನಿಜರೂಪದಿಂದ ತೋರಿ-'ಭಕ್ತವರಾ ನಿನ್ನ ಭಕ್ತಿ ಜ್ಞಾನ ವೈರಾಗ್ಯಗಳಿಗಾಗಿ ಅತಿಶಯ ಮೆಚ್ಚಿಕೊಂಡಿದ್ದೇನೆ. ನೀನು ಒಡನೆ ಸನ್ಯಾಸವನ್ನು ತೆಗೆದುಕೋ! ನಿನಗಿನ್ನು ಜನ್ಮ ಪ್ರಾಪ್ತಿಯಾಗದು. ಇಂದಿಗೆ ಹತ್ತನೆಯ ದಿನದಲ್ಲಿ ಭೌತಿಕ ದೇಹವನ್ನು ನೀಗಿ ನನ್ನ ಸಾಯುಜ್ಯವನ್ನು ಸೇರುವೆ' ಎಂದು ಆಜ್ಞಾಪಿಸಿದನು. ಶ್ರೀ ತ್ಯಾಗರಾಜರು ಪರಮಾನಂದ ಸ್ವಾಂತರಾಗಿ ಒಡನೆ ವೇದವಿಧಿಯನ್ನನುಸರಿಸಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ-ತಮ್ಮ ಶಿಷ್ಯರಿಗೂ ಆಶ್ರಿತರಿಗೂ ಹೇಳಬೇಕಾದ ಹಲವು ಬುದ್ಧಿವಾದಗಳನ್ನು ಹೇಳಿ-ಶ್ರೀರಾಮಭಕ್ತಿ ಬೀಜಗಳನ್ನು ಜಗತ್ತಿನಲ್ಲಿ ಬಿತ್ತಿರೆಂದು ಸಂದೇಶವನ್ನಿತ್ತು, ಶಾ. ಶ. ೧೭೬೮ನೆಯ ಪರಾಭವ ಸಂ|| ಕ್ಕೆ ಸರಿಯಾದ ಕ್ರಿ. ಶ. ೧೮೪೭ನೆಯ ಸಂವತ್ಸರದ ಪುಷ್ಯ ಬಹುಳ ಪಂಚಮಿಯ ದಿನ ತಮ್ಮ ೮೮ನೆಯ ವಯಸ್ಸಿನಲ್ಲಿ ಆ ಕ್ಷೇತ್ರವಾಸಿಗಳಾದ ಹಲವುಮಂದಿ ಶ್ರದ್ಧಾಳುಗಳು ಕಲೆತು ಸುತ್ತಲೂ ಶ್ರೀರಾಮನಾಮ ಘೋಷ ಮಾಡುತ್ತಿರುವಲ್ಲಿ ದೇಹವನ್ನು ನೀಗಿ ಶ್ರೀರಾಮ ಸಾಯುಜ್ಯವನ್ನು ಪಡೆದರು.

ಶ್ರೀ ತ್ಯಾಗರಾಜರು ಶ್ರೀರಾಮಭಕ್ತಿ ಮಹಿಮೆಯನ್ನು ವರ್ಣಿಸುವ ಅಸಂಖ್ಯ ಕೀರ್ತನೆಗಳನ್ನು ಪಾಡಿದರು. ತಾರಕಮಂತ್ರ ಜಪಸಿದ್ಧಿಯನ್ನು

ಪಡೆದು, ತರುವಾಯ ದಿನಕ್ಕೆ ಒಂದೊಂದರಂತೆ ಕೀರ್ತನೆಗಳನ್ನು ರಚಿಸುತ್ತಿದ್ದ ರೆಂದು ಪ್ರತೀತಿಯುಂಟು. ಆದರೆ ಈಗ ಅವುಗಳಲ್ಲಿ ೫೦೦ ಕೀರ್ತನೆಗಳು ಮಾತ್ರವೇ ಅವರದೆಂದು ಅರಿಸಿ ಪ್ರಕಟಿಸಲ್ಪಟ್ಟಿವೆ. ಅವರ ಕಾಲದಲ್ಲೇ ಅವರಿಂದ ಶಿಕ್ಷಿತರಾದ ಹಲವುಮಂದಿ ಶಿಷ್ಯರು ಅವುಗಳನ್ನು ದಾಕ್ಷಿಣಾತ್ಯ ಸಂಗೀತಕ್ಕೆ ತಳಹದಿಗಳಂತಿರುವ ದಿವ್ಯ ನಾಮಾವಳಿ, ರಾಗ ರತ್ನಮಾಲಿಕಾ, ಭಕ್ತ ವಿಜಯ ನೌಕಾಚರಿತ್ರಂ ಮತ್ತು ಪಂಚರತ್ನಗಳು ಎಂಬ ಹೆಸರಿನಿಂದ ಶೇಖರಿಸಿ ಪ್ರಕಟಿಸಿ ತಮ್ಮ ಗುರುಗಳ ಕೀರ್ತಿಯನ್ನು ಚಿರಸ್ಥಾಯಿಯನ್ನಾಗಿಸಿದರು.

ಶ್ರೀ ತ್ಯಾಗರಾಜರ ಸಮಾಧಿಯು ತಿರುವೈಯಾರಿನ ಬಳಿ ಕಾವೇರೀ ತೀರದಲ್ಲಿ ಸ್ಥಾಪಿಸಲ್ಪಟ್ಟಿದೆ. ಅಲ್ಲಿ ಪ್ರತಿವರ್ಷದ ಪುಷ್ಯ ಬಹುಳ ಪಂಚಮಿಯಲ್ಲಿ ಅಶೇಷ ಸಂಗೀತ ಸಾಹಿತ್ಯ ವಿದ್ವಾಂಸರೂ ನೆರೆದು ಶ್ರೀಯವರ ದಿವ್ಯ ಮಹಿಮೆಯನ್ನು ಪಾಡಿ ಪೊಗಳಿ ಅತಿಶಯ ಭಕ್ತ್ಯುತ್ಸಾಹಗಳಿಂದ ಆರಾಧನೆಯನ್ನು ನಡಿಸುತ್ತಿರುವರು. ಕೇವಲ ಬಡತನ ಸ್ಥಿತಿಯಲ್ಲೇ ಜನಿಸಿದರೂ, ಐಹಿಕ ಸುಖಾದಿಗಳಿಗೆ ಮರುಳಾಗದೆ, ಈಷ್ಣಾತ್ರಯಗಳ ಬಂಧನಕ್ಕೆ ಸಿಕ್ಕದೆ, ಶ್ರೀರಾಮಚಂದ್ರ ಮೂರ್ತಿಯ ಪಾದಾರವಿಂದಗಳಲ್ಲಿ ಅಖಂಡ ಭಕ್ತಿ ಭಾಗ್ಯವನ್ನು ಗಳಿಸಿಕೊಂಡು, ಶ್ರೀ ವಾಲ್ಮೀಕಿ, ತುಲಸೀದಾಸ, ಕಬೀರದಾಸ ಪುರಂದರಾದಿ ದಾಸಶ್ರೇಷ್ಠರಂತೆ ಭಾರತೀಯ ಭಕ್ತಾಕಾಶದಲ್ಲಿ ನಕ್ಷತ್ರ ಸ್ವರೂಪಿಯಾಗಿ ರಾಜಿಸುತ್ತಿರುವ **ಶ್ರೀ ತ್ಯಾಗರಾಜರ** ಈ ದಿವ್ಯ ಜೀವಿತವು ಕರ್ಣಾಟಕ ಪಾಠಕರಿಗೆ ಶ್ರೀರಾಮಮೂರ್ತಿಯ ಪಾದ ಕಮಲಗಳಲ್ಲಿ ನಿರಂತರ ಭಕ್ತಿ ಭಾಗ್ಯವನ್ನು ಪ್ರಸಾದಿಸಲಿ-ಸಕಲರೂ ಭಾರತೀಯ ಕಲೆ ಕವಿತೆಗಳಲ್ಲಿ ಅನುಪಮ ಶ್ರದ್ಧೆ ಅಭಿಮಾನಗಳನ್ನು ಗಳಿಸಿ ಅವುಗಳ ಅಭ್ಯಾಸಪೂರ್ವಕ ದಿನದಿನಕ್ಕೆ ಅವುಗಳ ಗೌರವವನ್ನು ಹೆಚ್ಚಿಸಿ ಮಾತೃದೇಶ ಸೇವಾ ತತ್ಪರರಾಗಲು ಪ್ರಯತ್ನಿಸಲಿ! ಶ್ರೀರಾಮನು ಅದಕ್ಕೆ ಅವಶ್ಯಕವಾದ ಶ್ರದ್ಧಾ ಭಕ್ತಿಗಳನ್ನಿತ್ತು ರಕ್ಷಿಸಲಿ.

**ತಥಾಸ್ತು.**

